

ಮೊರಾರ್ಜಿ: ೨೫ ಹುಟ್ಟುಹಬ್ಬಗಳ ಶತಾಯುಷಿ!

ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಏಪ್ರಿಲ್ ೧೯೯೫ ● ಬೆಲೆ: ರೂ. ೬-೦೦

ಆರೋಗ್ಯದಂಗಳ

ನಿದ್ರೆ ಮತ್ತು ಕನಸುಗಳು



## ಪೈಪೋಟಿ



( 'ಸ್ಪುಟ್ನಿಕ್' ಪತ್ರಿಕೆಯಿಂದ)



# ಕಸ್ತೂರಿ

ಕನ್ನಡ ಡೈಜೆಸ್ಟ್

ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಕೊಲ್ಯಾಜ್
ಚಿತ್ರಕೃಪೆ: 'ಸ್ವಾನ್' ಪತ್ರಿಕೆ

ಮೊರಾರ್ಜಿ:
ಚಿತ್ರ: ಪ್ರಹ್ಲಾದ ಕಲಕೋಟಿ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦ ೦೨೦.

# ಚಿಂತನ

ಹುಟ್ಟು-ಸಾವುಗಳ ನಡುವಿನ ಅವಧಿ ಮಾತ್ರ ಬದುಕಲ್ಲ. ಅಥವಾ ದುಡಿದು, ಗಳಿಸಿ, ಉಂಡುಟ್ಟು, ಸುಖವಾಗಿ ಮಲಗಿ ಹೊಂಗನಸ ಕಾಣುತ್ತಲಿರುವುದೇ ಜೀವನವಲ್ಲ.

ತಾನು ಜಾಗೃತನಾಗಿದ್ದು ಇತರರನ್ನೂ ಜಾಗೃತಗೊಳಿಸುವ ಜವಾಬ್ದಾರಿ ಪ್ರತಿಯೊಬ್ಬನ ಹೆಗಲಮೇಲಿನ ಹೊರೆ.

ಆದರೆ ಈ ಜಾಗೃತಿ ಎನ್ನುವುದು ಸುಮ್ಮನೇ ಬರುವಂಥದಲ್ಲ. ಅದಕ್ಕೆ ಹತ್ತಾರು ರೀತಿಯ ಸಾಧನೆಯ ಅಗತ್ಯವೂ ಇರುತ್ತದೆ.

"ಸಾಧನೆ ಸದಾಕಾಲಕ್ಕೂ ತ್ಯಾಗದಿಂದ ಮಾತ್ರ ಸಾಧ್ಯ. ಸ್ವಯಂಶಿಸ್ತು ಬೆಳೆಸಿಕೊಂಡರೆ ಸದ್ಭಾವ ತಂತಾನೇ ಮೈಗೂಡುತ್ತದೆ. ಸದ್ಭಾವ ಮೈಗೂಡಿದರೆ ಶಾಂತಿ ನೆಲೆಸುತ್ತದೆ. ಶಾಂತಿ ಇರುವೆಡೆಯಲ್ಲಿ ಹಿಂಸೆ ತಲೆಹಾಕಲೂ ಹಿಂಜರಿಯುತ್ತದೆ," ಎಂಬುದು ನೂರರ ಹಿರಿಯ ಮೊರಾರ್ಜಿಯವರ ಸಿದ್ಧಾಂತ. ಇದು ಕೇವಲ ಅವರ ಗಂಟಲಿನಿಂದ ಈಚೆಗೆ ಜಿಗಿದು ಬಂದ ಪದಪುಂಜವಲ್ಲ. ಅವರ ಹೃದಯದಾಳದಿಂದ ಚಿಮ್ಮಿದ ಅನುಭವ ಕಾರಂಜಿ. ಹಾಗೆಂದ ಮಾತ್ರಕ್ಕೆ ಅದು ಕೇವಲ ಉಪದೇಶದ ಮಾತಲ್ಲ. ಅವರು ಬುದ್ಧಿ ತಿಳಿದಾಗಿನಿಂದ ಆಚರಿಸಿಕೊಂಡು ಬರುತ್ತಿರುವ ಆದರ್ಶ. ಉಪ್ಪು-ಹುಳಿ-ಖಾರಗಳನ್ನು ವರ್ಜಿಸಿ, ಮಸಾಲೆ - ವ್ಯಂಜನಗಳನ್ನು ತ್ಯಜಿಸಿ, ಸಾತ್ವಿಕ ಆಹಾರ-ವಿಹಾರ, ಆಚಾರ-ವಿಚಾರಗಳನ್ನು ರೂಢಿಸಿಕೊಂಡ ಮೊರಾರ್ಜಿ ಅಧಿಕಾರದಿಂದ ಯಾವುದೇ ಕಳಂಕವಿಲ್ಲದೆ ಇಳಿದು ಬಂದ ನಿಸ್ಪೃಹಿ. ಅವರ ಮಗ ಕಾಂತಿಭಾಯಿಯ ಮೇಲೆ ಅನೇಕ ಆಪಾದನೆಗಳು ಬಂದವು ನಿಜ. "ಆದರೆ ಅವುಗಳು ಸಿದ್ಧವಾಗಿದ್ದರೆ ಆತನೊಡನೆ ಒಂದೇ ಸೂರಿನಡಿ ಬದುಕಲು ನಿರಾಕರಿಸಿ ನನ್ನ ಪಾಡಿಗೆ ನಾನು ಬೇರೆಡೆ ವಾಸಿಸಲೂ ಹಿಂದೆ ಮುಂದೆ ನೋಡುವವನಲ್ಲ ನಾನು" ಎಂದು ಹೇಳುವಷ್ಟರ ಮಟ್ಟಿಗಿನ ದೃಢಮನಸ್ಕ ಮೊರಾರ್ಜಿ.

"ಭಾರತಕ್ಕೆ ಒಳ್ಳೆಯ ದಿನಗಳು ಬರಲಿವೆ" ಎಂಬುದು ಅವರ ನಂಬಿಕೆ. ಅದು ನಿಜವಾಗಬೇಕು. ಆ ಒಳ್ಳೆಯ ದಿನಗಳನ್ನು ಅವರೊಂದಿಗೆ ನೋಡುವ ಸೌಭಾಗ್ಯ ನಮ್ಮದಾಗಬೇಕು.

• ವ್ಯವಸ್ಥಾಪಕ ಸಂಪಾದಕ




**ಪವಿತ್ರ ಸ್ನಾನದ ಪರಮ ಸಂಕಟಗಳು...**

ಸುಪ್ರಸಿದ್ಧ ಬದಾಮಿಯ "ಮೇಣದ ಬಸದಿಗೆ" ಸಮೀಪದಲ್ಲಿಯೇ ಒಂದು ಪವಿತ್ರ ಸ್ನಾನದ ಹೊಂಡ ಇದ್ದು ಎಷ್ಟೋ ವರ್ಷಗಳ ಹಿಂದೆ ಆ ಹೊಂಡದಲ್ಲಿ ಒಮ್ಮೆ ಸ್ನಾನ ಮಾಡಿದರೆ ಕುಷ್ಟರೋಗವು ನಿವಾರಣೆಯಾಗುತ್ತಿತ್ತಂತೆ. ಅಂದರೆ ಆ ನೀರಿನಲ್ಲಿ ಆಗ ಯಾವದೋ ಅಂಥ ಶಕ್ತಿ ಇದ್ದಿರಬಹುದು ಆದರೆ ಈಗ ಹಾಗೆ ತಿಳಿದುಕೊಂಡು ನಾವೇನಾದರೂ ಒಮ್ಮೆ ಆ ಹೊಂಡದಲ್ಲಿ ಮುಳುಗೆದ್ದರೆ "ಕುಷ್ಟರೋಗ ಹತ್ತುವದಂತೂ ಗ್ಯಾರಂಟಿ" ಎಂದು ಗೈಡುಗಳೇ ಹೇಳುತ್ತಾರೆ.

ನಿಲೋಗಲ್ — ಶಿವರಾ ಕರಡಿ

ಮಾರ್ಚ್ ೯೫ರ 'ಕಸ್ತೂರಿ'ಯ ಆರೋಗ್ಯದಂಗಳ ವಿಭಾಗದಲ್ಲಿ ಪ್ರಕಟವಾದ ಪವಿತ್ರ ಸ್ನಾನದ ಪರಮ ಸಂಕಟಗಳು ಎಂಬ ಡಾ. ಬಿ.ಬಿ. ಪಾಟೀಲ ಅವರ ಬರಹ ಓದಿ ಅತೀವ ಮಾನಸಿಕ ಉದ್ವೇಗಕ್ಕೊಳಗಾದೆ. ಪಾಪ ಆ ರೋಗಿಗಳ ಪಾಡು ಅದೇನಾಗಿರಬಹುದು? ಸಕಾಲಕ್ಕೆ ಇಂತಹ ಮಾಹಿತಿಪೂರ್ಣ ಲೇಖನಗಳನ್ನು ಪ್ರಕಟಿಸಿ, ಜನರಲ್ಲಿ ಆರೋಗ್ಯದ ಬಗ್ಗೆ ಜಾಗೃತಿ ಮೂಡಲು ಸಹಾಯ ಮಾಡುತ್ತಿರುವ ಕಸ್ತೂರಿಗೆ ಕೋಟಿ ನಮನಗಳನ್ನು ಸಲ್ಲಿಸಿದರೂ ಸಾಲದು.

ಕಲ್ಕೆರೆ — ಜಿ. ಗಾಯತ್ರಿ, ಕುಂಬ್ರಿಮನೆ

ಪವಿತ್ರ ಸ್ನಾನದ ಪರಮ ಸಂಕಟಗಳು (ಮಾರ್ಚ್ ೯೫) ರ್ಹಿನೋಸ್ಪೊರಿಡಿಯಾಸಿಸ್ ಎಂಥಾ ಭಯಂಕರ ಖಾಯಿಲೆ ಎನಿಸಿದಾಗ, ಲೇಖನ ಓದಿದಾಗಲೇ ಭಯದಿಂದ ಜೀವ ತತ್ತರಿಸಿ ಬಿಡುತ್ತದೆ. ಹದಿನೈದು ವರುಷಗಳಿಂದಲೂ ರೋಗಿಯಾತನನ್ನುಭವಿಸುತ್ತಿದ್ದಾನೆಂದರೆ ಊಹಿಸಲೂ ಅಸಾಧ್ಯ.

ಬೆಂಗಳೂರು — ವೈ.ಎನ್. ಗುಂಡೂರಾವ್

ಪವಿತ್ರ ಸ್ನಾನದ ಪರಮ ಸಂಕಟಗಳು ಲೇಖನ ಓದುತ್ತಿದ್ದಂತೆ, ಕೆರೆ ಹಾಗೂ ಹೊಳೆಗಳಲ್ಲಿ ಸ್ನಾನ ಮಾಡುವ ಹವ್ಯಾಸವಿರುವ ನನಗೆ ರಕ್ತ ಸಂಚಾರವೇ ನಿಂತಂತಹ ಅನುಭವವಾಯಿತು.

ಮಾಳೇನಹಳ್ಳಿ — ಎಂ.ಆರ್. ಧನಂಜಯ

**ಗಳಗನಾಥರ ಸ್ಮರಣೆ**

ಬೆಟಗೇರಿ ಕೃಷ್ಣಶರ್ಮರು ಕಂಡಂತೆ ಗಳಗನಾಥರನ್ನು ಪರಿಚಯಿಸಿದ ಮಾರ್ಚ್ ಸಂಚಿಕೆ ಮನೆ ಮಂದಿಗೆಲ್ಲ ಮುದ ನೀಡಿತು. ಕನ್ನಡಿಗರಿಗೆ ವಾಚನಾಭಿರುಚಿಯನ್ನು ಹೆಚ್ಚಿಸಿ, ಕಾದಂಬರಿಗಳ ಸುಗ್ಗಿಯನ್ನೂ, ಪ್ರಕಟನೆಯಲ್ಲಿ 'ಧಾರಾವಾಹಿ' ಪರಂಪರೆಯನ್ನೂ ತಂದು ಕೊಟ್ಟ ಹಿರಿಯ ಸಾಹಿತಿ ಗಳಗನಾಥರು ನಮಗೆಲ್ಲ ಪ್ರಾತಃಸ್ಮರಣೀಯ.

ಬೆಳಗಾವಿ — ಶ್ರೀದೇವಿ ಮರಿಗೇರಿ

ಕನ್ನಡದಲ್ಲಿ ಸಾಕಷ್ಟು ಪುಸ್ತಕಗಳೇ ಇಲ್ಲದಿದ್ದ ಪರಿಸ್ಥಿತಿಯಲ್ಲಿ ದಿನ ಬಳಕೆಯ ವಸ್ತುಗಳನ್ನು ಹೊತ್ತು ಮಾರುವಂತೆ ತಲೆಯ ಮೇಲೆ ಪುಸ್ತಕಗಳನ್ನು ಹೊತ್ತು ಮಾರುವ ಮೂಲಕ ಅನೇಕರ ಜ್ಞಾನ ದಾಹವನ್ನು ತಣಿಸಿ ಪುಸ್ತಕಗಳ ಮಾರಾಟವನ್ನು ಪುಸ್ತಕೋದ್ಯಮಕ್ಕೆ ತಿರುಗಿಸಿದ ಪೂಜ್ಯ ಗಳಗನಾಥರು ಪುಸ್ತಕೋದ್ಯಮದ ಪಿತಾಮಹರೆಂದರೆ ತಪ್ಪಾಗಲಿಕ್ಕಿಲ್ಲ.

ಬೆಳಗಾವಿ — ಪ್ರಿ. ನಾಗರಾಜ ಹೀರಾ

ಪಾಂಡಿತ್ಯದ ಸಮುದ್ರವೇ ಆಗಿದ್ದ ಗಳಗನಾಥರ ಕುರಿತ ಲೇಖನ ಸಂಗ್ರಹಯೋಗ್ಯ. ಅವರು ಬಡವರಿಗಾಗಿ, ಧರ್ಮಕಾರ್ಯಗಳಿಗಾಗಿ ಮಾಡಿದ ವೆಚ್ಚ ಅವರ ಉದಾರ ಗುಣವನ್ನು ಎತ್ತಿ ತೋರಿಸುತ್ತದೆ.

ಹುನಗುಂದ — ಮಹಾಂತೇಶ ರ. ಸುರಪೂರ

ಬೆಟಗೇರಿ ಕೃಷ್ಣಷರ್ಮರು ಗಳಗನಾಥರ ಕತೃತ್ವ ಶಕ್ತಿಯನ್ನು ಹಂತಹಂತವಾಗಿ ರೂಪಿಸಿ ತೋರಿಸಿದ್ದಾರೆ. ಇಂಥ ಒಬ್ಬ ಅದಮ್ಯ ಚೇತನದ ವ್ಯಕ್ತಿ ನಮ್ಮ ನಾಡಿನಲ್ಲಿ ಉದಯಿಸಿದ್ದರೆಂಬುದೇ ನನಗೆ ೧೯೭೬ರವರೆಗೆ ಗೊತ್ತಿರಲಿಲ್ಲ. ಆ ವರ್ಷದಲ್ಲಿ, ಅವರ ಜನ್ಮ ಶತಾಬ್ದಿಯನ್ನು ಮೈಸೂರು ವಿ.ವಿ. ನಿಲಯದ ಕನ್ನಡ ಅಧ್ಯಯನ ಸಂಸ್ಥೆ ಆಚರಿಸಿದಾಗ, ಎಂ.ಎ. ವಿದ್ಯಾರ್ಥಿ ಆಗಿದ್ದ ನಾನು ಪಿಳಿಪಿಳನೆ ಕಣ್ಣು ಬಿಟ್ಟುಕೊಂಡು ಗಳಗನಾಥರನ್ನು ಕುರಿತು ಕೇಳಿದೆ. ಅವರ ವ್ಯಕ್ತಿತ್ವ, ಕೃತಿ

ವಿಮರ್ಶೆ ಇವುಗಳನ್ನು ಆಲಿಸಿದೆ. ಇಂಥ, ಕನ್ನಡದ ಒಬ್ಬ ಮಹಾನ್ ಸಾಹಸಿಯ ಪರಿಚಯ ದಕ್ಷಿಣ ಕರ್ನಾಟಕದ ಜನತೆಗೆ ಇನ್ನೂ ಅಷ್ಟಾಗಿ ಆಗದಿರುವುದು ನಿಜಕ್ಕೂ ಬೇಸರದ ಸಂಗತಿ. ಈ ಕೊರತೆಯನ್ನು ಕಸ್ತೂರಿ ತುಂಬಲು ಪ್ರಯತ್ನಿಸಿರುವುದು ಅಷ್ಟೇ ಸಮಾಧಾನಕರ ಸಂಗತಿ.

**ಮೈಸೂರು** **ಎಚ್.ಆರ್. ದೊರೆಸ್ವಾಮಿ**

### "ಯಶಸ್ಸು ಕನಸಲ್ಲ"

ಮಾರ್ಚ್ ೧೯೯೫ರ 'ಕಸ್ತೂರಿ' ಸಂಚಿಕೆಯ 'ಪುಸ್ತಕ ವಿಭಾಗ'ದಲ್ಲಿ ಪ್ರಕಟಗೊಂಡ 'ವಿದ್ಯಾರ್ಥಿಗಳೇ ಯಶಸ್ಸು ಕನಸಲ್ಲ!' ಎಂಬ ಪುಸ್ತಕವು ಬಹು ಉಪಯುಕ್ತ ಮಾಹಿತಿಯನ್ನೊದಗಿಸಿತು. ನನ್ನ ಪರೀಕ್ಷೆಯ ಎಡರುತೊಡರುಗಳನ್ನು ಕಿತ್ತೆಸೆಯಲು ಸಹಾಯ ಮಾಡಿತು. ಇದು ಅತ್ಯುತ್ತಮವಾದ ಲೇಖನವಲ್ಲದೆ ಸಂಗ್ರಹಯೋಗ್ಯವಾದದ್ದಾಗಿದೆ.

**ಮುಳವಾಡ** **ಚಂದ್ರಶೇಖರ ಸಿ.ಎಸ್.**

(ಈ ಸಂಗ್ರಹದಿಂದ ಪ್ರಯೋಜನ ಪಡೆದ ಐದುನೂರಕ್ಕೂ ಹೆಚ್ಚು ಜನ ನಮಗೆ ಪತ್ರ ಬರೆದಿದ್ದಾರೆ.

ಸಂ.)

### ಪಟ್ಟ ಯಾರಿಗೆ?

'ಮಸಾಲೆ ರಾಣಿ" ಜೀರಿಗೆ 'ಕಸ್ತೂರಿ ಮಾರ್ಚ್ ೧೯೯೫ರ' ಲೇಖನದಲ್ಲಿ ಪ್ರೊ ಎನ್. ಆರ್. ಆಡೂರ ಅವರು ಜೀರಿಗೆಯನ್ನು 'ಮಸಾಲೆ ರಾಣಿ" ಎಂದಿದ್ದಾರೆ. ಆದರೆ ಕೃಷಿಯಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಯಾಗಿರುವ ನನಗೆ ತಿಳಿದಂತೆ ಜೀರಿಗೆ ಮಸಾಲೆ ರಾಣಿ'ಯಲ್ಲ. ಬದಲಿಗೆ ಏಲಕ್ಕಿಯನ್ನು ಮಸಾಲೆರಾಣಿ'ಯೆಂದು ಕರೆಯಲಾಗುತ್ತಿದೆ.

**ಬೆಂಗಳೂರು** **ಹನುಮಂತಪ್ಪ ರಾಮನಗೌಡರ**

''ಮಸಾಲೆ ರಾಣಿ'" ಜೀರಿಗೆಯ ಕುರಿತಾದ ಬರಹ ತುಂಬಾ ಉಪಯುಕ್ತ. ಜೀರಿಗೆ ಆರೋಗ್ಯಕ್ಕೆ ಇಷ್ಟೊಂದು ಒಳ್ಳೆಯದು ಎಂದು ನನಗೆ ಗೊತ್ತಿರಲಿಲ್ಲ

**ಮೋಟೆಬೆನ್ನೂರು** **ರಾಘವೇಂದ್ರ ಮಳಲಿ**

### 'ಸಂಜೆಗಣ್ಣಿನ ಹಿನ್ನೋಟ'ವೇ ಸರಿ

ಕಸ್ತೂರಿಯ ಫೆಬ್ರುವರಿ, ೧೯೯೫ರ ಸಂಚಿಕೆಯಲ್ಲಿ ''ಅಚ್ಚಳಿಯದ ಪುಟಗಳು" ವಿಭಾಗಕ್ಕೆ ನಾನು ಸಂಗ್ರಹಿಸಿದ್ದು ಎ.ಎನ್.ಮೂರ್ತಿರಾವ್, ಅವರ 'ಸಂಜೆಗಣ್ಣಿನ ಹಿನ್ನೋಟ ಪುಸ್ತಕದಿಂದಲ್ಲ; 'ದೇವರು' ಪುಸ್ತಕದಿಂದ ಎಂಬುದಾಗಿ ಡಾ.ಯಲಗುರೇಶ ಸಂಕನಾಳ ಅವರು ಪ್ರತಿಕ್ರಿಯಿಸಿದ್ದಾರೆ. ದಯವಿಟ್ಟು ಅವರು ''ಸಂಜೆಗಣ್ಣಿನ ಹಿನ್ನೋಟ" ಪುಸ್ತಕ (ಎರಡನೆಯ ಮುದ್ರಣ)ದ ೧೪೫, ೨೦೩, ೨೦೪ನೇ ಪುಟಗಳನ್ನು ಮತ್ತೊಮ್ಮೆ ಓದಬೇಕೆಂದು ಕೋರುತ್ತೇನೆ.

**ಬೆಂಗಳೂರು** **ಕ.ಬೋ. ಚಿಕ್ಕೇಗೌಡ**

### ತ್ಯಾಗಮಯಿ?

ಫೆಬ್ರುವರಿ ೧೯೯೫ರ 'ಕಸ್ತೂರಿ'ಯ ಪುಸ್ತಕ ವಿಭಾಗದಲ್ಲಿ ಅಲೆಕ್ಸಾಂಡರ್‌ರವರು ತಮ್ಮ ಸ್ವಾಮಿ ನಿಷ್ಠೆಯನ್ನು ಎತ್ತಿತೋರಿಸಿದ್ದಾರೆ. ಇಂದಿರಾಗಾಂಧಿಯವರು ತಮ್ಮ .ಆರ್ಥಿಕ ತತ್ವ, ಧೋರಣೆಗಳಿಗೆ ಅನುಗುಣವಾಗಿ ಬ್ಯಾಂಕ್‌ಗಳನ್ನೂ ಉದ್ಯಮಗಳನ್ನೂ ರಾಷ್ಟ್ರೀಕರಿಸಿದರು. ಈಗ ನೂರಕ್ಕೆ ೫೦ ರಾಷ್ಟ್ರೀಕೃತ ಉದ್ಯಮಗಳು ಮತ್ತು ಬ್ಯಾಂಕ್‌ಗಳು ನಷ್ಟ ಅನುಭವಿಸಿ ಮುಚ್ಚುವ ಹಾದಿಯಲ್ಲಿವೆ. ೧೯೮೨ರಲ್ಲಿ ದೇಶದ ವಿಧಾನಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಸೋಲು ಅನುಭವಿಸಿದ ನಂತರ ಪ್ರಧಾನಮಂತ್ರಿಯವರು ತಮ್ಮ ಪದವಿಯನ್ನು ಹಸ್ತಾಂತರಿಸಿ ರಾಷ್ಟ್ರಾಧ್ಯಕ್ಷೆ ಆಗ ಬಯಸಿದ್ದನ್ನು "ತ್ಯಾಗಮಯಿ" ಎಂದು ಪಿ.ಸಿ. ಅಲೆಕ್ಸಾಂಡರ್ ಬರೆದಿದ್ದಾರೆ. ಈ ನಿರ್ಧಾರ ಎಷ್ಟು ಸ್ವಾರ್ಥಪರವಾಗಿತ್ತು ಎನ್ನುವುದು ಬುದ್ಧಿವಂತರಿಗೆ ಅರ್ಥವಾಗದೇ ಇಲ್ಲ. ಅವರು ಅಧಿಕಾರ ಹಸ್ತಾಂತರಿಸಿದ್ದರೆ ಮೂರನೆಯವರಿಗೆ ವಹಿಸುತ್ತಿರಲಿಲ್ಲ. ತಮ್ಮ ಮಗನಾದ ರಾಜೀವಗಾಂಧಿಗೆ ವಹಿಸಿ ತಮ್ಮ ಮಗ ಪ್ರಧಾನ ಮಂತ್ರಿಯಾಗಿ ಮೆರೆಯುವುದನ್ನು ತಾವು ರಾಷ್ಟ್ರಾಧ್ಯಕ್ಷೆಯಾಗಿದ್ದುಕೊಂಡು ನೋಡಿ ಸಂತೋಷಪಡಬೇಕೆಂದು ಇದ್ದರು. ಜನತಾ ಸರ್ಕಾರದಲ್ಲಿ ಒಳಜಗಳ ಇತ್ತೇ ಹೊರತು ದೇಶವು ಸುಭಿಕ್ಷ, ಶಾಂತಿ ಸಾಮರಸ್ಯಗಳಿಂದ ಇತ್ತು. ಇಂದಿರಾ ಗಾಂಧಿಯವರಲ್ಲಿ ದಬ್ಬಾಳಿಕೆ, ಸರ್ವಾಧಿಕಾರತ್ವ, ಮುಂತಾದವುಗಳು ಅಲೆಕ್ಸಾಂಡರ್‌ರವರಿಗೆ ಕಾಣಲಿಲ್ಲವೆಂದು ಕಾಣುತ್ತದೆ.

**ಶ್ರೀರಂಗಪಟ್ಟಣ** **ವಾಸುದೇವ**

ಫೆಬ್ರುವರಿ ತಿಂಗಳ ಸಂಚಿಕೆ ಓದುತ್ತಿದ್ದಂತೆ ಕಣ್ಣೀರು ಬಂತು. ರಾಷ್ಟ್ರದ ಧೀಮಂತ ನಾಯಕಿಯಾದ ದಿವಂಗತ 'ಶ್ರೀಮತಿ ಇಂದಿರಾ ಗಾಂಧಿ ಜೊತೆಗಿನ ನನ್ನ ವರ್ಷಗಳು' ಪುಸ್ತಕ ಸಂಗ್ರಹ ಬಹಳ ಚೆನ್ನಾಗಿತ್ತು. ಈ ಲೇಖನದಲ್ಲಿ ಮತ್ತೊಂದು ವಿಶೇಷತೆಯನ್ನು ನೋಡಬಹುದು, ಅದೇನೆಂದರೆ ಎಂ.ಜಿ.ಆರ್. ಹಾಗೂ ಇಂದಿರಾ ಅವರ ಬಾಂಧವ್ಯ. ಹಾಗೆಯೇ ಅಲೆಗ್ಸಾಂಡ್‌ರ್‌ಗೆ ಅವರು ಬರೆದ ಪತ್ರವನ್ನು ಓದಿದಾಗ ಅಂತಹ ಒಬ್ಬ ರಾಷ್ಟ್ರನಾಯಕಿ ಬಿಡುವು ಮಾಡಿಕೊಂಡು ಅಭಿನಂದನಾ ಪತ್ರ ಕಳುಹಿಸಿರುವುದು ಅವರ ಸೌಜನ್ಯ ತೋರಿಸುತ್ತದೆ. ಇನ್ನೊಂದು ವಿಶೇಷತೆಯೆಂದರೆ

(ಆರನೇ ಪುಟಕ್ಕೆ)



# ಅಂತರಂಗ

೮



೨೭





ಪುಸ್ತಕ ವಿಭಾಗ

೧೧೭

## ಸಾಕ್ಷಿ

(ಕಿರುಕಾದಂಬರಿ)

• 'ಗಂಗಾ' ಪಾದೇಕಲ್



ಆರೋಗ್ಯದಂಗಳ

ನಿದ್ರೆ ೧೪೫
ಮತ್ತು
ಕನಸುಗಳು

● ಡಾ. ಪ್ರಕಾಶ ಕೊಣ್ಣೂರ

## ಬೆಳಕಿಂಡಿ

ನಮ್ಮ ಜೀವನ ಎನ್ನುವುದು ಅನುಭವಗಳ ಪರಂಪರೆ ಮತ್ತು ಅದರಿಂದ ಒದಗುವ ಪರಿಪಾಕ.

- ಡಾ. ಜಿ.ಎಸ್. ಶಿವರುದ್ರಪ್ಪ

ಪ್ರತಿಯೊಬ್ಬನನ್ನೂ ಅಪನಂಬಿಕೆಯಿಂದ ನೋಡುವುದೇ ಜಾಣತನವಾದರೆ ಬದುಕಿರಬೇಕು ಎಂಬ ಅಭೀಪ್ಸೆಗೆ ಅರ್ಥವಾದರೂ ಏನು?

-ಯಶವಂತ ಚಿತ್ತಾಲ

ಒಬ್ಬ ನಿನಗೆ ನಮಸ್ಕರಿಸಿದರೆ ಅವನು ಕೊಟ್ಟಿದ್ದಕ್ಕಿಂತ ಹೆಚ್ಚು ಗೌರವವನ್ನು ಕೊಟ್ಟು ನೀನು ಅವನಿಗೆ ನಮಸ್ಕರಿಸು. ಭಗವಂತ ನೀನು ಮಾಡುವ ಎಲ್ಲ ಕಾರ್ಯಗಳತ್ತ ಗಮನವಿರಿಸಿದ್ದಾನೆ ಎನ್ನುವುದನ್ನು ಮರೆಯಬೇಡ.

- ಪವಿತ್ರ ಖುರಆನ್

ಜಗತ್ತಿನ ಎಲ್ಲಾ ಹೆಂಗಸರನ್ನು ಮೂರೇ ಮೂರು ಗುಂಪುಗಳಲ್ಲಿ ವಿಂಗಡಿಸಬಹುದು- ಸುಂದರಿಯರು, ಜಾಣೆಯರು ಹಾಗೂ ಬಹುಸಂಖ್ಯಾತರು.

- ಎಂ.ಆರ್.ಎಸ್.



ಸ್ಥಿರ ಶೀರ್ಷಿಕೆಗಳು

(ಮೂರನೇ ಪುಟದಿಂದ)

ಇಂದಿರಾರಿಗೆ ಈ ರಾಷ್ಟ್ರದ ಅಂಧರು ಹಾಗೂ ಅಂಗವಿಕಲರ ಬಗ್ಗೆ ಇದ್ದಂತಹ ಅನುಕಂಪ.

**ಬೆಂಗಳೂರು** **ಎನ್. ಲಕ್ಷ್ಮಿನಾರಾಯಣ**

ಪಿ.ಸಿ.ಅಲೆಕ್ಸಾಂಡರ್ ಬರೆದ "ಇಂದಿರಾ ಜತೆಗಿನ ನನ್ನ ವರ್ಷಗಳು" ತುಂಬ ಹೃದಯಸ್ಪರ್ಶಿಯಾಗಿತ್ತು. ಅವರನ್ನು ತೀರ ಹತ್ತಿರದಿಂದ ಬಹುಕಾಲದಿಂದ ಬಲ್ಲವೇನೋ ಎಂಬಷ್ಟು ನೈಜತೆಯಿಂದ ಒಡಗೂಡಿತ್ತು. ವಾಸುಕಿಯವರ ಭಾಷಾಂತರವೂ ಅಷ್ಟೇ ಪರಿಣಾಮಕಾರಿಯಾಗಿತ್ತು. "ಜ್ಞಾನ ನಿಧಿ" ವಿಭಾಗದಲ್ಲಿನ ಹರಿಶ್ಚಂದ್ರನ ವಂಶದವರು ಎಂಬಲ್ಲಿ ೯೦,೦೦೦ ಡಾಲರುಗಳಿಗೆ ೩೭೦೦೦ ಟ್ಯಾಕ್ಸ್ ಕೊಟ್ಟ ಬಳಿಕ ೫೩೦೦೦ ರೂಪಾಯಿ ಉಳಿಯಬೇಕು. ಮತ್ತೆ ೧೬೦೦೦ ಟ್ಯಾಕ್ಸ್ ಕೊಟ್ಟಾಗ ೩೭೦೦೦ ಉಳಿಯಬೇಕು. ಕೈಯಿಂದ ೧೩೦೦೦ ಹೇಗೆ ಬಿಟ್ಟವು?

**ಜಮಖಂಡಿ** **ಎನ್.ಜಿ. ಕಾರಜೋಳ**

## ಕ್ಷಮಿಸಿ

ವಾಸ್ತವವಾಗಿ ಸ್ವೀಡಿಶ್ ಸರಕಾರ ಘೋಷಿಸಿದ ಬಹುಮಾನದ ಮೊತ್ತ ನಾಲ್ವತ್ತು ಸಾವಿರ ಡಾಲರುಗಳು ಎನ್ನುವುದು ಎರಡನೆಯ ಪ್ಯಾರಾದಲ್ಲಿ ಸ್ಪಷ್ಟವಾಗಿಯೆ ಇದೆ. ಆದರೆ ಮೊದಲನೆಯ ಪ್ಯಾರಾದಲ್ಲಿ ೯೦,೦೦೦ವೆಂದು ಕಣ್ತಪ್ಪಿನಿಂದ ಅಚ್ಚಾಗಿದೆ. ಅದಕ್ಕಾಗಿ ವಿಷಾದಿಸುತ್ತೇವೆ - ಸಂ.

## ಹರಿಶ್ಚಂದ್ರನೋ ನಕ್ಷತ್ರಿಕನೋ

ಫೆಬ್ರುವರಿ ಸಂಚಿಕೆಯ ಜ್ಞಾನನಿಧಿ ಅಂಕಣದ ೪೬ನೇ ಪುಟದಲ್ಲಿ 'ಹರಿಶ್ಚಂದ್ರನ ವಂಶದವರು' ಬಗ್ಗೆ ಒಂದು ಚಿಕ್ಕ ತಿದ್ದುಪಡಿ ನೀಡಬಯಸುತ್ತೇನೆ. ಹರಿಶ್ಚಂದ್ರನು ಸ್ವತಃ ಹಣವನ್ನು ವಸೂಲು ಮಾಡುತ್ತಿರಲಿಲ್ಲ. ಬದಲಾಗಿ ವಿಶ್ವಾಮಿತ್ರನಿಂದ ನೇಮಿಸಲ್ಪಟ್ಟ "ನಕ್ಷತ್ರಿಕ"ನು ವಸೂಲು ಮಾಡುತ್ತಿದ್ದನೆಂದು ಪುರಾಣಗಳು ಹೇಳುತ್ತವೆ. ಆದ್ದರಿಂದ ಇದನ್ನು "ನಕ್ಷತ್ರಿಕನ ವಂಶದವರು"ಎನ್ನುವುದು ಸಮಂಜಸವಲ್ಲವೇ?

**ಟಿಮೆಲ್‌ನಗರ** **ಸೂರಿ**

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸ್ತಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೩೫ | ಎಪ್ರಿಲ್ ೧೯೯೫ | ಸಂಚಿಕೆ: ೮



## ಸತ್ಯದ ಸಾವು

ಇದು ನೂರಾರು ಅಲ್ಲ, ಸಾವಿರಾರು ವರ್ಷಗಳ ಹಿಂದೆ ನಡೆದದ್ದು. ಪೃಥ್ವಿಯ ಮೇಲೆ ಎಲ್ಲೆಲ್ಲಿಯೂ ಶಾಂತಿ, ಸಮಾಧಾನ, ಸುಭಿಕ್ಷೆ. ದುಃಖದ ಛಾಯೆಯೆಂಬುದೇ ಇರಲಿಲ್ಲ. ಇಂಥಾ ಪರಿಸ್ಥಿತಿ ನಿತಾಂತವೂ ಇರಬೇಕೆಂದು ಇಚ್ಛಿಸಿದ ದೇವತೆಗಳು ಸತ್ಯವನ್ನು ಭೂಮಿಗೆ ಕಳಿಸುವುದಾಗಿ ನಿಶ್ಚಯಿಸಿದರು. ಕಳಿಸುವ ಮುಂದೆ ಅದಕ್ಕೊಂದು ಕೆಲಸವನ್ನೂ ವಿಧಿಸಿದರು. ಸದಾಕಾಲ, ಒಂದು ಕ್ಷಣವೂ ಬಿಡದೆ ಮಾತಾಡುತ್ತ ಇರಬೇಕೆಂಬುದೇ ಸತ್ಯ ಪೃಥ್ವಿಯು ಮೇಲಿದ್ದುಕೊಂಡು ಮಾಡಬೇಕಾಗಿದ್ದ ಕೆಲಸ. ಅದು ಮಾತಾಡುತ್ತಿರುವವರೆಗೆ ಪೃಥ್ವಿಯ ಮೇಲೆಲ್ಲ ಹಸಿರು. ಅದು ಮಾತು ನಿಲ್ಲಿಸಿತೋ ಪೃಥ್ವಿಯ ಅಡಿಯಲ್ಲಿ ಅಡಗಿಕೊಂಡ ಶಿಶಿರಋತು ಮೇಲೆದ್ದು ಬಂದು ಎಲೆಗಳನ್ನೆಲ್ಲ ಉದುರಿಸುವುದು; ಹಸಿರು ಹೊರಟುಹೋಗಿ ಎಲ್ಲೆಡೆ ನೀರವ ವಾತಾವರಣ ಆವರಿಸುವದು. ನೀರವತೆಯೊಂದಿಗೆ ವಿಷಣ್ಣತೆಯೂ ವ್ಯಾಪಿಸಿ ದುಃಖಕ್ಕೆಡೆಮಾಡಿ ಕೊಡುವುದು.

ದೇವತೆಗಳು ಹೇಳಿದ್ದನ್ನು ಏಕಾಗ್ರಚಿತ್ತದಿಂದ ಕೇಳಿಕೊಂಡು ಸದಾಕಾಲ ಮಾತಾಡುವುದಕ್ಕೆ ಸತ್ಯ ಒಪ್ಪಿಕೊಂಡಿತು.

ಈಗ ಸತ್ಯಕ್ಕೆ ಮಾತಾಡುವುದೊಂದೇ ಕೆಲಸ. ಸದಾಕಾಲ ಮಾತೇಮಾತು. ಹಗಲೂ ಮಾತು; ರಾತ್ರಿಯೂ ಮಾತು. ಕುಳಿತರೂ ಮಾತು; ನಿಂತರೂ ಮಾತು. ಹೀಗೆಯೇ ಸಾವಿರಾರು ವರ್ಷಗಳು ಗತಿಸಿಹೋದವು. ಸತ್ಯಕ್ಕೆ ವಿಶ್ರಾಂತಿಯೆನ್ನುವುದೇ ಇಲ್ಲ; ಅದನ್ನು ಪಡೆಯುವ ಮನಸ್ಸೂ ಅದಕ್ಕಿಲ್ಲ. ಪೃಥ್ವಿಯ ಮೇಲೆ ಶಾಂತಿ ಎಲ್ಲೆಲ್ಲೂ ಸುಭಿಕ್ಷೆ. ಬಡತನವೆಂಬುದು ಬರಿ ಕನಸಿನ ಮಾತು.

ಸೈತಾನನಿಗೆ ಇದೆಲ್ಲ ಹೇಗೆ ಸಹನವಾದೀತು? ಒಂದು ದಿನ ಆತ ಬೆಕ್ಕಿನ ಹೆಜ್ಜೆಯಿಡುತ್ತಾ ಸತ್ಯದ ಹಿಂದೆ ಬಂದ. ಬಂದವನೆ ಬಂಗಾರದ ತಗಡಿನಿಂದ ಅದರ ಮುಖವನ್ನು ಗಟ್ಟಿಯಾಗಿ ಮುಚ್ಚಿದ. ಈಗ ಸತ್ಯದ ಬಾಯಿಯೂ ಮುಚ್ಚಿತ್ತು; ಕಣ್ಣೂ ಮುಚ್ಚಿತ್ತು. ಮಾತೇ ಅದರ ಜೀವಾಳವಾದ್ದರಿಂದ ಸತ್ಯ ತತ್‌ಕ್ಷಣ ಸತ್ತುಬಿತ್ತು. ಭೂಮಿಯ ಅಡಿಯಲ್ಲಿ ಹುದುಗಿಕೊಂಡಿದ್ದ ಶಿಶಿರಋತು ಪೃಥ್ವಿಯ ಕವಚವನ್ನು ಭೇದಿಸಿಕೊಂಡು ಹೊರಬಂತು. ಎಲ್ಲೆಡೆಗೂ ಎಲೆಗಳು ಉದುರತೊಡಗಿದವು. ಹಸಿರೇ ಇಲ್ಲದ್ದರಿಂದ ಬೆಳೆಯಾದರೂ ಎಲ್ಲಿ? ಪೃಥ್ವಿಯ ಮೇಲೆ ಮೊದಲ ಸಲ ಬರಗಾಲ ಬಂತು. ಅನ್ನಕ್ಕಷ್ಟೇ ಅಲ್ಲ, ಒಂದಿಷ್ಟು ನೀರಿಗೂ ಈಗ ಪರದಾಟ. ಹಿಡಿ ಅನ್ನಕ್ಕಾಗಿ ಎಲ್ಲ ಕಡೆಗೂ ಹಾಹಾಕಾರ. ಜನರಲ್ಲೀಗ ಎದ್ದು ಓಡಾಡುವ ತ್ರಾಣವೂ ಉಳಿದಿರಲಿಲ್ಲ. ವಾಸ್ತವವಾಗಿ ಸೈತಾನ ಅದಾಗಲೆ ಸಂಕೋಲೆಯಿಂದ ಇಡೀ ಜಗತ್ತನ್ನೇ ಬಂಧಿಸಿಬಿಟ್ಟಿದ್ದ.

– 'ಮಂದಾಕ್ರಾಂತಾ'ದಿಂದ



# ಇಪ್ಪತ್ತೈದು ಹುಟ್ಟುಹಬ್ಬಗಳ ಶತಾಯುಷಿ!

• ವಾಸುಕಿ

ಮೊರಾರ್ಜಿ ರಣಛೋಡಜಿ ದೇಸಾಯಿ.

ಅವರ ಬದುಕೇ ವೈಚಿತ್ರ್ಯಗಳ-ವೈರುದ್ಧ್ಯಗಳ ಒಂದು ಸರಮಾಲೆ. ಭಾರತೀಯ ರಾಜಕೀಯ ಕ್ಷೇತ್ರದಲ್ಲಿ ಅವರನ್ನು 'ಧ್ರುವತಾರೆ' ಎಂದು ಹೊಗಳಿದವರೂ ಇದ್ದಾರೆ; 'ಧೂಮಕೇತು' ಎಂದು ತೆಗಳಿದವರೂ ಕಡಿಮೆಯಿಲ್ಲ. ಅವರನ್ನು 'ಸುಧಾರಣೆಗಳ ಹರಿಕಾರ' ಎಂದು ವರ್ಣಿಸುವವರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ 'ಎಲ್ಲವನ್ನೂ ಹದಗೆಡಿಸಿಟ್ಟ ವ್ಯಕ್ತಿ' ಎಂದು ಹೀಗಳೆದ ಮಂದಿಯೂ ಇದ್ದಾರೆ. ಬದುಕು ಹಾಗೂ ಧೋರಣೆಗಳ ವಿಷಯದಲ್ಲಿ ತಮ್ಮದೇ ಆದ ದೃಷ್ಟಿಕೋನವುಳ್ಳ ಮೊರಾರ್ಜಿ ಇತರರಿಗೆ 'ವಿಕ್ಷಿಪ್ತ' 'ಹಟಮಾರಿ' ಹಾಗೂ 'ಛಲಗಾರ'ನಾಗಿ ಕಂಡು ಬಂದುದೂ ಇದೆ. ಒಂದು ಕಾಲದಲ್ಲಿ ಯಾರು ತಮ್ಮನ್ನು ವಿರೋಧಿಸಿದರೋ ಅವರೊಂದಿಗೆಯೇ ಮುಂದೊಮ್ಮೆ ಸೇರಿಕೊಳ್ಳಬೇಕಾಗಿ ಬಂದ ಉದಾಹರಣೆಗಳೂ ಮೊರಾರ್ಜಿಯವರ ಬದುಕಿನಲ್ಲಿ ಸಾಕಷ್ಟಿವೆ.

ಈಗ ತಮ್ಮ ನೂರನೆಯ ವರ್ಷದಲ್ಲಿ ಕಾಲಿಕ್ಕಿರುವ ಮೊರಾರ್ಜಿ ಈ ಸುದೀರ್ಘ ಜೀವನದಲ್ಲಿ ಔಷಧೋಪಚಾರಗಳ ಮೊರೆ ಹೊಕ್ಕದ್ದು ಒಂದು ಸಲವೋ ಎರಡು ಸಲವೋ ಅಷ್ಟೆ. ಮಾತಿನ ವಿಷಯದಲ್ಲಿ, ಇತರರು 'ತಿಕ್ಕಲುತನ'ವೆಂದುಕೊಳ್ಳುವಷ್ಟು ಮಟ್ಟಿಗಿನ, ಮಿತವ್ಯಯಿ ಅವರು. ಆದರೆ ಖಂಡಿತವಾದಿ. ಅಂತೆಯೆ, "ಮೊರಾರ್ಜಿಯವರೊಂದಿಗೆ ಸಂದರ್ಶನ ನಡೆಸುವುದೆಂದರೆ ಅದೊಂದು ಸಾಹಸದ ಮಾತೇ ಸೈ" ಎಂಬುದು ಅನೇಕ ಪತ್ರಿಕಾವರದಿಗಾರರ ಅಭಿಪ್ರಾಯ; ಅನುಭವ ಕೂಡ. ಯಾಕೆಂದರೆ ಮೊರಾರ್ಜಿ ಎಂದೂ ಪ್ರಶ್ನೆಗಳಿಗೆ ಪ್ರತಿಪ್ರಶ್ನೆಯೆಸೆಯದೇ ಬಿಟ್ಟವರಲ್ಲ. ಅಪ್ಪಟ ಗಾಂಧೀವಾದಿ. ಕರ್ಮಸಿದ್ಧಾಂತದಲ್ಲಿ ಅಪಾರ ನಂಬಿಕೆಯುಳ್ಳವರು. ನೆಹರೂ ಕುಟುಂಬದ ಬಗ್ಗೆ ಗೌರವವನ್ನಿರಿಸಿಕೊಂಡಿರುವ ಹಾಗೆಯೇ ಅದರ 'ವಂಶಾಡಳಿತ ನೀತಿ'ಯನ್ನು ಖಂಡಿಸುತ್ತಲೇ ಬಂದವರು. ಇತರರು ಮಹತ್ವದ್ದೆಂದುಕೊಳ್ಳುವ ಸಂಗತಿ-ವ್ಯಕ್ತಿಯ ವಿಷಯವನ್ನು ಮೊರಾರ್ಜಿ 'ನಿಕೃಷ್ಟ'ವೆಂದುಕೊಳ್ಳುವುದಷ್ಟೇ ಅಲ್ಲ, ಆ ವಿಷಯವಾಗಿ ಹೆಚ್ಚು ಮಾತಾಡತೊಡಗಿದರೆ ಮೌನ ಧರಿಸಿ, "ಸುಮ್ಮನೇ ಅರ್ಥಹೀನ ಮಾತುಗಳನ್ಯಾಕೆ ಬೆಳೆಸುತ್ತೀ?" ಎಂದು ಕಣ್ಣಲ್ಲೇ ಕೇಳಿಬಿಡುವಂಥವರು. ಅವರ ದೃಷ್ಟಿಯಲ್ಲಿ ವಿನೋಬಾರ ಭೂದಾನಯಜ್ಞ "ಅರ್ಥಹೀನ." ಲಾಲ್‌ಬಹಾದ್ದೂರ ಶಾಸ್ತ್ರಿ "ಏನೇನೂ ಅಲ್ಲ; ಭಾರತಕ್ಕೆ ಅವರಿಂದ ಯಾವ ಪ್ರಯೋಜನವೂ ಆಗಿಲ್ಲ." ಜೆ.ಪಿ.ಯನ್ನು ಜನ "ಸುಮ್ಮ ಸುಮ್ಮನೇ ಅಟ್ಟಕ್ಕೇರಿಸಿದರು, ಮಹಾತ್ಮಾ ಗಾಂಧಿಗೆ ಹೋಲಿಸಿದರು."

ವೈಚಿತ್ರ್ಯವೆಂಬುದು ಮೊರಾರ್ಜಿಗೆ ಹುಟ್ಟಿದ ದಿನದಿಂದಲೇ ಅಂಟಿಕೊಂಡು ಬಂದಿದೆ. ಕ್ರಿಶ್ಚಿಯನ್ ಕ್ಯಾಲಂಡರಿನ ಪ್ರಕಾರ ಫೆಬ್ರುವರಿ ೨೯ (೧೮೯೬)ರಂದು ಜನಿಸಿದ ಮೊರಾರ್ಜಿ ಆ ದೃಷ್ಟಿಯಿಂದ ಅಪರೂಪದ ವ್ಯಕ್ತಿಯೂ ಹೌದು. ಲೀಪ್ ಇಯರ್‌ನಲ್ಲಿ ಹುಟ್ಟಿದ ಕಾರಣದಿಂದಾಗಿ ಅವರ ಹುಟ್ಟುಹಬ್ಬ ನಾಲ್ಕು ವರ್ಷಕ್ಕೊಮ್ಮೆ ಬರುತ್ತದೆ. ಅಂತೆಯೆ ಮೊರಾರ್ಜಿ ೨೫ ಹುಟ್ಟು ಹಬ್ಬಗಳ ಶತಾಯುಷಿ! ಹಿಂದೂ ಪಂಚಾಂಗದನ್ವಯ ಹೋಳಿ ಹುಣ್ಣಿಮೆಯ ಮರುದಿನ ಅವರ ಹುಟ್ಟು ಹಬ್ಬವನ್ನು ಆಚರಿಸಲಾಗುತ್ತದೆ.

ಗುಜರಾತಿನ ಭದೇಲಿ ಗ್ರಾಮದ ಉಪಾಧ್ಯಾಯ ರಣಛೋಡಜಿಯವರ ಮಗ ಮೊರಾರ್ಜಿ. ಎಂಟು ಮಕ್ಕಳಲ್ಲಿ ಹಿರಿಯ ಇವರು. ಅಪ್ಪ ಅತಿ ಶಿಸ್ತಿನ ಮನುಷ್ಯ. ಅತಿ ಕಟ್ಟುನಿಟ್ಟಿನ ಸ್ವಭಾವದವರು. ಐದನೆಯ ವಯಸ್ಸಿಗೇ ಶಾಲಾಭ್ಯಾಸ ಪ್ರಾರಂಭಿಸಿದ ಮೊರಾರ್ಜಿ ಮನೆಯ ಹೊರಗಿದ್ದಾಗಲೆಲ್ಲ "ಕಿಡಿಗೇಡಿ," "ಕ್ರೀಡಾಸಕ್ತ." ಆದರೆ ಮನೆಯೊಳಗೆ ಅಪ್ಪನ ನೆರಳು ಕಂಡರೂ ಅಂಜಿ ಅವಿತುಕೊಳ್ಳುವಷ್ಟು ಪುಕ್ಕಲ. ಪ್ರೌಢಶಾಲೆಯಿರದ ಹಳ್ಳಿ ಭದೇಲಿ. ಹೀಗಾಗಿ ಮುಂದಿನ ಅಭ್ಯಾಸಕ್ಕಾಗಿ ದಿನವೂ ಮೂರು ಮೈಲು ದೂರದ ವಲ್‌ಸಾದಕ್ಕೆ ಹೋಗಬೇಕಾಗುತ್ತಿತ್ತು. ನಡುವೆ ಔರಾಂಗ ನದಿ ಅಡ್ಡಹಾಯುವುದರಿಂದ ಅದನ್ನು ದಾಟಿಕೊಂಡೇ ಹೋಗಬೇಕು. ಹೀಗಾಗಿ ವಲ್‌ಸಾದದಲ್ಲಿದ್ದ ಸೋದರಮಾವನ ಮನೆಯಲ್ಲೇ ಉಳಿದುಕೊಂಡು ಶಿಕ್ಷಣ ಮುಂದುವರಿಸಿದರು ಮೊರಾರ್ಜಿ. ಓದಿನಲ್ಲಿ ಅಷ್ಟಕ್ಕಷ್ಟೆ. ಆದರೆ ಆಟೋಟಗಳಲ್ಲಿ ಸದಾ ಮುಂದು. ಗೋಲಿ, ಗಿಲ್ಲಿ-ದಾಂಡ್, ಹುತ್ತೂತ್ತು-ಕ್ರಿಕೆಟ್‌ಗಳಲ್ಲಿ ಮೊರಾರ್ಜಿ ಎತ್ತಿದ ಕೈ.

ಹದಿನೈದನೆಯ ವಯಸ್ಸಿಗೇ ಮೆಟ್ರಿಕ್ ತರಗತಿ ತಲಪಿದ್ದ ಮೊರಾರ್ಜಿ ಆಗಿನ ನಿಯಮದಂತೆ ಹದಿನಾರಾಗದೆ ಆ ಪರೀಕ್ಷೆಗೆ ಕುಳಿತುಕೊಳ್ಳುವಂತಿರಲಿಲ್ಲ. ಹೀಗಾಗಿ ಅದೇ ವರ್ಗದಲ್ಲಿ ಎರಡು ವರ್ಷ ಉಳಿಯಬೇಕಾಗಿ ಬಂತು.

ಅದೇ ಹೊತ್ತಿಗೆ ಇವರ ಮದುವೆಯೂ ನಿಶ್ಚಯವಾಗಿತ್ತು. ಮದುವೆಗೆಂದು ವಲ್‌ಸಾದಕ್ಕೆ ನೆಂಟರಿಷ್ಟರೆಲ್ಲ ಬಂದು ನಿಂತರು. ಆದರೆ ಲಗ್ನಕ್ಕೆ ಎರಡು ದಿನ ಹಿಂದೆಯೇ ರಣಛೋಡಜಿ ದೇಸಾಯಿ ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡರು. ಮದುವೆ ನಡೆಯಬೇಕೇ ಬೇಡವೇ ಎಂಬ ಜಿಜ್ಞಾಸೆ. ಮುಂದೂಡುವುದು ಬೇಡ ಎಂದು ಹಿರಿಯರೆಲ್ಲ ನಿರ್ಧರಿಸಿದ ಕಾರಣ, ಅತ್ತ ಅಪ್ಪನ ಅಸ್ಥಿವಿಸರ್ಜನೆ, ಇತ್ತ ಮಗನ "..... ಅರ್ಥೇಚ-ಕಾಮೇಚ ನಾತಿಚರಾಮಿ"ಗಳು ಏಕಕಾಲಕ್ಕೆ ನಡೆದುಹೋದುವು! ಕೈ ಹಿಡಿದ ಹುಡುಗಿ ಗಜ್ರಾಬೇನ್.

ಹನ್ನೊಂದರ ಆ ಅಬೋಧ ಬಾಲೆಗೆ ಹದಿನೈದರ ಅಪ್ರಾಪ್ತ ವಯಸ್ಕ ಗಂಡ! ಇಬ್ಬರದೂ ಇನ್ನೂ ಆಟವಾಡುವ ವಯಸ್ಸು. ಸಂಸಾರ, ಕುಟುಂಬ, ದಾಂಪತ್ಯವೆಂದರೇನೆಂದೇ ಅರಿಯದ ಮುಗ್ಧತನ. ಆದರೆ ಅಪ್ಪನ ಕಟ್ಟುನಿಟ್ಟಿನಲ್ಲೇ ಬೆಳೆದಿದ್ದ ಮೊರಾರ್ಜಿ ಹದಿನೈದರ ವಯಸ್ಸಿಗೇ ಮಹಾಗಂಭೀರ ಸ್ವಭಾವದವರಾಗಿಬಿಟ್ಟರು. ಸುಳ್ಳು ಹೇಳುವುದಾಗಲಿ, ಬಯಸಿದ್ದನ್ನು ಪಡೆದೇ ತೀರಬೇಕೆಂಬ ಹಟವಾಗಲಿ ಇಲ್ಲದ ಹುಡುಗನಿಗೆ ಹಣದ ಮಹತ್ವ ಆದಾಗಲೇ ಗೊತ್ತಾಗಿಬಿಟ್ಟಿತ್ತು. ಖರ್ಚಿನ ವಿಷಯದಲ್ಲಿ ಒಂದು ರೀತಿಯ ಜಾಗರೂಕತೆ ಬೆಳೆಸಿಕೊಂಡುಬಿಟ್ಟಿದ್ದ ಮೊರಾರ್ಜಿ ತಮ್ಮ ಮೆಟ್ರಿಕ್ ನಂತರ ಮುಂಬಯಿಗೆ ಕಾಲೇಜು ಸೇರಲು ಹೋದರು. ಅಲ್ಲಿ ರೇಲ್ವೆ

---

ಪ್ರಸ್ತುತ ಲೇಖನದೊಂದಿಗೆ ಪ್ರಕಟಿಸಲ್ಪಟ್ಟಿರುವ ಮೊರಾರ್ಜಿ ದೇಸಾಯಿಯವರ ಹಾಗೂ ಅವರ ನಿವಾಸದ ವರ್ಣಛಾಯಾಚಿತ್ರಗಳನ್ನು ನಮಗೆ ಒದಗಿಸಿದವರು ಮುಂಬಯಿಯ ಕನ್ನಡಿಗ ಪ್ರಹ್ಲಾದ ಕಲಕೋಟಿಯವರು. ಅಲ್ಲದೆ, ಈ ಲೇಖನವನ್ನು ರೂಪಿಸಲು 'ಇಲಸ್ಟ್ರೇಟೆಡ್ ವೀಕ್ಲಿ', 'ಸೊಸೈಟಿ' ಮತ್ತಿತರ ಪತ್ರಿಕೆಗಳಲ್ಲಿ ಪ್ರಕಟವಾದ ಸಂದರ್ಶನಗಳನ್ನೂ ಆಧರಿಸಲಾಗಿದೆ. ನಮ್ಮ ಮುಂಬಯಿ ಪ್ರತಿನಿಧಿ ವಸಂತ ಕಲಕೋಟಿಯವರು ದಿ. ೧-೨-೧೯೭೫ರಂದು ಮೊರಾರ್ಜಿಯವರನ್ನು ಕಂಡು ಪಡೆದ ದಿನಚರಿಯ ವಿವರಗಳನ್ನೂ ಈ ಲೇಖನದಲ್ಲಿ ಅಳವಡಿಸಿಕೊಳ್ಳಲಾಗಿದೆ.

● ಸಂಪಾದಕ

---

ಸ್ಟೇಶನ್ನಿನಿಂದ ತಾವು ಇರಬೇಕಾಗಿದ್ದ ವಿದ್ಯಾರ್ಥಿನಿಲಯಕ್ಕೆ ಕೂಲಿಯವ ಆರಾಣೆ ಕೇಳಿದ್ದರಿಂದ, ಟಾಂಗಾದವ ಒಂದು ರೂಪಾಯಿ ಹೇಳಿದ್ದರಿಂದ ತಮ್ಮ ಗಂಟು-ಗದಡಿಗಳನ್ನು ತಲೆಗೇರಿಸಿ ನಡೆದೇ ಹೋದರಂತೆ ಮೊರಾರ್ಜಿ.

ಅಷ್ಟರಲ್ಲಾಗಲೇ ರಾಷ್ಟ್ರೀಯ ಚಳವಳಿಯತ್ತ ಆಕರ್ಷಿತರಾಗಿದ್ದ ಮೊರಾರ್ಜಿ ಚಹಾ ಸೇವನೆಯನ್ನು ಬಿಟ್ಟು ಐದು ವರ್ಷಗಳಾಗಿತ್ತು. ಮುಂಬಯಿಯ ವಿಲ್ಸನ್ ಕಾಲೇಜಿನಲ್ಲಿ ಭಾವನಗರದ ಮಹಾರಾಜರ ವಿದ್ಯಾರ್ಥಿವೇತನದ ನೆರವಿನಿಂದ ಭೌತಶಾಸ್ತ್ರದಲ್ಲಿ ಬಿ.ಎಸ್.ಸಿ. ಓದು ಮುಂದುವರಿಸಿ, ಗೋಕುಲದಾಸ್ ತೇಜ್‌ಪಾಲ್ ಉಚಿತ ವಿದ್ಯಾರ್ಥಿ ನಿಲಯದಲ್ಲಿದ್ದದ್ದು ನಾಲ್ಕೂವರೆ ವರ್ಷ. ಹೋಂ ರೂಲ್ ಚಳವಳಿ ಪ್ರಾರಂಭವಾಗಿತ್ತು. ಆ್ಯನಿ ಬೆಸೆಂಟ್ ಮೊದಲಾದವರ ಭಾಷಣಗಳಿಂದ ಪ್ರಭಾವಿತ ಮೊರಾರ್ಜಿ ೧೯೧೮ರ ಮುಂಬಯಿ ಕಾಂಗ್ರೆಸ್ ಅಧಿವೇಶನದಲ್ಲಿ ಸ್ವಯಂಸೇವಕನಾಗಿ ದುಡಿದರು. ಗಾಂಧೀಜಿಯ ಭಾಷಣವನ್ನು ಮೊದಲ ಬಾರಿಗೆ ಕೇಳುವ ಅವಕಾಶ ದೊರೆತದ್ದು ಅಲ್ಲಿಯೆ.

ಪದವಿ ಪಡೆದಾದ ಮೇಲೆ ಮೊರಾರ್ಜಿ ೧೯೧೮ರಲ್ಲಿ ಸರಕಾರಿ ಸೇವೆಗೆ ಆಯ್ಕೆಯಾದರು. ಪ್ರೊಬೆಶನರಿ ಡೆಪ್ಯುಟಿ ಕಲೆಕ್ಟರ್ ಹುದ್ದೆ. ಆಂಗ್ಲ ಅಧಿಕಾರಿಗಳ ಹಸ್ತಕರಾಗಿದ್ದವರಿಗೆ ಏನೆಲ್ಲಾ ಅವಕಾಶಗಳು ದೊರೆಯುತ್ತಿದ್ದ ಕಾಲ ಅದು. ಅಂಥವರಿಗೇ ಬಡ್ತಿ-ಸಂಬಳ ಹೆಚ್ಚಳ-ಕೃಪಾಧನಗಳು ಲಭಿಸುತ್ತಿದ್ದವು. ಹೊಗಳುಭಟ್ಟನಾಗಿ, ಹಲ್ಲುಗಿಂಜುತ್ತ 'ಜೀ ಹುಜೂರ್' ಎಂದು ಮೇಲಿನವರು ಬಯಸುತ್ತಿದ್ದ ಎಲ್ಲ ಅಕ್ರಮಗಳಲ್ಲೂ ತೊಡಗಿಕೊಂಡ ಅನೇಕ ಸಹೋದ್ಯೋಗಿಗಳು ಇವರಿಗಿಂತ ಮೇಲಕ್ಕೇರಿ ಕುಳಿತರು. ಆದರೆ ಮೊರಾರ್ಜಿ ಮಾತ್ರ ಅದೆಲ್ಲದರಿಂದ ದೂರ. ಓಲೈಸುವಿಕೆಯನ್ನೆಂದೂ ಒಪ್ಪದ ಮೊರಾರ್ಜಿ ಇಂಥದರಲ್ಲೇ ಎರಡು ವರ್ಷದ ಪ್ರೊಬೆಶನರಿ ಅವಧಿ ಮುಗಿಸಿ ಡೆಪ್ಯುಟಿ ಕಲೆಕ್ಟರಾಗಿ ಠಾಣಾಕ್ಕೆ ವರ್ಗಾಯಿಸಲ್ಪಟ್ಟರು. ಸ್ವಲ್ಪ ತಲೆಬಾಗಿದ್ದರೆ ಜಿಲ್ಲಾಧಿಕಾರಿಯಾಗಿಬಿಡಬಹುದಿತ್ತು. ಆದರೆ ಮೊರಾರ್ಜಿ ಹಾಗೆ ಮಾಡಲಿಲ್ಲ.

ಸರಕಾರಿ ಅಧಿಕಾರಿ ಎಂದರೆ ಜನಸೇವಕ; ಅವರಿಗೆ ಅನ್ಯಾಯವಾಗದಂತೆ, ಸತ್ಯ-ನಿಷ್ಠೆಗಳಿಂದ ಸೇವೆಗೈಯಬೇಕಾದ್ದು ಅವನ ಕರ್ತವ್ಯ ಎಂಬುದನ್ನು ತಮ್ಮ ಆಚರಣೆಯನ್ನಾಗಿಸಿಕೊಂಡ ಮೊರಾರ್ಜಿ ಸರೀಕ ಅಧಿಕಾರಿಗಳ ಕಣ್ಣಲ್ಲಿ ಹಳ್ಳಿನಂತೆ ಕೂತುಬಿಟ್ಟರು. ಹೀಗಾಗಿ ಒಂದೆಡೆ ಜನಾನುರಾಗ, ಇನ್ನೊಂದೆಡೆ ಇಲಾಖೆಯಲ್ಲಿ ಅಸಂತೋಷ-ಅಸಹಕಾರಗಳನ್ನು ಸಮಸಮವಾಗೇ ಸ್ವೀಕರಿಸುತ್ತ ಮುಂದುವರಿದರು. ಅಹಮ್ಮದಾಬಾದ್, ಠಾಣಾಗಳಲ್ಲಿ ಡೆಪ್ಯುಟಿ ಕಲೆಕ್ಟರಾಗಿದ್ದಾಗಲೂ ಅಷ್ಟೆ; ಬ್ರೋಚ್‌ನಲ್ಲಿ ಪ್ರಾಂತ ಅಧಿಕಾರಿಯಾಗಿ, ಪಂಚಮಹಲಿನ ಜಿಲ್ಲಾ ಕಲೆಕ್ಟರರ ಆಪ್ತ ಕಾರ್ಯದರ್ಶಿಯಾಗಿದ್ದಾಗಲೂ ಅಷ್ಟೆ- ಮೊರಾರ್ಜಿ ತಮ್ಮತನ ಬಿಟ್ಟುಕೊಡಲಿಲ್ಲ. ಭ್ರಷ್ಟಾಸುರನ ಮುಷ್ಟಿಗೆ ಸಿಲುಕಿಕೊಳ್ಳದೇ, ಶಿಷ್ಟಾಚಾರದ ಹೆಸರಿನಲ್ಲಿ ತಮ್ಮನ್ನು ತಾವು ಮಾರಿಕೊಳ್ಳದೇ, ಪ್ರಭಾವಿ ಜನರನ್ನು ತಮ್ಮ ಬಳಿ ಸುಳಿಯಗೊಡದೇ "ಒಳ್ಳೆಯ ಅಧಿಕಾರಿ"ಯೆಂದು ಜನಸಾಮಾನ್ಯರಿಂದ ಕರೆಸಿಕೊಂಡರು. ಕಲ್ಯಾಣ್‌ದಿಂದ ಮೊರಾರ್ಜಿ ಬೇರೆಡೆ ವರ್ಗಾಯಿಸಲ್ಪಟ್ಟಾಗ ನಡೆದ ಬೀಳ್ಕೊಡುಗೆ ಸಮಾರಂಭವಾಗಲಿ, ರೈಲು ನಿಲ್ದಾಣದಲ್ಲಿ ಸೇರಿದ್ದ ಜನಸಂದಣಿಯನ್ನಾಗಲಿ ನೆನೆದು ಅವರು ಇವತ್ತಿಗೂ ರೋಮಾಂಚಿತರಾಗುತ್ತಾರೆ.

ಇಂಥದರಲ್ಲೂ ಅವರಿಗೆ ರಾಷ್ಟ್ರೀಯ ಚಳವಳಿಯ ಸೆಳೆತ. ೧೯೨೧ರಲ್ಲಿ ಗಾಂಧೀಜಿ ಅಸಹಕಾರ ಆಂದೋಲನವನ್ನಾರಂಭಿಸಿದಾಗ ಹೋಗಿ ಸೇರಿಬಿಡಲೇ ಎಂದು ರಾತ್ರಿಯಿಡೀ ಚಿಂತಿಸಿದರಂತೆ. ಆದರೆ ಸಾಂಸಾರಿಕ ಕಾರಣಗಳಿಂದ ಹಾಗೆ ಮಾಡುವುದು ವಿಹಿತವಲ್ಲವೆಂದೆನಿಸಿ ಸುಮ್ಮನಾದರಂತೆ. ಇಲ್ಲಿದ್ದುಕೊಂಡೇ ಜನರನ್ನು ಅಜ್ಞಾನದಿಂದ, ಅನ್ಯಾಯದಿಂದ, ದುಷ್ಟ ಚಟಗಳಿಂದ, ಅಮಾನವೀಯ ಪದ್ಧತಿಗಳಿಂದ ಪಾರುಗಾಣಿಸುವುದೇ ನಿಜವಾದ ದೇಶಸೇವೆ ಎಂದು ಭಾವಿಸಿದರು. ಕುಡಿತಕ್ಕಂಟಿಕೊಂಡು ಕಷ್ಟಪಡುತ್ತಿದ್ದವರನ್ನು ಕಂಡು ಕಣ್ಣೀರು ತಂದುಕೊಂಡದ್ದು ಎಷ್ಟು ಸಲವೊ. ಜೀತ ಪದ್ಧತಿಯಿಂದ ಒಳಗೊಳಗೇ ನೋವು ಅನುಭವಿಸಿದ್ದು ಇನ್ನೆಷ್ಟು ಸಲವೊ. ಅನಾವೃಷ್ಟಿಪೀಡಿತರಿಗೆ, ಅತಿವೃಷ್ಟಿಯಿಂದಾಗಿ ಪೈರು ಕಳಕೊಂಡವರಿಗೆ ಅವರ ಮನೆ ಬಾಗಿಲಿಗೇ ಬಂದು ಮೊರಾರ್ಜಿ ಪರಿಹಾರಧನ ನೀಡಿಹೋದದ್ದು ಮುಂದೆಷ್ಟೊ ದಿನಗಳವರೆಗೆ ಮನೆಮಾತಾಗಿತ್ತು.

ಆದರೆ ಕುಯುಕ್ತಿ-ಕಪಟತನಗಳೇ ತುಂಬಿದ್ದ ಆಡಳಿತ ಇಲಾಖೆಯಲ್ಲಿ ತಮ್ಮದು ಬಹುದಿನಗಳ ಬದು

**ಕೇಂ**ದ್ರದಲ್ಲಿ ಜನತಾ ಸರಕಾರದ ಸಂದರ್ಭ. ಅಮೆರಿಕದ ಬಂಡವಾಳದಾರರು ಭಾರತದಲ್ಲಿ ಹಣತೊಡಗಿಸಲು ಬಯಸಿ ಪ್ರಧಾನಿ ಮೊರಾರ್ಜಿಯವರೊಂದಿಗೆ ಮಾತುಕತೆಗೆ ಬಂದರು. "ಒಳ್ಳೆಯದು. ಆದರೆ ನಿಮ್ಮ ಹಣ ನಮ್ಮ ಹಳ್ಳಿಗಳ ಸುಧಾರಣೆಗೆ ಬಳಕೆಯಾಗಬೇಕೆಂದು ನನ್ನ ಇಚ್ಛೆ" ಎಂದರು ಮೊರಾರ್ಜಿ. ಪಾಪ, ಇಲ್ಲಿ ಹಣಹೂಡಿ ಹತ್ತಕ್ಕೆ ನೂರನ್ನು ಮಾಡಿಕೊಳ್ಳಬಯಸಿದ್ದ ಅಮೆರಿಕದ ಬಂಡವಾಳದಾರರ ಮುಖ ಕಪ್ಪಿಟ್ಟಿತು.

ಕಲ್ಲ ಎಂಬುದು ಮೊರಾರ್ಜಿಯವರಿಗೆ ಸದಾಕಾಲವೂ ಉಂಟಾಗುತ್ತಿದ್ದ ಅನಿಸಿಕೆ. ೧೯೨೭ರಲ್ಲಿ ಈ ನೌಕರಿ ಬಿಟ್ಟು ಅಹಮ್ಮದಾಬಾದಿನ ನಗರಸಭೆಯಲ್ಲಿ ಸೇವೆ ಸಲ್ಲಿಸಲು ಇಚ್ಛಿಸಿದರು. ಆಗ ಸರ್ದಾರ್ ವಲ್ಲಭಭಾಯಿ ಪಟೇಲರು ಅದರ ಅಧ್ಯಕ್ಷ. ಆದರೆ ಅವರಾದರೂ ಆ ಅಧ್ಯಕ್ಷಗಿರಿ ತ್ಯಜಿಸಿ ಬಾರ್ಡೋಲಿ ಸತ್ಯಾಗ್ರಹದಲ್ಲಿ ಸೇರಲು ಹೊರಟು ನಿಂತಿದ್ದರು. ಮೊರಾರ್ಜಿ ಮತ್ತೆ ಸರಕಾರಿ ಅಧಿಕಾರಿಯಾಗೇ ಮುಂದುವರಿದರು.

ಜಾತಿ ಗಲಭೆಯೆಬ್ಬಿಸಿ ಆ ಮೂಲಕ ರಾಷ್ಟ್ರೀಯ ಚಳವಳಿಯನ್ನು ಮುರಿಯುವ ಹುನ್ನಾರ ಆಂಗ್ಲ ಅಧಿಕಾರಿಗಳದು. ಗೋದ್ರಾದಲ್ಲಿನ ಇಂಥ ಒಂದು ಗಲಭೆಯನ್ನು ತಡೆಯಲು ಮೊರಾರ್ಜಿ ಯತ್ನಿಸಿದಾಗ ಅವರ ಮೇಲೆ ಇಲ್ಲಸಲ್ಲದ ಆಪಾದನೆಗಳನ್ನು ಹೊರಿಸಲಾಯಿತು. ಇದರಿಂದ ಮನನೊಂದ ಮೊರಾರ್ಜಿ ೧೯೩೦ರ ಮೇ ೧೯ರಂದು ಸರಕಾರಿ ಸೇವೆಗೆ ಶರಣು ಹೊಡೆದರು. "ನನ್ನಂಥ ನಿಷ್ಠ, ಗೌರವಸ್ಥ ಇಂಥ ಅನಿಷ್ಟ-ದುಷ್ಟ ಅಧಿಕಾರಿಗಳೊಂದಿಗೆ ಮುಂದುವರಿಯುವುದು ಸಲ್ಲದು. ಆದ್ದರಿಂದ ಈ ರಾಜೀನಾಮೆ," ಎಂದವರು ತಮ್ಮ ತ್ಯಾಗಪತ್ರದಲ್ಲಿ ಬರೆದರಂತೆ.

ಅಂತೂ ಹನ್ನೆರಡು ವರ್ಷಗಳ "ನೌಕರಿ ಎಂಬ ದಾಸ್ಯ"ದಿಂದ ಬಿಡುಗಡೆ ಪಡೆದ ಮೊರಾರ್ಜಿ ನೇರವಾಗಿ ಹೋಗಿ ಸೇರಿದ್ದು ಗಾಂಧೀಜಿ ಮುಂದಾಳತ್ವದ ಸ್ವಾತಂತ್ರ್ಯ ಚಳವಳಿಯಲ್ಲಿ.

ಅವರು ಕಾಂಗ್ರೆಸ್ ಸದಸ್ಯರಾದಾಗ ಲವಣಾಂದೋಲನ ಜೋರು ಪಡೆದಿತ್ತು. ತಾವು ಓದಿ ಬೆಳೆದ ವಲ್‌ಸಾದ್ ಸಮೀಪದ ಧರಾಸನದಲ್ಲಿ ನಡೆದಿದ್ದ ಉಪ್ಪಿನ ಸತ್ಯಾಗ್ರಹದಲ್ಲಿ ಮೊರಾರ್ಜಿ ಪ್ರತ್ಯಕ್ಷ ಭಾಗಿಯಾಗಲಿಲ್ಲವಾದರೂ ೧೯೩೦ರ ಜುಲೈ ತಿಂಗಳಲ್ಲಿ ಶುರುವಾದ ಕರನಿರಾಕರಣೆ ಚಳವಳಿಯಲ್ಲಿ ಒಂದಾದರು. ಅದೇ ವರ್ಷ ಅಕ್ಟೋಬರಿನಲ್ಲಿ "ಕಾಂಗ್ರೆಸ್ಸು ಕಾನೂನುಬಾಹಿರ ಸಂಸ್ಥೆ"ಯೆಂದು ಸರಕಾರ ಘೋಷಿಸಿತು. ಅಲ್ಲಿಂದಲೇ ಶುರುವಾಯಿತು ಮೊರಾರ್ಜಿಯವರ ಸೆರೆವಾಸದ ಪರಂಪರೆ. ಮೊದಲ ಬಾರಿ ಮೂರು ತಿಂಗಳು ಕಠಿಣ ಶಿಕ್ಷೆ ಹಾಗೂ ೩೦೦ ರೂಪಾಯಿಗಳ ದಂಡ. ಒಂದು ವೇಳೆ ದಂಡದ ಹಣ ಕೊಡಲು ತಪ್ಪಿದರೆ ಮತ್ತೊಂದು ತಿಂಗಳು ಸೆರೆವಾಸ. ಮೊರಾರ್ಜಿ ದಂಡ ನೀಡಲಿಲ್ಲ.

ಸೆರೆವಾಸದ ಸಂದರ್ಭದಲ್ಲಿ ಮೊರಾರ್ಜಿ ಇನ್ನಷ್ಟು 'ಗಟ್ಟಿ'ಯಾದರು: ನಿರ್ಧಾರ ಮತ್ತು ನಡವಳಿಕೆಯ ದೃಷ್ಟಿಯಿಂದ. ಜೈಲಿನಲ್ಲಿರುವ ಅವಧಿಯನ್ನು ಒಂದು ರೀತಿಯ ಶಿಸ್ತುಬದ್ಧ ಜೀವನ ರೂಢಿಸಿಕೊಳ್ಳುವ ಅವಕಾಶ ಎಂದವರು ಭಾವಿಸಿದರು. ಎಂದೂ ಅಲ್ಲಿಯ ನಿಯಮಗಳನ್ನು ಉಲ್ಲಂಘಿಸಲಿಲ್ಲ. ಇವರ ಶಿಸ್ತು ಸಹಕೈದಿಗಳ ಟೀಕೆಗೆ, ಕೋಪಕ್ಕೆ ಕಾರಣವಾಯಿತಾದರೂ ಮೊರಾರ್ಜಿ ತಮ್ಮ ನಂಬಿಕೆಯಿಂದ ವಿಚಲಿತರಾಗಲಿಲ್ಲ.

ಸ್ವಾತಂತ್ರ್ಯ ಹೋರಾಟದ ಅನೇಕ ಹಂತಗಳಲ್ಲಿ ಮೊರಾರ್ಜಿ ಸಕ್ರಿಯ ಪಾಲುದಾರರು. ಕರನಿರಾಕರಣೆ ಚಳವಳಿ ಮುಗಿಸುವ ಕುರಿತಂತೆ ಗಾಂಧಿ ಮತ್ತು ವೈಸ್‌ರಾಯ್ ಇರ್ವಿನ್ ನಡುವೆ ಮಾತುಕತೆ ನಡೆದಾಗ ಮಹಾತ್ಮರಿಂದ ಇವರಿಗೊಂದು ಪತ್ರ ಬಂತು: "ನೀವು ಮತ್ತೆ ಸರಕಾರಿ ಕೆಲಸಕ್ಕೆ ಸೇರಬಯಸುವಿರಾದರೆ ಹೇಳಿ. ಇರ್ವಿನ್ನರೊಂದಿಗೆ ವಿಷಯ ಪ್ರಸ್ತಾಪಿಸುವೆ," ಎಂದು. ಆದರೆ ಮೊರಾರ್ಜಿ ಉತ್ತರ ಬರೆಯಲಿಲ್ಲ. ಸ್ವತಃ ಬಾಪೂಜಿಯನ್ನು ಕಂಡು "ನನ್ನ ಅಚಲ ನಿರ್ಧಾರ; ಮತ್ತೆಂದೂ ಆ ದಾಸ್ಯದ ಸಂಕೋಲೆ ತೊಡಬಾರದೆಂದೇ ನೌಕರಿ ಬಿಟ್ಟದ್ದು" ಎಂದು ಹೇಳಿದರು. ೧೯೩೧ರ ಮಾರ್ಚ್ ತಿಂಗಳಲ್ಲಿ ಗಾಂಧಿ-ಇರ್ವಿನ್ ಒಪ್ಪಂದದನ್ವಯ ಕರನಿರಾಕರಣೆಯ ಆಂದೋಲನ ಮುಕ್ತಾಯ ಕಂಡಿತು. ಅದೇ ವರ್ಷ ಕರಾಚಿಯಲ್ಲಿ ಕಾಂಗ್ರೆಸ್ ಅಧಿವೇಶನ. ಮೊರಾರ್ಜಿ ಅಲ್ಲಿ ಹಾಜರಿದ್ದರು.

ಅಲ್ಲಿಂದ ಬಂದ ಮೇಲೆ ಗುಜರಾತ ಪ್ರದೇಶ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾದರು ಮೊರಾರ್ಜಿ. ಆಗ ಸರ್ದಾರ್ ಪಟೇಲರು ಅದರ ಅಧ್ಯಕ್ಷ. ಅವರಿಗೆ ಮೊರಾರ್ಜಿ ಕಾರ್ಯದರ್ಶಿ ಪದ ಸ್ವೀಕರಿಸುವುದು ಇಷ್ಟವಿರಲಿಲ್ಲ. ಆದರೆ ಪಟೇಲ್ ವಿರೋಧವಿದ್ದಾಗ್ಯೂ ಮೊರಾರ್ಜಿ ಆಯ್ಕೆಗೊಂಡದ್ದು ಅವರ ಕಾರ್ಯತತ್ಪರತೆಗೆ ಸಾಕ್ಷಿ.

ದುಂಡು ಮೇಜಿನ ಪರಿಷತ್ತು ವಿಫಲವಾಗಿ ಗಾಂಧೀಜಿ ಇಂಗ್ಲೆಂಡಿನಿಂದ ಬಂದ ತಕ್ಷಣ ಅವರೂ ಸೇರಿದಂತೆ ಕಾಂಗ್ರೆಸ್ ನಾಯಕರನೇಕರ ಬಂಧನವಾದಾಗ ಮೊರಾರ್ಜಿಯೂ ಆರುವಾರ ಸೆರೆಮನೆಯಲ್ಲಿರಬೇಕಾಯಿತು. ಆಮೇಲೆ ಬಿಡುಗಡೆಯಾದರೂ ೧೨ ತಾಸಿನೊಳಗೇ ಅಹಮ್ಮದಾಬಾದನ್ನು ಬಿಟ್ಟು ಹೋಗಬೇಕೆಂಬ ಆಜ್ಞೆ ಬಂತು. ಮೊರಾರ್ಜಿ ಹಾಗೆ ನಡೆದುಕೊಳ್ಳಲಿಲ್ಲ. ಮತ್ತೆ ಬಂಧಿಸಲ್ಪಟ್ಟು ನ್ಯಾಯಾಲಯಕ್ಕೆಳೆದೊಯ್ಯಲ್ಪಟ್ಟರು. "ಎರಡು ವರ್ಷ ಕಠಿಣ ಸಜೆ, ಜತೆಗೆ ೩೦೦ ರೂಪಾಯಿಗಳ ದಂಡ. ದಂಡದ ಹಣ ಕೊಡಲು ತಪ್ಪಿದರೆ ಮತ್ತೆ ಆರುವಾರಗಳ ಕಠಿಣ ಶಿಕ್ಷೆ"ಯ ತೀರ್ಪಾಯಿತು. ಮೊರಾರ್ಜಿ ಒಂದಷ್ಟು ದಿನ ಸಬರ್ಮತಿ ಸೆರೆಮನೆಯಲ್ಲೂ ಆ ನಂತರ ನಾಸಿಕ್ ಕಾರಾಗೃಹದಲ್ಲೂ ಇರಿಸಲ್ಪಟ್ಟರು. ಒಂದೇ ವಾರ್ಡಿನಲ್ಲಿ ಒಟ್ಟು ೩೫ ಜನ! (ಕಾಂಜೀಭಾಯ್ ದೇಸಾಯಿ, ಡಾ. ಚಂದೂಲಾಲ್ ದೇಸಾಯಿ, ಎನ್.ವಿ. ಗಾಡ್ಗೀಳ್, ಬಾಳಾಸಾಹೇಬ್ ಖೇರ್, ಬುಲಾಭಾಯಿ ದೇಸಾಯಿ, ಜೆ.ಪಿ., ಮೀನೂ ಮಸಾನಿ, ಮಂಗಲದಾಸ ಪಕ್ವಾಸ್, ಅಶೋಕ ಮೆಹ್ತಾ, ಕುಮಾರಪ್ಪ ಮುಂತಾದವರು.)

ಆ ಅವಧಿಯಲ್ಲಿ ಮೊರಾರ್ಜಿ ತಮ್ಮನ್ನು ತಾವೇ ತಿದ್ದಿಕೊಳ್ಳುವದಕ್ಕಾಗಿ, ಇನ್ನಷ್ಟು ಸಿದ್ಧಗೊಳಿಸಿಕೊಳ್ಳುವುದಕ್ಕಾಗಿ ಅನೇಕ ಪುಸ್ತಕಗಳನ್ನು ಓದಿ ಮನನ ಮಾಡಿಕೊಂಡರು.

ಬಂಧನ-ಬಿಡುಗಡೆ-ಬಂಧನ... "ದೇಶ ಸ್ವತಂತ್ರವಾಗುವ ತನಕವೂ ಇಂಥ ಎಷ್ಟು ಬಂಧನಗಳಾದರೂ ಸರಿಯೆ; ಕೊನೆಗೊಮ್ಮೆ ಶಾಶ್ವತ ಮುಕ್ತಿ ದೇಶಕ್ಕೆ ದೊರೆತೇ ತೀರುತ್ತದೆ" ಎಂಬ ಅಚಲ ವಿಶ್ವಾಸ ಮೊರಾರ್ಜಿಯವರದು.

೧೯೩೬. ಮುಂಬಯಿಯಲ್ಲಿ ಅ.ಭಾ. ಕಾಂಗ್ರೆಸ್ ಸಮಾವೇಶ. ಮೊರಾರ್ಜಿಯವರಿಗೆ ಜವಾಹರಲಾಲರ ಸ್ನೇಹಲಾಭ ದೊರೆತದ್ದು ಇಲ್ಲಿಯೆ. ಅದೇ ವರ್ಷ ಅಹಮ್ಮದಾಬಾದ್ ನಗರಸಭೆಗೆ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ಸು ಸ್ಪಷ್ಟ ಬಹುಮತ ಪಡೆಯಲು ಮೊರಾರ್ಜಿ ಶ್ರಮಿಸಿದರು. ಮುಂದೆ ಮುಂಬಯಿ ವಿಧಾನಸಭೆ ಮತ್ತು ವಿಧಾನ ಪರಿಷತ್ತುಗಳಿಗೂ ಚುನಾವಣೆ. ಮೊರಾರ್ಜಿ ಸೂರತ್‌ನಿಂದ ಕಾಂಗ್ರೆಸ್ ಅಭ್ಯರ್ಥಿ. ಕಾಂಗ್ರೆಸ್ಸಿಗೆ ಬಹುಮತಕ್ಕೆ ಒಂದೇ ಒಂದು ಸ್ಥಾನ ಕಡಿಮೆ ಎನಿಸುವ ಪ್ರಸಂಗ (೧೭೫ರ ಪೈಕಿ ಕಾಂಗ್ರೆಸ್ಸಿಗೆ ೮೭ ಸ್ಥಾನಗಳು). ಬಾಳಾಸಾಹೇಬ್ ಖೇರ್ ಅವರು ಬಹುಮತ ಪಕ್ಷದ ಮುಖಂಡರಾಗಿ ಸಚಿವ ಸಂಪುಟ ರಚಿಸಿದರು. ಆ ಸಂಪುಟದಲ್ಲಿ ಮೊರಾರ್ಜಿಯವರನ್ನು ಸೇರಿಸಿಕೊಳ್ಳುವ ವಿಷಯದಲ್ಲಿ ಸರ್ದಾರ್ ಪಟೇಲರು ವಿರೋಧ ವ್ಯಕ್ತಪಡಿಸಿದರು. ಆದರೆ ಉಳಿದ ಕಾಂಗ್ರೆಸ್ ನೇತಾರರ ಇಚ್ಛೆಯಂತೆ ಮೊರಾರ್ಜಿ ಸಂಪುಟದಲ್ಲಿ ಒಬ್ಬರಾಗಿ ಕಂದಾಯ, ಒಕ್ಕಲುತನ, ಸಹಕಾರ ಖಾತೆಗಳನ್ನು ವಹಿಸಿಕೊಂಡರು.

ಅಂದಿನ ಸರಕಾರ ವಶಪಡಿಸಿಕೊಂಡು ಲಿಲಾವು ಮಾಡಿದ್ದ, ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದವರೆಲ್ಲರ ಜಮೀನನ್ನು ಖರೀದಿಸಿದವರಿಂದ ಮರಳಿ ಅವುಗಳ ಮೊದಲಿನ ಒಡೆಯರಿಗೇ ದೊರಕಿಸಿಕೊಡುವಲ್ಲಿ; ಬರಗಾಲ ಕಾಮಗಾರಿಗಳಲ್ಲಿ ದುಡಿಯುವವರಿಗೆ ಜಾಸ್ತಿ ಕೂಲಿ ಕೊಡಲು ನಿರಾಕರಿಸಿದ್ದ ಅಧಿಕಾರಿಗಳಿಂದಲೇ ಅದು ಸಿಕ್ಕುವಂತೆ ಮಾಡುವಲ್ಲಿ ಮತ್ತು ಪಾನನಿರೋಧವನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವಲ್ಲಿ ಮೊರಾರ್ಜಿ ಆದ್ಯಗಮನವಿತ್ತರು. ಅದೇ ಹೊತ್ತಿಗೆ ಎರಡನೆ ಜಾಗತಿಕ ಯುದ್ಧದಲ್ಲಿ ಭಾರತವೂ ಭಾಗಿಯಾಗಬೇಕೆಂಬ ಬ್ರಿಟನ್ ಆದೇಶವನ್ನು ಕಾಂಗ್ರೆಸ್ಸು ವಿರೋಧಿಸಿದ ಪರಿಣಾಮವಾಗಿ ಆ ಪಕ್ಷದ ಮಂತ್ರಿಮಂಡಲಗಳೆಲ್ಲ ರಾಜೀನಾಮೆ ಕೊಟ್ಟವು. ಎ.ಐ.ಸಿ.ಸಿ.ಯ ೧೯೪೦ರ ಸಭೆಯಲ್ಲಿ, ಬ್ರಿಟಿಶರು ಸ್ವರಾಜ್ಯವನ್ನಿತ್ತರೆ ಮಾತ್ರ ಸಮರದಲ್ಲಿ ಅವರಿಗೆ ಸಹಾಯವೊದಗಿಸಬೇಕೆಂಬ ನಿರ್ಣಯ ಸ್ವೀಕೃತವಾಯಿತು ಆದರೂ ಭಾರತವನ್ನು ಯುದ್ಧಕ್ಕೆ ಅಟ್ಟಿದ್ದರಿಂದ ಶುರುವಾಯಿತು. ವೈಯಕ್ತಿಕ ಸತ್ಯಾಗ್ರಹ. ವಿನೋಬಾ, ನೆಹರೂರಿಂದ ಆರಂಭವಾದ ಈ ಸತ್ಯಾಗ್ರಹದಲ್ಲಿ ತೊಡಗಿದ್ದವರೆಲ್ಲ ಬಂಧಿಸಲ್ಪಟ್ಟರು. ಮೊರಾರ್ಜಿ ಮೊದಲು ಸಬರ್ಮತಿ ಸೆರೆಮನೆಯಲ್ಲೂ ನಂತರ ಯರವಡಾ ಜೇಲಿನಲ್ಲೂ

ಕೂಡಿಹಾಕಲ್ಪಟ್ಟು ೧೯೪೪ರ ಅಕ್ಟೋಬರ್ ಅಂತ್ಯಕ್ಕೆ ಮುಕ್ತರಾದರು.

'ಕ್ವಿಟ್ ಇಂಡಿಯ'ದ ಐತಿಹಾಸಿಕ ಘೋಷಣೆಯನ್ನು ಮಹಾತ್ಮಾ ಮಾಡುತ್ತಲೇ ಅವರನ್ನೂ ಒಳಗೊಂಡಂತೆ ಮಹದೇವ ದೇಸಾಯಿ, ಬಾಳಾಸಾಹೇಬ ಖೇರ್, ಮೊರಾರ್ಜಿಯವರನ್ನೆಲ್ಲ ಬಂಧಿಸಿ ಪ್ರತ್ಯೇಕ ರೈಲಿನಲ್ಲಿ ಅಹಮ್ಮದ್‌ನಗರಕ್ಕೆ ಕೊಂಡೊಯ್ಯಲಾಯಿತು. ಮತ್ತೆ ೧೯೪೫ರವರೆಗೆ ಮೊರಾರ್ಜಿ ಪಂಜರದ ಗಿಣಿ'. ಈ ಮೊದಲೇ ಹೇಳಿದಂತೆ ಸೆರೆವಾಸಗಳು ಮೊರಾರ್ಜಿ ಪಾಲಿಗೆ 'ಶಿಸ್ತುಬದ್ಧ ಜೀವನ ರೂಢಿಸಿಕೊಳ್ಳುವ ಅವಕಾಶ'. ಈ ಹಿಂದೆ ಇಂಥ ಸಂದರ್ಭದಲ್ಲಿ 'ಭಗವದ್ಗೀತೆ'ಯ ಒಂದೊಂದು ಅಧ್ಯಾಯವನ್ನು ಪ್ರತಿದಿನವೂ ಕಂಠಸ್ಥ ಮಾಡಿಕೊಂಡಿದ್ದ ಮೊರಾರ್ಜಿ ಈ ಬಾರಿ ಉರ್ದು ಭಾಷೆಯನ್ನು ಕಲಿಯುವ ಪ್ರಯತ್ನಕ್ಕಿಳಿದರು.

ಸ್ವಾತಂತ್ರ್ಯಕ್ಕೆ ಒಂದು ವರ್ಷ ಮುಂಚೆ, ೧೯೪೬ರಲ್ಲಿ ರಾಜ್ಯಗಳಲ್ಲಿ ಪ್ರಜಾಸರಕಾರಗಳು ರಚಿಸಲ್ಪಟ್ಟಾಗ ಮುಂಬಯಿ ರಾಜ್ಯಕ್ಕೆ ಮತ್ತೆ ಖೇರ್ ಮುಖ್ಯಮಂತ್ರಿ. ಮೊರಾರ್ಜಿಗೆ ಮತ್ತೆ ಗೃಹಖಾತೆ. ಜೀತವಿಮುಕ್ತಿ ಶಾಸನ, ಮಹಿಳೆಯರ ಸ್ಥಿತಿ ಭದ್ರತೆಗೆಂದು 'ಏಕಪತ್ನಿ' ಶಾಸನ ಹಾಗೂ ಮಹಿಳೆಯರಿಗೆ ವಿಚ್ಛೇದನದ ಹಕ್ಕು ನೀಡುವ ಶಾಸನ, ಚಲನಚಿತ್ರಗೃಹಗಳಲ್ಲಿ ಧೂಮಪಾನ ನಿಷೇಧ ಮುಂತಾದವು ಆಗ ಮೊರಾರ್ಜಿ ಮಾಡಿದ ಶಾಸನಗಳು.

ಸ್ವಾತಂತ್ರ್ಯ ಬಂತು.

ದೇಶ ವಿಭಜನೆ, ನಿರಾಶ್ರಿತರ ದೌಡು, ರಕ್ತಪಾತ-ಕೊಲೆ ಸುಲಿಗೆ, ಸಂಸ್ಥಾನಗಳ ವಿಲೀನೀಕರಣ ಸಂಬಂಧವಾಗಿ ಉಂಟಾದ ಹಾವಳಿಗಳು. ಇವೆಲ್ಲವುಗಳಿಗಿಂತ ಅವರಿಗೆ ಹೆಚ್ಚು ದುಃಖತಂದದ್ದು ಮಹಾತ್ಮಾ ಗಾಂಧೀಜಿ ಗುಂಡೇಟಿಗೆ ಬಲಿಯಾದ ಸಂದರ್ಭ.

"ಮೊದಲ ಬಾರಿಗೆ ನಾನು ಅನಾಥ ಪ್ರಜ್ಞೆಯಿಂದ ಬಳಲಿದೆ" ಎನ್ನುತ್ತಾರೆ ಮೊರಾರ್ಜಿ. "ನನ್ನ ಬಾಳಿನ ಬೆಳಕಾಗಿದ್ದ ಬಾಪೂ ಕೊಲೆ ನನ್ನನ್ನು ನಡುಗಿಸಿಬಿಟ್ಟಿತು. ಆ ಹಂತಕನನ್ನೂ ಅವನ ಸಮರ್ಥಕರನ್ನೂ ನಾನೆಂದೂ ಕ್ಷಮಿಸಲಾರೆ" ಎನ್ನುತ್ತಾರೆ ಅವರು.

೧೯೫೨ರಲ್ಲಿ ಮೊದಲ ಸಾರ್ವತ್ರಿಕ ಚುನಾವಣೆ. ಮುಂಬಯಿ ವಿಧಾನಸಭೆಗೆ ಸ್ಪರ್ಧಿಸಿದ್ದ ಮೊರಾರ್ಜಿ ಕೇವಲ ೧೯ ಮತಗಳ ಅಂತರದಿಂದ ಸೋತರು. ಪ್ರಧಾನಿ ನೆಹರೂ, ಮಾಜಿ ಮುಖ್ಯಮಂತ್ರಿ ಖೇರ್ ಹಾಗೂ ಇತರ ಕಾಂಗ್ರೆಸ್ ಧುರೀಣರ ಒತ್ತಾಸೆಯಂತೆ ಮೊರಾರ್ಜಿ ಮತ್ತೆ ಸ್ಪರ್ಧಿಸಿದರಲ್ಲದೆ ಆ ವಿಧಾನಸಭೆಯ ಶಾಸಕಾಂಗ ಪಕ್ಷದ ನಾಯಕನೂ ಆದರು. ಮುಂಬಯಿ ರಾಜ್ಯದ ಮುಖ್ಯಮಂತ್ರಿಯಾದ ಅವರು ರಾಜ್ಯಗಳ ಮರುವಿಂಗಡಣೆಯ ಪ್ರಕ್ರಿಯೆ ಪೂರ್ಣವಾದಾಗ ಮಹಾರಾಷ್ಟ್ರ ರಾಜ್ಯಕ್ಕೆ ಮಹಾರಾಷ್ಟ್ರದವರೇ ಮುಖ್ಯಮಂತ್ರಿಯಾಗಿರಬೇಕೆಂಬ ತತ್ವವನ್ನನುಸರಿಸಿ ಮುಖ್ಯ ಮಂತ್ರಿಪದಕ್ಕೆ ರಾಜೀನಾಮೆ ನೀಡಿದರು. ಭಾಷಾವಾರು ಪ್ರಾಂತ ರಚನೆಯ ಕಾರಣವೊಡ್ಡಿ



ಮಹಾರಾಷ್ಟ್ರ ಸರಕಾರದ ಗೃಹಸಮುಚ್ಚಯ 'ಸಾರಂಗ'. ಇಲ್ಲಿ ಆರನೆಯ ಮಹಡಿಯಲ್ಲಿ ವಾಸಿಸಿದ್ದಾರೆ ಮೊರಾರ್ಜಿ.

### ಮೊರಾರ್ಜಿ ಉವಾಚ....

"ಸಾಧನೆ ಸದಾ ಕಾಲಕ್ಕೂ ತ್ಯಾಗದಿಂದ ಮಾತ್ರ ಸಾಧ್ಯ. ಸ್ವಯಂ ಶಿಸ್ತು ಬೆಳೆಸಿಕೊಂಡರೆ ಸದ್ಭಾವ ತಂತಾನೇ ಮೈಗೂಡುತ್ತದೆ. ಸದ್ಭಾವ ಮೈಗೂಡಿದರೆ ಶಾಂತಿ ನೆಲೆಸುತ್ತದೆ. ಶಾಂತಿಯಿರುವೆಡೆಯಲ್ಲಿ ಹಿಂಸೆ ತಲೆಹಾಕಲೂ ಹಿಂಜರಿಯುತ್ತದೆ."

"ನನ್ನ ಕಾಲದಲ್ಲೂ ಭ್ರಷ್ಟ ರಾಜಕಾರಣಿಗಳಿದ್ದರು. ಆದರೆ ಅಲ್ಲೊಬ್ಬ ಇಲ್ಲೊಬ್ಬ. ಈ ಜಾತಿ ಮತ್ತು ಭ್ರಷ್ಟಾಚಾರಗಳು ನಮ್ಮ ದೇಶವನ್ನು ಅಭದ್ರ ಸ್ಥಿತಿಗೆ ತಳ್ಳಿ ಬಿಟ್ಟಿವೆ."

"ಪ್ರತಿಷ್ಠೆ ಬೆಳೆಸಿಕೊಳ್ಳುವುದೆಂದರೆ ನನಗಾಗದ ಮಾತು. ಅಂಥ ಯಾವ ಪ್ರಯತ್ನವನ್ನೂ ನೀವು ಮಾಡಕೂಡದು."

ಗುಜರಾತದಲ್ಲಿ ಉಂಟಾಗಬಹುದಾಗಿದ್ದ ಹಿಂಸಾಚಾರವನ್ನು ಆಮರಣ ನಿರಶನ ವ್ರತ ಆಚರಿಸುವುದಾಗಿ ಹೇಳುವ ಮೂಲಕ ನಡೆಯಗೊಡದಂತೆ ಮಾಡಿದರು.

ಪಂ. ನೆಹರೂರ ಪರಮಾಪ್ತರಲ್ಲೊಬ್ಬರು ಮೊರಾರ್ಜಿ. ೧೯೫೩ರಷ್ಟು ಹಿಂದೆಯೇ "ಕೇಂದ್ರ ಸರಕಾರಕ್ಕೆ ಬಂದುಬಿಡಿ" ಎಂದು ಜವಾಹರರಿಂದ ಆಹ್ವಾನಿಸಲ್ಪಟ್ಟಿದ್ದರೂ ದಿಲ್ಲಿಗೆ ಹೋದದ್ದು ಮೂರು ವರ್ಷಗಳ ನಂತರವೆ. ಮೊದಲು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ. ಮುಂದೆ 'ಮುಂದ್ರಾ ಕಾಂಡ'ದಿಂದಾಗಿ ಟಿ.ಟಿ. ಕೃಷ್ಣಮಾಚಾರಿ ರಾಜೀನಾಮೆ ನೀಡಿದಾಗ ಅವರ (ಹಣಕಾಸು) ಖಾತೆ. ವಿತ್ತಮಂತ್ರಿಯಾಗಿ ಅವರು 'ಚಿನ್ನದ ನಿಯಂತ್ರಣ'ದಂಥ ದಿಟ್ಟ ಹೆಜ್ಜೆಯಿಟ್ಟಾಗ ದೇಶಾದ್ಯಂತ ಕೋಲಾಹಲ. ಮೊರಾರ್ಜಿ ಅಂಜಲಿಲ್ಲ.

೧೯೫೯ರಲ್ಲಿ ಕಾಂಗ್ರೆಸ್ ಅಧ್ಯಕ್ಷೆಯಾಗಿದ್ದ ಇಂದಿರಾ ಮರುವರ್ಷ ಆ ಪದದಿಂದ ಹಿಂದೆ ಸರಿದಾಗ ಮೊರಾರ್ಜಿ ಒಲುಮೆಯಂತೆ ಆ ಪಟ್ಟ ವಹಿಸಿಕೊಂಡವರು ನೀಲಂ. ತಮ್ಮ ಅನೇಕ ಕ್ರಮಗಳಿಗೆ ಕೇಂದ್ರ ಸಂಪುಟದ ಸಹೋದ್ಯೋಗಿಗಳ ವಿರೋಧವಿದ್ದಾಗ್ಯೂ ಹೌಹಾರದೆ ನೆಹರೂನಿಷ್ಠರಾಗಿ ಮೊರಾರ್ಜಿ ಕೊಟ್ಟ ಕೆಲಸ ಮಾಡಿದರು. ಮುಂದೆ ಚೀನದ ಯುದ್ಧ. ರಕ್ಷಣಾ ಮಂತ್ರಿ ಕೃಷ್ಣಮೆನನ್ ರಾಜೀನಾಮೆ ನೀಡಬೇಕಾಯಿತು. ಆಗ ವೈ.ಬಿ. ಚವ್ಹಾಣರನ್ನು ಆ ಜಾಗಕ್ಕೆ ತರುವಲ್ಲಿ ಮೊರಾರ್ಜಿಯವರದೇ ನಿರ್ಣಾಯಕ ಪಾತ್ರ.

ಆದರೆ ಕಾಮರಾಜ ಯೋಜನೆಯಿಂದ ಉಳಿದೆಲ್ಲರಿಗಿಂತ ಹೆಚ್ಚು ಪೆಟ್ಟು ಬಿದ್ದದ್ದು ಮೊರಾರ್ಜಿಗೆ. ನೆಹರೂ ನಿಧನಾ ನಂತರ ಪ್ರಧಾನಿ ಪಟ್ಟದ ಸಮೀಪ ಇವರು ಸುಳಿಯದಂತೆ ಮಾಡಿ, ಲಾಲ್ ಬಹಾದ್ದೂರರನ್ನು ಆ ಪಟ್ಟಕ್ಕೇರಿಸಿದರು ಕಾಮರಾಜ್. ಪಕ್ಷದ ಶಿಸ್ತು ಮತ್ತು ಏಕತೆಯ ಬಗೆಗಿನ ಮೊರಾರ್ಜಿಯ ನಂಬಿಕೆ-ನಿಷ್ಠೆಗಳನ್ನೇ ದಾಳವಾಗಿಸಿಕೊಂಡಿದ್ದರು ಕಾಮರಾಜ್. ಶಾಸ್ತ್ರೀಜಿಯ ನಿಧನಾನಂತರ ಇಂದಿರಾ ಪ್ರಧಾನಿಯಾದದ್ದು, ಮೊರಾರ್ಜಿ ಉಪಪ್ರಧಾನಿಯಾದದ್ದು, ಮುಂದೆ ೧೯೬೯ರಲ್ಲಿ ಕಾಂಗ್ರೆಸ್ಸು ಮೊಟ್ಟ ಮೊದಲ ಬಾರಿಗೆ ಇಬ್ಭಾಗವಾಗಿ ಇಂದಿರಾ ಪ್ರಾಬಲ್ಯ ಹೆಚ್ಚಾದದ್ದು, ಅದರ ವಿರುದ್ಧ ದೇಶಾದ್ಯಂತ ಚಳವಳಿ ನಡೆದದ್ದು ಎಲ್ಲರಿಗೂ ಗೊತ್ತು. ತುರ್ತು ಪರಿಸ್ಥಿತಿಯಲ್ಲಂತೂ ತಮ್ಮ ಸ್ಥಾನಕ್ಕೆ ಸಂಚಕಾರ ತರಲೆತ್ನಿಸಿದ ಎಲ್ಲರನ್ನೂ ಇಂದಿರಾ ಸೆರೆಗಟ್ಟಲು ಮುಂದಾದರು. ಮೊರಾರ್ಜಿ, ಜೆ.ಪಿ., ಮುಂತಾದ ಹಿರಿಯರನ್ನೆಲ್ಲ ಸರಳುಗಳ ಹಿಂದೆ ಕೂಡಿಹಾಕಲಾಗಿತ್ತು. ಅವರ ಬದುಕಿನ ಇತಿಶ್ರೀಯಾಯಿತೆಂದೇ ಭಾವಿಸಲಾಗಿತ್ತು. ಆದರೆ ತುರ್ತು ಪರಿಸ್ಥಿತಿಯನ್ನು ಕೊನೆಗಾಣಿಸಿ, ಚುನಾವಣೆ ಘೋಷಿಸಲ್ಪಟ್ಟಾಗ ಇಂದಿರಾ ವಿರುದ್ಧದ ಪ್ರವಾಹ ಆಕೆಯನ್ನು ಥರಗುಟ್ಟಿಸಿತು. ಹಲವು ಪಕ್ಷಗಳಿಂದೊಡಗೂಡಿದ 'ಜನತಾ ಪಕ್ಷ' ರಾರಾಜಿಸಿತು. ಮೊರಾರ್ಜಿ ಪ್ರಧಾನಿಯಾದರು.

ನಂತರದ ವಿದ್ಯಮಾನಗಳೆಲ್ಲ ಸರ್ವವಿದಿತ. ಬಿಸುಗೆಗಳು ಬಿಚ್ಚಿಕೊಂಡವು. ಆದರ್ಶ-ಉಚ್ಚ ಧ್ಯೇಯಗಳನ್ನು ಉಚ್ಚರಿಸಿ ಅಧಿಕಾರಕ್ಕೆ ಬಂದಿದ್ದ ಜನತಾಪಕ್ಷ ಕುರುಕ್ಷೇತ್ರವಾಗಿ ಪರಿಣಮಿಸಿತು. ಕಾಲೆಳೆತ, ಕಚ್ಚಾಟ ನಿತ್ಯದ ಮಾತಾಯಿತು. ಮೊರಾರ್ಜಿ ದೇಸಾಯಿ ಪದ ಬಿಟ್ಟುಕೊಡಬೇಕಾಯಿತು. ದಿಲ್ಲಿಯಲ್ಲಿ ಸ್ವಂತ ಮನೆಯನ್ನೂ ಕಟ್ಟಿಕೊಳ್ಳದ ಮೊರಾರ್ಜಿ ಪ್ರಧಾನಿ ನಿವಾಸವನ್ನು ತತ್‌ಕ್ಷಣವೆ ಬಿಟ್ಟುಕೊಟ್ಟು ತಮ್ಮೆಲ್ಲ ಸಾಮಾನು-ಸರಂಜಾಮುಗಳೊಂದಿಗೆ, ಮುಂಬಯಿಗೆ ಬಂದುಬಿಟ್ಟರು. ಆಗಿನಿಂದಲೂ ಅವರು

## ಇಂದಿನ ಭಾರತದ ಪ್ರತಿನಿಧಿ!

**ನಾ**ಲ್ಕು ವರ್ಷಗಳ ಹಿಂದಿನ ಮಾತು. ತರುಣ ಛಾಯಾಚಿತ್ರಗ್ರಾಹಕನೊಬ್ಬ ಮೊರಾರ್ಜಿಯವರ ಫೋಟೋ ತೆಗೆದುಕೊಳ್ಳಲು ಬಂದ. ಶುಭ್ರ ಖಾದಿ ತೊಟ್ಟ ಮೊರಾರ್ಜಿ ಆತನನ್ನು ಕಾಲುಬೆರಳಿನಿಂದ ತಲೆಗೂದಲತನಕ ತದೇಕಚಿತ್ತರಾಗಿ ನೋಡಿದರು. ಹಾಗೆ ತನ್ನನ್ನವರು ನೋಡುತ್ತಿದ್ದುದಕ್ಕೆ ಆ ಹುಡುಗ ಮುಜುಗರಕ್ಕೊಳಗಾದ. ಮೊರಾರ್ಜಿ ಈ ಕಿವಿಯಿಂದ ಆ ಕಿವಿಯಗಲ ನಗೆ ಚೆಲ್ಲಿದರು. ನಂತರ, "ಬಾ... ಬಾ ನನ್ನ ಆಧುನಿಕ ಭಾರತದ ಪ್ರತಿನಿಧಿಯೆ ಬಾ. ಆಹಾ ನೀ ತೊಟ್ಟ ವೇಷವೇ! ವಾಹವ್ವಾ. ನಿನ್ನ ಜೀನ್ಸ್ ಪ್ಯಾಂಟು.... ಮೇಲೆ ತೊಟ್ಟ ಅಂಗಿ.... ಆ ಹುತ್ತದಂಥ ತಲೆಗೂದಲು.... ಬಟ್ಟೆಗೆಲ್ಲಾ ಹಚ್ಚಿಕೊಂಡಿರುವ ತೇಪೆಗಳು.... ನಮ್ಮ ದೇಶದ ಅಶಿಸ್ತೆಲ್ಲವನ್ನೂ ಪ್ರತಿನಿಧಿಸುವಂತಿದೆ ನೋಡು...." ಎಂದರಂತೆ.

ಇರುವುದು ತಮ್ಮ ಮಗ ಕಾಂತಿಭಾಯಿಯೊಂದಿಗೆ. ಮತ್ತೆ ದಿಲ್ಲಿಯತ್ತ ತಲೆಮಾಡಿಯೂ ಮಲಗದ ನಿರ್ಧಾರದೊಂದಿಗೆ. ಆ ಮಾತಿಗೀಗ ಹದಿನಾರು ವರ್ಷಗಳಾಯಿತು.

●

"ಯಾರೂ ಎಂದಿಗೂ ಯಾವ ದೇಶವನ್ನೂ ಭಯದ ನೆರವಿನಿಂದ ಆಳಲು ಸಾಧ್ಯವಿಲ್ಲ ಎಂಬುದು ನನ್ನ ದೃಢ ನಂಬಿಕೆ. ನಿಜವಾದ ಪ್ರಧಾನಿಯೊಬ್ಬ ರಾಷ್ಟ್ರಕ್ಕೆ ತಾನೇ ಮಾದರಿಯಾಗಿ ನಿಲ್ಲಬೇಕು, ಜನಮನವನ್ನು ಗೆಲ್ಲಬೇಕು. ತನ್ನ ಕೈಯಲ್ಲಿ ದಂಡವಿದೆಯೆಂದು ಎಲ್ಲರೂ ತನಗೆ ಡೊಗ್ಗಿ ಸಲಾಮು ಹೊಡೆಯಬೇಕೆಂದು, ಹಾಗೆ ಮಾಡದಿದ್ದರೆ ದಂಡ ಬೀಸಿಯಾದರೂ ಅವರಿಂದ ಸಲಾಮು ಪಡೆಯಬೇಕೆಂದು ಎಂದಿಗೂ ಬಯಸಬಾರದು," ಎಂದೆನ್ನುವ ಮೊರಾರ್ಜಿ, "ಭಯವೆಂಬುದು ಯಾವಾಗಲೂ ಪ್ರತಿಯಾಗಿ ಸಮಸ್ಯೆಗಳನ್ನು ಹುಟ್ಟಿಸುವಂಥದು. ಭಯದ ನೆರವಿನಿಂದ ಸಮಸ್ಯೆಯನ್ನು ಪರಿಹರಿಸಲಾಗುವುದಿಲ್ಲ" ಎಂಬ ಅಭಿಪ್ರಾಯದವರು.

"ಮತ್ತೊಬ್ಬನತ್ತ ಬೆರಳು ತೋರಿಸುವ ಮುನ್ನ ತನ್ನನ್ನು ತಾನು ಪರಿಶುದ್ಧನನ್ನಾಗಿಸಿಕೊಳ್ಳಬೇಕು. ಅದು ಕೇವಲ ಹೇಳಿಕೊಂಡರೆ ಬರುವಂಥದಲ್ಲ. ಆಚರಣೆಯಿಂದ ರೂಢವಾಗುವಂಥದು," ಎನ್ನುವ ಮೊರಾರ್ಜಿಭಾಯಿ, "ನಮ್ಮಲ್ಲಿ ದೇಶಪ್ರೇಮವೆಂಬುದು ಹುಡುಕಿದರೂ ಸಿಗದಂಥ ವಸ್ತುವಾಗಿಬಿಟ್ಟಿದೆ. ಹಾಗೆ ನೋಡಿದರೆ ಅದು ನಮ್ಮಲ್ಲಿ ಎಂದಿಗೂ ಇರಲೇ ಇಲ್ಲ. ಸಾವಿರಾರು ಸಂಸ್ಥಾನಗಳಲ್ಲಿ ಹಂಚಿಹೋಗಿದ್ದ ದೇಶದಲ್ಲಿ ಇದ್ದದ್ದು ಬರಿ ಒಬ್ಬನಿನ್ನೊಬ್ಬನ ಕತ್ತುಕುಯ್ಯಬೇಕೆಂಬ ಮನೋಭಾವ, ಕುತ್ಸಿತತನ ಮತ್ತು ಸ್ವಾರ್ಥ. ಹಾಗಿರದಿದ್ದರೆ ಬ್ರಿಟಿಶರು ನಮ್ಮಲ್ಲಿ ಬಂದು ಅಧಿಕಾರವನ್ನೇಕೆ ಚಲಾಯಿಸುತ್ತಿದ್ದರು? ನಾವು ಬ್ರಿಟಿಶರಿಂದಲೇ ದೇಶಪ್ರೇಮ ಅಂದರೇನೆಂದು ಕಲಿಯಬೇಕಾಯಿತು. ಅದನ್ನೇ ಅವರ ವಿರುದ್ಧ ಅಸ್ತ್ರವನ್ನಾಗಿ ಪ್ರಯೋಗಿಸಲು ಮಹಾತ್ಮಾ ನಮಗೆ ಕಲಿಸಿದರು. ಹೇಗೆ ಸ್ವತಂತ್ರರಾಗಿ ಬಾಳಬೇಕೆಂಬುದನ್ನೂ ಬಾಪೂಜಿ ನಮಗೆ ಕಲಿಸಿಕೊಟ್ಟರು. ಜಪಾನಿಗರ ಹಾಗೆ ನಿಜವಾಗಿಯೂ ದೇಶಪ್ರೇಮಿಗಳು ನಾವಾದಾಗ ಈ ಕಪ್ಪು ಹಣ, ಕಳ್ಳ ಸಾಗಾಟ, ಅಕ್ರಮ ಸಂಪದ ಸಂಗ್ರಹಗಳು ಎಲ್ಲಿರುತ್ತವೆ? ಆಗ ಜನ ದೇಶದ ಆರ್ಥಿಕ ಸ್ಥಿತಿಯ ಕುರಿತು ಯೋಚಿಸತೊಡಗುತ್ತಾರೆಯೆ ಹೊರತು ತಮ್ಮ ಸ್ವಿಸ್ ಬ್ಯಾಂಕ್ ಖಾತೆಯ ಬಗ್ಗೆ ಅಲ್ಲ. ಜಪಾನಿನಲ್ಲಿ ಕಪ್ಪು ಹಣ ಪ್ರಕರಣಗಳು ಇಲ್ಲವೆ ಇಲ್ಲವೆಂದೇನಲ್ಲ. ಅಲ್ಲಿಯ ಪ್ರಧಾನಿ ತನಾಕಾ ಆ 'ಲಾಕ್‌ಹೀಡ್' ವ್ಯವಹಾರದ ಕಾರಣದಿಂದಲೇ ಅಲ್ಲವೆ ಸೆರೆಮನೆಗೆ ಹೋಗಬೇಕಾಯಿತು. ಆದರೆ ನಮ್ಮ ದೇಶದಲ್ಲಿ ಎಷ್ಟು ಜನ ಮಂತ್ರಿಗಳ ಮನೆಗಳ ಮೇಲೆ ರೇಡ್ ನಡೆದಿದೆ? ಎಷ್ಟು ಜನ ರಾಜಕೀಯ ಮುಂದಾಳುಗಳ ಕಪ್ಪು ಹಣದ ವಿವರಗಳು ಹೊರಬಿದ್ದಿವೆ? ಪ್ರಧಾನಿಯೊಬ್ಬ ದುರ್ವ್ಯವಹಾರದಲ್ಲಿ ತೊಡಗಿದ್ದಾನೆಂಬ, ಲಂಚ ಇಲ್ಲವೆ ಲಾಭಾಂಶ ಸ್ವೀಕರಿಸಿದ್ದಾನೆಂಬ ಗುಲ್ಲು ಏಳಲು ಕಾರಣವೇನು? ಇಂಥ ಸಂದರ್ಭಗಳಲ್ಲಿ ಯಾವ ಪ್ರಧಾನಿ ತಾನು ನಿಜಕ್ಕೂ ನಿರಪರಾಧಿ ಅಥವಾ ನಿರ್ಮಲ ಚಾರಿತ್ರ್ಯದವನು ಎಂಬುದನ್ನು ಸಾಬೀತು ಮಾಡಲು ಪದತ್ಯಾಗದಂಥ ಕ್ರಮ ಅನುಸರಿಸಿದ್ದಾನೆ?" ಅವರು ಪ್ರಶ್ನೆಗಳನ್ನು ಕೇಳುತ್ತಲೇ ಹೋಗುತ್ತಾರೆ.

ಹೊಸ ಕೈಗಾರಿಕಾ ನೀತಿಯ ಬಗೆಗೂ



ಮೊರಾರ್ಜಿ "ಅದು ಒಳ್ಳೆಯದಲ್ಲ" ಎನ್ನುತ್ತಾರೆ. "ನಮ್ಮ ರಾಷ್ಟ್ರದಲ್ಲಿ ಬಂದು ಬಂಡವಾಳ ತೊಡಗಿಸಿ, ಉದ್ದಿಮೆ ಆರಂಭಿಸಿ ಎಂದರೆ ಪರದೇಶದ ಉದ್ಯಮಿಗಳಿಗೆ ಸಂತಸವಾಗದಿದ್ದೀತೆ? ದೇಶೀ ಕೈಗಾರಿಕೆಗಳನ್ನು ತನ್ಮೂಲಕ ಅಸ್ಥಿರಗೊಳಿಸಿದಂತಾಗುವುದಿಲ್ಲವೆ? ನಾವು ಸ್ವಾವಲಂಬಿಗಳಾಗಬೇಕೆಂದರು ಮಹಾತ್ಮಾ. ನಮ್ಮ ಮಿದುಳನ್ನೇ ಸರಿಯಾಗಿ ಬಳಸಿಕೊಳ್ಳಲು ಕಲಿಯದೇ ನಮಗೆ ಈ ಕಂಪ್ಯೂಟರು, ಟೆಲಿವಿಜನ್‌ಗಳ ಪ್ರಯೋಜನವಾದರೂ ಏನು? ಉನ್ನತ ತಾಂತ್ರಿಕತೆ ನಮ್ಮೆಲ್ಲಾ ಸಮಸ್ಯೆಗಳಿಗೆ ಉತ್ತರವೂ ಅಲ್ಲ, ಪರಿಹಾರವೂ ಅಲ್ಲ. ಸ್ವಾವಲಂಬನೆಯಲ್ಲಿ ಮಾತ್ರ ಇಂಥ ಉತ್ತರವಿದೆ, ಪರಿಹಾರವಿದೆ. ನೆಹರೂ ಕೂಡ ಅದನ್ನೆತ್ತಿ ಹೇಳಿದರು. ನಾವು ಹೆಚ್ಚು ಬಲಿಷ್ಠರಾಗಬೇಕು, ಹೆಚ್ಚು ಸ್ವತಂತ್ರರಾಗಬೇಕು. ನಮ್ಮ ಕಾಲ ಮೇಲೆ ನಾವು ನಿಂತುಕೊಳ್ಳಬೇಕು. ಆಮೇಲೆ ಇತರರನ್ನು 'ಬನ್ನಿ' ಎಂದು ಆಮಂತ್ರಿಸಬೇಕು."

ಗಾಂಧಿಯವರ ಕಟ್ಟಾ ಅನುಯಾಯಿಯಾದ ಮೊರಾರ್ಜಿಯವರು ರಿಚರ್ಡ್ ಅಟೆನ್‌ಬರೋನ 'ಗಾಂಧಿ' ಚಿತ್ರವನ್ನು ನೋಡಲಿಲ್ಲವಂತೆ. "ಅದನ್ನು ನೋಡಿದವರು 'ಅದು ಕೇವಲ ಅರ್ಧ-ಸತ್ಯಗಳಿಂದೊಡಗೂಡಿದೆ' ಎಂದರು. ಇಂಥ ಚಿತ್ರವನ್ನಾಕೆ ನೋಡಬೇಕು?" ಎಂಬುದು ಅವರ ಪ್ರಶ್ನೆ. ಆದರೂ ಮಹಾತ್ಮಾಜಿಯ ಸಂದೇಶವನ್ನು ಜಗತ್ತಿಗೆಲ್ಲ ಮುಟ್ಟಿಸುವಲ್ಲಿ ಅದು ಯಶಸ್ವಿಯಾಯಿತೆಂಬುದನ್ನು ಅವರು ಒಪ್ಪುತ್ತಾರೆ. 'ಗಾಂಧಿ' ಎಂದಾಕ್ಷಣ ಪಾನಪ್ರತಿಬಂಧವೂ ನೆನಪಾಗುತ್ತದೆ. ಅದರ ರುಚಿನೋಡಿ, ಗೊತ್ತಿರದ ಮೊರಾರ್ಜಿ ಮದ್ಯಪಾನದ ದುಷ್ಪರಿಣಾಮಗಳನ್ನು ಮಾತ್ರ ಕಣ್ಣಾರೆ ಕಂಡು ನೊಂದವರು. "ಸಣ್ಣವನಿದ್ದೆ. ನನ್ನ ಸೋದರಿಯನ್ನು ಒಬ್ಬ ಕುಡುಕ ಚುಡಾಯಿಸಿದ. ಹೊಟ್ಟೆಯೊಳಗಿನ ಮದಿರೆ ಆತನನ್ನು ರಕ್ಕಸನನ್ನಾಗಿ, ಪಶುವನ್ನಾಗಿ ಮಾಡಿ ಆಡಿಸುತ್ತಿತ್ತು. ಅಂದಿನಿಂದಲೇ ಮದ್ಯಪಾನದ ಬಗ್ಗೆ ನನ್ನಲ್ಲಿ ಒಂದು ರೀತಿಯ ಆಕ್ರೋಶ ಬೆಳೆಯಿತು." ಹಾಗೆಯೇ "ನಾನು ತರುಣನಾಗಿದ್ದಾಗ ಧೂಮಪಾನ ಮಾಡುತ್ತಿದ್ದೆ" ಎಂದು ಪ್ರಾಂಜಲವಾಗಿ ಒಪ್ಪಿಕೊಳ್ಳುವ ಅವರು ನಂತರ ಅದನ್ನು ತ್ಯಜಿಸಿದರಂತೆ. "ಸೇದುವುದು ಅನೈತಿಕವೇನಲ್ಲ. ಆದರೆ ಅದು ಆರೋಗ್ಯಕ್ಕೆ ಮಾರಕ," ಎಂದೂ ಅವರು ಅಭಿಪ್ರಾಯಪಡುತ್ತಾರೆ.

ಮೊರಾರ್ಜಿ ಸಂಸಾರಿಯಾಗಿದ್ದುಕೊಂಡೂ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬಂದವರು. "ನಾನು ಪತ್ನಿಯೊಂದಿಗೆ ೭೦ ವರ್ಷ ಬಾಳಿದೆ. ಆದರೆ ಐದು ಜನ ಮಕ್ಕಳನ್ನಾಕೆ ಹೆತ್ತ ಮೇಲೆ 'ಬ್ರಹ್ಮಚರ್ಯ'ದತ್ತ ವಾಲಿದೆ. ಬಾಪೂಜಿಯೂ ಅಷ್ಟೇ ಅಲ್ಲವೆ? 'ಬ್ರಹ್ಮಚರ್ಯ' ನನಗೆ ನನ್ನ ದೇಹ ಮತ್ತು ಮನಸ್ಸುಗಳ ಮೇಲೆ ಹಿಡಿತ ಸಾಧಿಸಲು ನೆರವಾಯಿತು. ನನ್ನಾಕೆಯೂ ಸಹಕರಿಸಿದಳು. ಅಷ್ಟಾಗಿ ಓದಿರದಿದ್ದರೂ ಆಕೆ ನನ್ನಷ್ಟೇ ನಿಷ್ಠಾವಂತಳು. ಹಾಗೆಲ್ಲ ಒತ್ತಾಯಕ್ಕೆ ಮಣಿಯುವ ಜಾಯಮಾನದವಳಲ್ಲ. 'ಬ್ರಹ್ಮಚರ್ಯ' ಕುರಿತು ಸಾಕಷ್ಟು ಚರ್ಚೆಯ ನಂತರವೇ ಇಬ್ಬರೂ ಅದನ್ನು ಅನುಸರಿಸಲು ಒಪ್ಪಿದ್ದು."

ಸ್ವಮೂತ್ರಪಾನ ಚಿಕಿತ್ಸೆ ಎಂದಾಕ್ಷಣ ಮೊರಾರ್ಜಿಯವರ ನೆನಪಾಗುತ್ತದೆ. ಅದರಿಂದ ಮೊರಾರ್ಜಿ ಪಡೆದ ಪ್ರಯೋಜನವಾದರೂ ಏನು?

"ಐದು ಸಾವಿರ ವರ್ಷಗಳಷ್ಟು ಹಿಂದಿನಿಂದಲೇ ಈ ಚಿಕಿತ್ಸೆ ಆಚರಣೆಯಲ್ಲಿದೆ. ಜೆ.ಡಬ್ಲ್ಯು. ಆರ್ಮ್‌ಸ್ಟ್ರಾಂಗ್ ಎಂಬಾತನ ಒಂದು ಪುಸ್ತಕದಲ್ಲಿ ಮೊದಲ ಬಾರಿಗೆ ಸ್ವಮೂತ್ರಪಾನದ ಕುರಿತು ಓದಿದೆ. 'ಜೀವನ ಜಲ' ('The Water of Life') ಅದರ ಹೆಸರು. ಚಿಕಿತ್ಸೆ ಶುರುಮಾಡಿದೆ. ಪ್ರಯೋಜನ ಕಂಡಿತು.

ಮುಂದುವರಿಸಿದೆ. ನನ್ನನ್ನು ೩೫-೪೦ ವರ್ಷಗಳಿಂದ ಕಾಡುತ್ತಿದ್ದ ಮಲಬದ್ಧತೆ ಹತ್ತೇ ಹತ್ತು ದಿನಗಳಲ್ಲಿ ಓಡಿಹೋಯಿತು. ನಾನು ಎಂದಿಗಿಂತ ಆರೋಗ್ಯ ದಿಂದಿರುವ ಅನುಭವವಾಯಿತು. ನನ್ನ ಕಣ್ಣಪೊರೆ ಯನ್ನು ಅದು ಕಳಚಿಹಾಕಿತೆಂದರೆ ನೀವು ನಂಬಲಿ ಕ್ಕಿಲ್ಲ. ಕಣ್ಣಿಗೆ ಪೊರೆಗಟ್ಟಲು ಆರಂಭವಾದ ಹೊಸತಿ ನಲ್ಲೇ ನಾನು ಸ್ವಮೂತ್ರದಿಂದ ದಿನಕ್ಕೆರಡು ಬಾರಿ ಕಣ್ಣು ತೊಳೆದುಕೊಳ್ಳತೊಡಗಿದೆ. ಆ ಮೇಲೆ ದೃಷ್ಟಿ ಸಂಬಂಧದ ತೊಂದರೆಯೇ ಉಂಟಾಗಿಲ್ಲ. ೧೯೧೫ರಿಂದ ನಾನು ಔಷಧಿಗಳನ್ನೇ ಸೇವಿಸಿಲ್ಲ. ಅಷ್ಟೇ ಅಲ್ಲ, ನನಗೆ ಮೈಲಿ ಚುಚ್ಚಿಸಿಕೊಂಡಾಗಲಿ, ಇಂಜೆಕ್ಷನ್ ತೆಗೆದುಕೊಂಡಾಗಲಿ ಗೊತ್ತಿಲ್ಲ. ಸ್ವಲ್ಪ ಅನಾರೋಗ್ಯವೆಂದೆನಿಸಿದರೆ ನಾನು ಆಹಾರದಲ್ಲಿ ಅಲ್ಪ ಬದಲಾವಣೆಯನ್ನು ಅನುಸರಿಸುತ್ತೇನೆ. ಈ ಜಾಡ್ಯ-ಗೀಡ್ಯಗಳೆಲ್ಲ ಕರ್ಮಫಲ. ಈ ಔಷಧಗಳೆಲ್ಲ ಅಪಾಯಕರವೇ. ಉಪಪರಿಣಾಮಗಳಿಂದ ಔಷಧ ಉಂಟೆ? ಅದರಲ್ಲೂ ಅಲೋಪಥಿ ಔಷಧಗಳು. ಆದ್ದರಿಂದ ಅವುಗಳನ್ನು ದೂರವಿಡುವುದೇ ವಿಹಿತ ಎಂದು ನನ್ನ ನಂಬಿಕೆ."

ಜಗತ್ತಿನ ಎಲ್ಲ ದೇಶಗಳನ್ನೂ ಸುತ್ತಿರುವ ಮೊರಾರ್ಜಿ ಅಲ್ಲಿ ಹೋಗುವ ಮೊದಲು ರೋಗನಿ ರೋಧಕ ಚುಚ್ಚುಮದ್ದು ಪಡೆಯಲೂ ನಿರಾಕರಿಸಿ ಗೆದ್ದವರು.

"ಖಡಾಖಂಡಿತವಾಗಿ 'ಒಲ್ಲೆ' ಎಂದೆ. ನನ್ನ ವಿದೇಶ ಪ್ರವಾಸ ರದ್ದಾದರೂ ಚಿಂತೆಯಿಲ್ಲ, ಅದಕ್ಕಾಗಿ ಇಂಜೆಕ್ಷನ್ ಮಾತ್ರ ತೆಗೆದುಕೊಳ್ಳುವುದಿ ಲ್ಲವೆಂಬ ನನ್ನ ಹಟಕ್ಕೆ 'ವಿಶೇಷ ರಿಯಾಯಿತಿ'ಯೇ ಸಿಕ್ಕಿತು. ಕೆಲವರು 'ಇಂಜೆಕ್ಷನ್ ಕೊಟ್ಟಾಗಿದೆ' ಎಂಬ ಪ್ರಮಾಣಪತ್ರ ಕೊಡಲೂ ಮುಂದಾದರು. ಆದರೆ ನಾನ್ಯಾಕೆ ಸುಳ್ಳು ಪ್ರಮಾಣಪತ್ರ ಪಡೆಯ ಬೇಕು? ಬ್ರಿಟನ್, ಅಮೆರಿಕ, ರಷ್ಯಗಳಂಥಲ್ಲಿ ಈ ಕುರಿತ ಕಟ್ಟುನಿಟ್ಟಿನ ಆದೇಶಗಳಿದ್ದಾಗ್ಯೂ ನಾನು ಹಾಗೆಯೇ ಹೋಗಿ ಬಂದೆ. ೧೯೩೨-೩೩ರಲ್ಲಿ ಜೇಲಿನಲ್ಲಿದ್ದಾಗ ಪ್ಲೇಗಿನ ಹಾವಳಿ. ಆಗಲೂ ಇಂಜೆ ಕ್ಷನ್ ಬೇಡವೆಂದವ ನಾನು. ನನ್ನನ್ನು ಒಂಟಿಯಾಗಿ ಕೂಡಿಹಾಕುವ ಬೆದರಿಕೆಯೊಡ್ಡಿದರು. ಹಾಗೇ ಆಗಲಿ ಎಂದುಬಿಟ್ಟೆ. ಈ ಜಾಡ್ಯ-ಅಸ್ವಾಸ್ಥ್ಯಗಳಿಗೆಲ್ಲ ನಾನು ನಿಸರ್ಗೋಪಚಾರವನ್ನೇ ಅವಲಂಬಿಸಿ ದವ."

ಸಮಯವನ್ನು ಹೇಗೆ ಕಳೆಯಬೇಕೆಂಬ ಸಮ ಸ್ಯೆಯೇ ಉಂಟಾಗಿಲ್ಲವಂತೆ ಅವರಿಗೆ.

"ನನ್ನ ಪಾಡಿಗೆ ನಾನು ಓದುತ್ತ ಕುಳಿತುಕೊಳ್ಳು ತ್ತೇನೆ. ಸುಮಾರು ೨೦ ಇಂಗ್ಲಿಷ್ ಮತ್ತು ಗುಜರಾತಿ ಪತ್ರಿಕೆಗಳು ಹಾಗೂ ಉಪಯುಕ್ತ ಗ್ರಂಥಗಳು."

ದೂರದರ್ಶನ ಕಾರ್ಯಕ್ರಮಗಳನ್ನೆಂದೂ ನೋಡುವುದೇ ಇಲ್ಲವಂತೆ ಮೊರಾರ್ಜಿ. "ಬರಿ ಸರಕಾರದ ಡೋಲು ಬಡಿಯುವ ಕಾರ್ಯಕ್ರಮಗಳಿ ರುವ ಅದನ್ನು ನೋಡುವುದರಿಂದೇನು ಪ್ರಯೋ ಜನ? ಅಷ್ಟಲ್ಲದೆ ಅದು ಸರಕಾರ ನಿಯಂತ್ರಿತ ಮಾಧ್ಯಮ. ಸ್ವತಂತ್ರವಾಗಿರುವ ಪತ್ರಿಕೆಗಳನ್ನೋದಿದರೆ ಒಂದಿಷ್ಟು ವಿಚಾರವಾದರೂ ತಿಳಿದೀತು," ಎಂಬುದು ಅವರ ನೇರ ಉತ್ತರ. ಅಷ್ಟೇ ಅಲ್ಲ, "ಟೆಲಿವಿಜನ್ ಸರಕಾರದ ನಿಯಂತ್ರಣದಿಂದ ಮುಕ್ತ



ಛಾಯಾ ಚಿತ್ರ: ಸುರೇಂದ್ರ ಕ್ಷತ್ರಿ

ವಾಗಬೇಕು. ದೇಶಕ್ಕೆಲ್ಲ ಅದೊಂದು ಮೋಡಿ ಯಂತ್ರವನ್ನು ಹಂಚಿದ ಇಂದಿರಾ, ನಂತರ ರಾಜೀವ ಜನರ ಲಕ್ಷ್ಯವನ್ನು ಅದರತ್ತ ಕೇಂದ್ರೀಕರಿಸಿಟ್ಟುಬಿಟ್ಟರು. ಭಾರತದ ಸ್ಥಿತಿ ಇವರಿಗೇನು ಗೊತ್ತಿತ್ತು? ನೆಹರೂರಂಥ ನಿಜವಾದ ದೇಶಭಕ್ತ, ಗಾಂಧಿ ತತ್ವನಿಷ್ಠ, ಸಮಾಜವಾದಿ ಸಮಾಜ ರಚನೆಯ ಕನಸುಗಾರನ ವಂಶಜರ ಈ ನೀತಿಗಳೇ ನಮ್ಮ ದೇಶವನ್ನು ಅಧೋಗತಿಗೊಯ್ದದ್ದು" ಎಂದೂ ಸೇರಿಸುತ್ತಾರೆ.

"ಲಾಲ್ ಬಹಾದ್ದೂರ ಶಾಸ್ತ್ರಿಯ ಅವಧಿ ಇತಿಹಾಸದಲ್ಲಿ ಉಲ್ಲೇಖಿಸಲ್ಪಡುವಂಥದೇನಲ್ಲ. ಜಯಪ್ರಕಾಶ ನಾರಾಯಣರನ್ನು ಜನ ಮಹಾತ್ಮಾಜಿಗೆ ಹೋಲಿಸುತ್ತಿದ್ದಾರೆಂಬುದೇ ದೊಡ್ಡ ವ್ಯಂಗ್ಯ. ಆ ಮನುಷ್ಯ ನಾನು ಮುಂಬಯಿ ರಾಜ್ಯದ ಮಂತ್ರಿಯಾಗಿದ್ದಾಗ ಜವಳಿ ಕಾರ್ಮಿಕರ ಮುಷ್ಕರ ಏರ್ಪಡಿಸಿದ. ನಾನದನ್ನು ಮುರಿದೆ. ಮುಂದೆ ಜನತಾಪಕ್ಷದ ಅಧ್ವರ್ಯಗಳಲ್ಲೊಬ್ಬರಾದರೂ ಜೆ.ಪಿ. ನನ್ನ ದೃಷ್ಟಿಯಲ್ಲಿ ಏನೇನೂ ಅಲ್ಲ. ಸ್ವಜಾತಿಯವರೆಂಬ ಕಾರಣಕ್ಕಾಗಿ ಬಿಹಾರದಲ್ಲಿ ಕೃಷ್ಣವಲ್ಲಭರ ಸರಕಾರಕ್ಕೆ ಬೆಂಬಲವಿತ್ತರಲ್ಲ! ಅದರಂಥ ಭ್ರಷ್ಟ ಸರಕಾರವನ್ನೇ ನಾನು ನೋಡಿಲ್ಲ. ಇಂಥ ಇಬ್ಬಗೆಯ ನೀತಿಯವರನ್ನು ನಂಬಬೇಕೆ?"

ಮೊರಾರ್ಜಿಗೆ ಗೆಳೆಯರೇ ಇಲ್ಲವೆನ್ನುವಷ್ಟು ಕಡಿಮೆ ಜನ ಸ್ನೇಹಿತರು. ಇವರನ್ನು ಅರಿತುಕೊಂಡು, ಇವರ ಕಾಳಜಿಗಳು-ಮೌಲ್ಯಗಳು ಮತ್ತು ಅಭಿರುಚಿಗಳಿಗೆ ಸ್ಪಂದಿಸಿದವರೆಂದರೆ ಒಬ್ಬನೇ ಒಬ್ಬ ವ್ಯಕ್ತಿ. ಕನ್ಹಯ್ಯಾಲಾಲ್ ದೇಸಾಯಿ. ಸೂರತ್‌ದಿಂದ ಲೋಕಸಭಾಸದಸ್ಯರಾಗಿದ್ದವರು. ಗುಜರಾತ್ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರೂ ಆಗಿದ್ದರು. ಜನ ಅವರನ್ನು ಪ್ರೀತಿಯಿಂದ ಕರೆಯುತ್ತಿದ್ದದ್ದು "ಕಾಂಜಿಭಾಯಿ" ಎಂದು.

ಮುಂಬಯಿಗೆ ಬಂದ ಲಾಗಾಯ್ತು ಮೊರಾರ್ಜಿ ಮಗ ಕಾಂತಿಭಾಯಿಯೊಂದಿಗೇ ಇದ್ದಾರೆ. ಮೊದಲು ವಾಸಿಸುತ್ತಿದ್ದದ್ದು ಮರಿನ್ ಡ್ರೈವ್‌ನಲ್ಲಿನ 'ಓಶಿಯಾನಾ' ಎಂಬ ಬಹು ಅಂತಸ್ತಿನ ಕಟ್ಟಡದ ಒಂದು ಫ್ಲ್ಯಾಟಿನಲ್ಲಿ, ಬಾಡಿಗೆ ಮನೆ ಅದು. ಅದರ ಮಾಲಕ ಕುಂದನಲಾಲ್ ಲಕ್ಷ್ಮೀಚಂದ್ ಗುಪ್ತಾ, ಕೋರ್ಟಿನ ಕಟ್ಟೆಯೇರಿ ಗೆದ್ದುದರಿಂದ ಇವರು ಮನೆಬಿಡಬೇಕಾಗಿ ಬಂತು. ಮಹಾರಾಷ್ಟ್ರ ಸರಕಾರ ೧೯೯೦ರಲ್ಲಿ ಕೊಡಮಾಡಿದ, ಮಹಾರಾಷ್ಟ್ರ ಸಚಿವಾಲಯದ ಎದುರಿನ 'ಸಾರಂಗ'ವೆಂಬ ಸರಕಾರಿ ಗೃಹಸಮುಚ್ಚಯದ ಆರನೆ ಮಹಡಿಯ ಮನೆಯಲ್ಲಿ ಮೊರಾರ್ಜಿ ಮಗ, ಮೊಮ್ಮಕ್ಕಳು, ಮರಿಮಕ್ಕಳೊಂದಿಗೆ ವಾಸಿಸುತ್ತಿದ್ದಾರೆ.

ಪ್ರಾರಂಭದಿಂದಲೂ ತಮಗೆ ಬರುವ ಪತ್ರಗಳಿಗೆ ಸಾದಾ ಅಂಚೆಕಾರ್ಡಿನಲ್ಲಿ ತಾವೇ ಉತ್ತರ ಬರೆಯುವ ರೂಢಿಯಿಟ್ಟುಕೊಂಡ ಮೊರಾರ್ಜಿ ಈಗೀಗ ಬರೆಯುವುದನ್ನು ಬಿಟ್ಟಿದ್ದಾರೆ. (ಹೀಗೆ ಅವರಿಂದ ಬಂದ ಕಾರ್ಡುಗಳನ್ನು ಅತಿಮೌಲ್ಯದ ವಸ್ತುವೆಂಬಂತೆ ಕಾಪಾಡಿ ಇಟ್ಟುಕೊಂಡ ಅನೇಕರು ಕರ್ನಾಟಕದಲ್ಲಿದ್ದಾರೆ.) ಬೆಳಿಗ್ಗೆ ಬೇಗ ಎದ್ದು ವಾಯುವಿಹಾರ ಹೊರಡುತ್ತಿದ್ದ ಅವರ ದಿನಚರಿಯಲ್ಲಿ ಈಗ ಅದೊಂದನ್ನು ಬಿಟ್ಟರೆ ಉಳಿದಂತೆ ಯಾವ ಬದಲಾವಣೆಯೂ ಇಲ್ಲ. ಬೆಳಿಗ್ಗೆ ಆರಕ್ಕೆ ಎದ್ದು ಏಳಕ್ಕಾಗಲೇ ಪ್ರಾತರ್ವಿಧಿ, ಸ್ನಾನ ಮುಗಿಸಿ ಅರ್ಧಕಪ್ ಹಾಲು ಸೇವಿಸುವ ಮೊರಾರ್ಜಿ ಪತ್ರಿಕೆಗಳನ್ನು ಓದುತ್ತಾರೆ. ನಂತರ ಎಳನೀರು ಸೇವನೆ. ೯.೩೦ಕ್ಕಾಗಲೇ ಊಟ. ೧೧ಕ್ಕೆ ಮತ್ತೆ ಎಳನೀರು. ೧೨ಕ್ಕೆ ಜೇನುತುಪ್ಪ ಬೆರೆಸಿದ ಹಾಲು. ೧ ಗಂಟೆಗೆ ಒಂದು ಗ್ಲಾಸು ನೀರು. ಎರಡು ಗಂಟೆಗೆ ಜೇನುತುಪ್ಪ ಮಿಶ್ರಿತ ಹಾಲು. ಮೂರಕ್ಕೆ ಮತ್ತೊಂದು ಗ್ಲಾಸು ನೀರು. ಮಧ್ಯಾಹ್ನದ ಪತ್ರಿಕೆಗಳನ್ನೋದುವುದು. ಸಂಜೆ ಐದಕ್ಕೆ ಅರ್ಧಕಪ್ ಹಾಲು. ಆರೂವರೆಗೆ ಬೇಯಿಸಿದ ತರಕಾರಿ, ಹಸುವಿನ ಹಾಲಿನ ಬೆಣ್ಣೆ, ಬದಾಮ್ ಪೌಡರ್, ಜೇನುತುಪ್ಪ ಇತ್ಯಾದಿ ಇರುವ ಊಟ. ಆಮೇಲೆ ೮.೩೦ರವರೆಗೆ ಪುಸ್ತಕ ಓದುವುದು, ಮರಿಮಕ್ಕಳು-ಮನೆಜನರೊಂದಿಗೆ ನಗೆ, ಹರಟೆ ಇತ್ಯಾದಿ. ಮುಖದಲ್ಲಿ ಒಂದೂ ಸುಕ್ಕಿರದ ಮೊರಾರ್ಜಿಯವರನ್ನು ಕಾಣಬಯಸುವವರು ಮೊದಲೇ ವೇಳೆ ನಿಗದಿಪಡಿಸಿಕೊಳ್ಳಬೇಕು. ಹತ್ತು ನಿಮಿಷಕ್ಕಿಂತ ಹೆಚ್ಚಾಗಬಾರದ ಭೇಟಿ. ಆರು ವಾರಗಳಿಗೊಮ್ಮೆ ವೈದ್ಯರಿಂದ ಚೆಕಪ್ ಮಾಡಿಸಿಕೊಳ್ಳುವ ಮೊರಾರ್ಜಿ ಇಂದಿಗೂ ಮಾತುಕತೆ, ನೋಡುವಿಕೆ-ಕೇಳುವಿಕೆಗಳಲ್ಲಿ ಸ್ಪಷ್ಟತೆ ಉಳಿಸಿಕೊಂಡಿದ್ದರೆ. ದೇಶದ ಸದ್ಯದ ರಾಜಕೀಯ ಸ್ಥಿತಿಯ ಕುರಿತು ಅವರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಇಚ್ಛಿಸುವುದಿಲ್ಲ. "ಅದು ಅನವಶ್ಯಕ ಎಂದವರು ಭಾವಿಸಿದ್ದಾರೆ" ಎನ್ನುತ್ತಾರೆ ಕಾಂತಿಭಾಯಿ.

ದಿನದ ಬಹುಭಾಗ ತಮ್ಮ ಹಾಸಿಗೆಯ

ಮೇಲೆಯೇ ಕುಳಿತುಕೊಂಡಿರುತ್ತಾರೆ, ಏಕಾಂತಪ್ರಿಯ ಮೊರಾರ್ಜಿ.

ಒಂಟಿಯಾಗಿ ಕುಳಿತರೆ ನೆನಪುಗಳು ಮರುಕಳಿಸುವುದಿಲ್ಲವೆ?

"ಮರುಕಳಿಸದೇ ಏನು?"

ಅವುಗಳಲ್ಲಿ ಕಾಡುವ ನೆನಪುಗಳೂ ಇರಬಹುದಲ್ಲ?

"ಕೆಲವೊಮ್ಮೆ ಕೆಲವು ಕಾಡುತ್ತವೆ."

ಆ ಒಟ್ಟಾರೆ ನೆನಪುಗಳನ್ನು ಬರೆದಿಟ್ಟರೆ ಹೇಗೆ?

"೧೯೭೭ರಲ್ಲೇ ನಾನು ಬರೆಯಬಾರದೆಂದು ನಿರ್ಧರಿಸಿಬಿಟ್ಟಿದ್ದೇನೆ. ಯಾಕೆಂದರೆ ಹೀಗೆ ಬರೆಯಬೇಕಾದರೆ ಸತ್ಯವನ್ನೇ ಬರೆಯಬೇಕು. ಅದು ಸತ್ಯವೇ ಆದರೂ, ಇತರರಿಗೆ ಅಪ್ರಿಯವೆನಿಸಬಹುದು. ಅಂಥವರ ಮನಸ್ಸನ್ನಾಕೆ ನೋಯಿಸಲಿ? ಜನಕಲ್ಯಾಣ ಸಾಧಿಸುವ ಕೆಲಸವಾದರೆ ಅಡ್ಡಿಯಿಲ್ಲ. ಕೇವಲ ರೋಚಕವಾಗಿದೆ ಎಂಬ ಕಾರಣಕ್ಕೆ ಬರೆಯಬೇಕೆ? ನಾನು ಸ್ವಪ್ರಚಾರದಲ್ಲಿ ಎಂದೂ ತೊಡಗಿದವನಲ್ಲ."

ತಾವು 'ಹಟಮಾರಿ' ಎಂಬುದನ್ನವರು ಒಪ್ಪುವುದಿಲ್ಲ. "ಖಂಡಿತವಾದಿ" ಎಂದು ತಾವೇ ಹೇಳುತ್ತಾರೆ. "ಹಟಮಾರಿತನಕ್ಕೂ ಖಂಡಿತವಾದಕ್ಕೂ ಅಂತರ ಗೊತ್ತಿರಬೇಕಾದ್ದು ಮುಖ್ಯ" ಎಂದೆನ್ನುವ ಮೊರಾರ್ಜಿ, "ನಾನು ಸಂತುಷ್ಟ. ನಿರಾಶೆಗಳೇ ಇಲ್ಲ. ಆಶೆಗಳೂ ಉಳಿದಿಲ್ಲ. ಎಲ್ಲ ದೈವಕೃಪೆ. ನನಗೆ ಒದಗಿದ ಎಲ್ಲ ಅಂದರೆ ಎಲ್ಲವೂ ದೈವನಿರ್ಣಿತ"ವೆಂಬ ವಿನೀತಭಾವದವರೂ ಹೌದು.

'ಭಾರತರತ್ನ' ಬಂದಾಗ ಹಿಗ್ಗಲಿಲ್ಲ. ಪಾಕಿಸ್ತಾನದ ಸರಕಾರ ನೀಡಿದ (೧೯೮೮) 'ನಿಶಾನ್-ಎ-ಪಾಕಿಸ್ತಾನ್' ಎಂಬ ಅತ್ಯುಚ್ಚ ನಾಗರಿಕ ಸಮ್ಮಾನದ ಹಿನ್ನೆಲೆಯಲ್ಲಿ ಎದ್ದ ವಾದ-ವಿವಾದಗಳಿಂದ ಕುಗ್ಗಲಿಲ್ಲ.

ಮೊನ್ನೆ ಫೆಬ್ರುವರಿ ೨೮ರಂದು ಪ್ರಧಾನಿ ನರಸಿಂಹರಾಯರು, ನೂರು ತುಂಬಿದ ಸಂದರ್ಭದಲ್ಲಿ ಅಭಿನಂದಿಸಿ, "ನಿಮ್ಮ ಹೆಸರಿನಲ್ಲೇನಾದರೂ ಯೋಜನೆಯೊಂದನ್ನು ಹಮ್ಮಿಕೊಳ್ಳಬೇಕೆಂದಿದ್ದೇವೆ. ಏನು ಮಾಡಬಹುದೆಂದು ಸೂಚಿಸುವಿರಾ?" ಎಂದು ಕೇಳಿದಾಗ ಮೊರಾರ್ಜಿ ಚುಟುಕಿನಲ್ಲೇ ಉತ್ತರಿಸಿದರು:

"ಏನಾದರೂ ಮಾಡಿ. ಆದರೆ ದೇಶಕ್ಕೂ ದೇಶದ ಜನಕ್ಕೂ ಉಪಯುಕ್ತವೆನಿಸುವಂಥದ್ದನ್ನು ಮಾಡಿ."

ಆ ಉತ್ತರದಲ್ಲೇ ಅವರ ವ್ಯಕ್ತಿತ್ವದ ಭವ್ಯತೆ ಎದ್ದುಕಾಣುತ್ತದೆ. ●

## ನಡೆಯದ ಮದುವೆ

೧೯೫೦ರ ದಶಕದಲ್ಲಿ ಭಾರತರತ್ನ ಮೊರಾರ್ಜಿ ದೇಸಾಯಿ ಆಗಿನ ಮುಂಬಯಿ ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾಗ ಹಿಂದುಗಳಾದವರು ಮೊದಲ ಪತ್ನಿ ಜೀವಂತವಿದ್ದಾಗ ಎರಡನೆ ವಿವಾಹವಾಗುವುದನ್ನು ಕಡ್ಡಾಯವಾಗಿ ನಿಷೇಧಿಸಿದ್ದರು. ಇಂಥ ಕಾಲದಲ್ಲಿ ಒಂದು ದಿನ ಸುಂದರ ತರುಣಿಯೊಬ್ಬಳು ಅವರನ್ನು ಕಂಡು, ತಾನು ಮುಸ್ಲಿಮಳೆಂದೂ, ಹಿಂದುವೊಬ್ಬನನ್ನು ವಿವಾಹವಾಗಬಯಸಿರುವುದಾಗಿಯೂ ಹೇಳಿದಳು. ಅದಕ್ಕೆ ಮೊರಾರ್ಜಿ ಭಾಯಿ, "ಆಗಲಿ, ಅದಕ್ಕೇನು ಅಡ್ಡಿಯಿದೆ?" ಎಂದು ಕೇಳಿದರು. "ಆತನಿಗೆ ಈಗಾಗಲೇ ಒಬ್ಬ ಪತ್ನಿಯಿದ್ದಾಳೆ," ಎಂದಳು ಸುಂದರಿ.

ಇದನ್ನು ಕೇಳಿದ ತಕ್ಷಣ ಮೊರಾರ್ಜಿ ಅವರ ಮೋರೆ ಬಿಗಿದುಕೊಂಡಿತು. "ಸಮಾಜಕ್ಕೆ ಒಳಿತಾಗಲಿ ಎಂದು ನಾನೇ ಮಾಡಿದ ಕಾನೂನನ್ನು ನಾನೇ ಮುರಿಯಬೇಕೆನ್ನುವಿಯಾ?" ಎಂದು ಅವರು ಹೇಳಿದ ಧಾಟಿಗೆ ಸುಂದರಿ ಬೆದರಿ ಅಲ್ಲಿಂದ ಹೊರನಡೆದಳು. ಆ ನಾರಿಯೇ ಅಸಾಮಾನ್ಯ ಅಭಿನೇತ್ರಿಯಾದ ನರ್ಗಿಸ್. ಆಕೆ, ಆ ವೇಳೆಗೆ ನಟ ಪ್ರೇಮನಾಥನ ಸೋದರಿ ಕೃಷ್ಣಾಳನ್ನು ವಿವಾಹವಾಗಿದ್ದ, ರಾಜಕಪೂರನನ್ನು ಮದುವೆಯಾಗಬಯಸಿದ್ದಳು. ಮೊರಾರ್ಜಿಯವರ ನಿಲುವು ಸಡಿಲಾಗಲಿಲ್ಲ. ಹೀಗಾಗಿ ಕೊನೆಗೂ ಈ ವಿವಾಹ ನಡೆಯಲೇ ಇಲ್ಲ.

● ಕೆ. ವೆಂಕಣ್ಣಾಚಾರ್

# ಕಲಾವಿದ ಕಂಡಂತೆ 'ಕುವೆಂಪು'

## ಕೆಲವು ನೆನಪುಗಳು

● ಪಿ.ಆರ್. ತಿಪ್ಪೇಸ್ವಾಮಿ

"ಎಚ್ಚರಿಕೆಯಿಂದ
ಅಧ್ಯಯನದಲ್ಲಿ ತೊಡಗಿ.."

**ಕು**ವೆಂಪು ಅವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾಗ ನಾನು ಬಿ.ಎ. ಪದವಿಯ ವಿದ್ಯಾರ್ಥಿ. ದಿ. ಹೇಮದಳ ರಾಮದಾಸ ಹಾಗೂ ನಾನು ಸೇರಿ 'ಕಲಾಕ್ಷೇತ್ರ' ಎಂಬ ಕೈ ಬರಹದ ಸಂಚಿಕೆ ಹೊರಡಿಸುತ್ತ ವಿದ್ಯಾರ್ಥಿಗಳಲ್ಲಿ ಸಾಹಿತ್ಯ ಕಲೆಯ ಬಗ್ಗೆ ಆಸಕ್ತಿ ಕೆರಳಿಸಿದ್ದ ದಿನಗಳವು. ಒಮ್ಮೆ ಕುವೆಂಪು ಅವರನ್ನು ಉದಯ ರವಿಯಲ್ಲಿ ಕಂಡೆವು. 'ಕಲಾಕ್ಷೇತ್ರ' ಸಂಚಿಕೆಯನ್ನು ಅವರ ಕೈಗೆ ಇತ್ತೆವು. ಅವರು ಪುಟಪುಟಗಳ ಅಂದ-ಚಂದವನ್ನು ಗಮನಿಸಿ ಅಭಿಮಾನದ ಮಾತಾಡಿದ್ದರು. ಮುನ್ನುಡಿ ಕೇಳಲು ಹೋದವರು ನಾವು. ಅವರ ಒಳ್ಳೆಯ ಮಾತುಗಳೇ ನಮಗೆ ಸಾಕು ಎನಿಸಿ· ಹೆಮ್ಮೆಯಿಂದ ಹಿಂದಿರುಗಿದ್ದೆವು.

ನಂತರ ವರ್ಷಕ್ಕೆ ನಾಲ್ಕು ಪುಸ್ತಕಗಳನ್ನು ಕಲಾಕ್ಷೇತ್ರ ಸಂಸ್ಥೆಯಿಂದ ಹೊರತರಲು ಧೈರ್ಯ ಮಾಡಿದೆವು. 'ಜೀಶಂಪ' ಅವರ 'ದಿಬ್ಬದಾಚೆ' ಕಥನ ಕವನಕ್ಕೆ ಮುನ್ನುಡಿ ಕೇಳಲು ಒಂದು ಸಂಜೆ ಉದಯರವಿಗೆ ನಾವು ಕೆಲವು ಗೆಳೆಯರು ಹೋದೆವು. ಆಗ ಪುತ್ರ 'ತೇಜಸ್ವಿ'ಗೆ ಗಣಿತದ ಅಭ್ಯಾಸದಲ್ಲಿ ತೊಡಗಿದ್ದ ಕುವೆಂಪು ಗೇಟಿನಲ್ಲಿ ನಿಂತೇ ಇದ್ದ ನಮ್ಮನ್ನು ಗಮನಿಸಿ ಬಂದರು. ನಮ್ಮನ್ನು ಕಂಡು ವಿಷಯ ತಿಳಿದರು. ಅವರ ಹಿಂದೆ 'ಉದಯರವಿ'ಯ ಹೆಬ್ಬಾಗಿಲ ತನಕ ಹೋದೆವು. "ನನಗೆ ಈಗ ವೇಳೆ ಇಲ್ಲ," ಎಂದು ಮನೆಯ ಒಳಗೆ ಹೋಗಿಬಿಟ್ಟರು. ಅವರ ವರ್ತನೆ ನಮಗೆ ವಿಚಿತ್ರವಾಗಿ ಕಂಡಿತು. 'ಇವರೆಂಥ ಮಹಾಕವಿಯಪ್ಪ' ಎಂದೆಲ್ಲಾ ಗೊಣಗುತ್ತ ಕನ್ನಡ ಅಧ್ಯಾಪಕ ಜಿ. ಗೂಡಣ್ಣನವರಲ್ಲಿ ತಿಳಿಸಿದೆವು. ಅವರು ಬಂದು ಸಲಹೆ ನೀಡಿದರು. "ನೀವುಗಳು ಭೇಟಿ ಮಾಡಲು ಹೋದ ಸಮಯ ಸರಿ ಇಲ್ಲ. ನಾಳೆ ಬೆಳಗ್ಗೆ ಹೋಗಿ ಕಾಣಿರಿ," ಎಂದು. ನಾವು ಹಾಗೇ ಮಾಡಿದೆವು. ನಮ್ಮನ್ನು ನೋಡಿದ ಕುವೆಂಪು ಪುತ್ರಿ ತಾರಿಣಿ ಒಳಗೆ ಬಂದು ಕೂರುವಂತೆ ಸೂಚಿಸಿದರು.

ಒಳಗಿನ ಪಡಸಾಲೆಯಲ್ಲಿ ಕುಳಿತಿದ್ದ ನಮ್ಮತ್ತ ಕುವೆಂಪು ಗಂಭೀರವಾದ ನಡಿಗೆಯಲ್ಲಿ ದಯಮಾಡಿಸಿದರು. ನಮ್ಮೆಲ್ಲರ ಪರಿಚಯ ಮಾಡಿಕೊಂಡೆವು. ಜಿ.ಶಂ. ಪರಮಶಿವಯ್ಯನವರ ಕಡೆ ತಿರುಗಿ, " 'ಪ್ರಜಾವಾಣಿ'ಯಲ್ಲಿ ಬಂದ ನಿಮ್ಮ ಲೇಖನ 'ಕೆಚ್ಚೆದ್ದರೆ ಅಲತಿಗಿರಿ ಯಾತ್ರೆ ಕೈಗೊಳ್ಳಿ.' ಓದಿರುವೆ. ಸೊಗಸಾದ ಭಾಷೆ," ಎಂದರು. 'ಕಲಾಕ್ಷೇತ್ರ'ದ ಮೂಲಕ ಪುಸ್ತಕ ಪ್ರಕಟಣೆಗೆ ತೊಡಗಿರುವ ನಮ್ಮನ್ನು ಉದ್ದೇಶಿಸಿ, "ಪುಸ್ತಕ ಬರೆದು ಯಾರೂ ದುಡ್ಡು ಮಾಡಿಲ್ಲ. ನೀವು ಯುವಕರು. ಪುಸ್ತಕ ಪ್ರಕಟಣೆಗೆ ಕೈ ಹಾಕಿ ಕೈ ಸುಟ್ಟುಕೊಳ್ಳಬೇಡಿ. ಬಹಳ ಎಚ್ಚರಿಕೆಯಿಂದ ನಿಮ್ಮ ಅಧ್ಯಯನದಲ್ಲಿ ತೊಡಗಿ," ಎಂಬ ಹಿತವಚನ ಅವರಿಂದ ಬಂತು. ಆ ಮಾತು ನಿಜವಾಯಿತು. ಪ್ರಕಟಣೆಗೆ ತೊಡಗಿದ ನಾನು, ದಿ. ಹೇಮದಳ ರಾಮದಾಸ, ಜೀ.ಶಂ.ಪ ಎಲ್ಲರೂ ಆ ವರ್ಷ ಪರೀಕ್ಷೆಗಳಲ್ಲಿ ಮುಗ್ಗರಿಸಿದೆವು.

"ಮಲೆನಾಡಿಗೂ ನಮ್ಮ ಮನೆಗೂ
ಕಿಂಡಿ ಕೊರೆದಿದ್ದಾರೆ....."

ಒಮ್ಮೆ ಕುವೆಂಪು ಅವರನ್ನು ಉದಯರವಿಯಲ್ಲಿ ಭೇಟಿ ಮಾಡಿ ಚಿತ್ರದುರ್ಗದ ಬೆಟ್ಟಗುಡ್ಡಗಳ ಚಿತ್ರ

ಗಳನ್ನು ಅವರಿಗೆ ತೋರಿಸಿದ್ದೆ. ಆಗ ಅವರು, "ತಿಪ್ಪೇಸ್ವಾಮಿ, ನೀವು ಸೊಗಸಾಗಿ ಬಂಡೆಗಳನ್ನು ರಚಿಸುತ್ತೀರಿ.

ನಿಸರ್ಗವನ್ನು ಅದೇ ರೀತಿ ರಚಿಸಬಾರದೇಕೆ? ನಮ್ಮ ಮಲೆನಾಡಿಗೆ ಹೋಗಿ ಬನ್ನಿ. ಅಲ್ಲಿನ ಪ್ರಕೃತಿಯನ್ನು ನಿಮ್ಮ ಕುಂಚದಿಂದ ಸೆರೆಹಿಡಿಯಿರಿ. ಮಲೆನಾಡಿಗೆ ಮಹಾಕವಿ ಬೇಕಾದಂತೆ ಒಬ್ಬ ಮಹಾಕಲಾವಿದ ಬೇಕು," ಎಂದಿದ್ದರು.

ತೇಜಸ್ವಿ, 'ಜೀಶಂಪ' ಅವರು ನನ್ನನ್ನು ಕುವೆಂಪು ಅವರ ಹುಟ್ಟೂರು ಕುಪ್ಪಳ್ಳಿಗೆ ಕರೆತಂದರು. ಕುವೆಂಪು ಅವರ ಕಾವ್ಯದಲ್ಲಿ ಬರುವ ಸುಂದರ ನೆಲೆಗಳಾದ 'ಕವಿಶೈಲ' ಕುಂದಾದ್ರಿ, ಸಂಜೆಗಿರಿ, ಕುಪ್ಪಳ್ಳಿ ತೋಟ-ಮನೆ ಹೀಗೆ ಆರೇಳು ಚಿತ್ರಗಳನ್ನು ರಚಿಸಿಕೊಂಡು ಮೈಸೂರಿಗೆ ಬಂದೆ.

ಕುವೆಂಪು ಅವರಿಗೆ ಅವೆಲ್ಲವನ್ನು ಅರ್ಪಿಸಿದೆ. ಅವರಿಗೆ ಅದೆಷ್ಟು ಸಂತೋಷವಾಯಿತೆಂದರೆ ಒಂದು ಸಂಜೆ ಉದಯರವಿಯ ಬಿಸಿಲು ಮಹಡಿಯಲ್ಲಿ ಸಹೃದಯಿಗಳ ಗೋಷ್ಠಿ ಏರ್ಪಡಿಸಿದರು. ಅಲ್ಲಿ ಇದ್ದವರು ಕುವೆಂಪು, ತ.ಶು.ಶಾಮರಾಯ, ಪ್ರಭುಶಂಕರ, ಜಿ.ಎಸ್.ಶಿವರುದ್ರಪ್ಪ, ನ.ಭದ್ರಯ್ಯ, ತೇಜಸ್ವಿ, ಉ.ಕ.ಸು., 'ಜೀಶಂಪ.' ನಾನು ರಚಿಸಿದ 'ಕುಪ್ಪಳ್ಳಿ' ನಿಸರ್ಗ ಚಿತ್ರಗಳನ್ನು ಸುತ್ತಲೂ ಇರಿಸಲಾಗಿತ್ತು. ಕುವೆಂಪು ಅವರ ಪತ್ನಿ ಹೇಮಾವತಮ್ಮನವರು ತಯಾರಿಸಿದ ಎರಡು ನಮೂನೆಯ ಮಲೆನಾಡಿನ ಸಿಹಿಯನ್ನು ಎಲ್ಲರೂ ಸವಿದೆವು. ಆಗ ಕುವೆಂಪು ಆಡಿದ ಒಂಧು ಅಭಿಮಾನದ ನುಡಿ ಇದು- "ನಮ್ಮ ತಿಪ್ಪೇಸ್ವಾಮಿ ಈ ಚಿತ್ರಗಳ ಮೂಲಕ ಮಲೆನಾಡಿಗೂ ನಮ್ಮ ಮನೆಗೂ ಕಿಂಡಿ ಕೊರೆದಿದ್ದಾರೆ."

ನಂತರ ತಮ್ಮಲ್ಲಿದ್ದ ಗ್ರಾಮಾಫೋನ್ ಮೂಲಕ ಗಾಂಧೀಜಿ, ರವೀಂದ್ರನಾಥ ಠಾಕೂರ್, ಮೊದಲಾದವರ ಭಾಷಣಗಳ ಧ್ವನಿಮುದ್ರೆಗಳನ್ನು ಕೇಳುವಂತೆ ಮಾಡಿದರು. ಅಂದು ಕುವೆಂಪು ಅವರೊಡನೆ ಕಳೆದ ರಸಗಳಿಗೆ ನಾನೆಂದೂ ಮರೆಯಲಾರೆ.

ಕೆಲವು ದಿನಗಳ ನಂತರ ಕುವೆಂಪು ನನ್ನನ್ನು ತಮ್ಮ ಅಧ್ಯಯನದ ಕೋಣೆಗೆ ಕರೆದರು. ತಮ್ಮ ಒಂದು ಕವನವನ್ನು ಓದಿ ಹೇಳಿದರು. ಅದು ನಾನು ರಚಿಸಿದ ಒಂದು ಚಿತ್ರದ (ಕುಂದಾದ್ರಿ) ಬಗ್ಗೆ ಬರೆದದ್ದು. "ಕವಿಶೈಲದಿಂದ ಕುಂದಾದ್ರಿ" ಎಂಬ ಕವನ ಅದು. ನಂತರ ಅದು 'ಕದರಡಕೆ' ಕವನ ಸಂಕಲನದಲ್ಲಿ ಪ್ರಕಟಗೊಂಡಿತು. ಕುವೆಂಪು ಹಿಂದೆ ಕಲಾವಿದರಾದ ಮುಜುಂದಾರ್, ನಿಕೊಲಾಸ್ ರೋರಿಚ್, ವೆಂಕಟಪ್ಪನವರ ಕೃತಿಗಳ ಸ್ಫೂರ್ತಿಯಿಂದ ಕವನ ರಚಿಸಿದ್ದು ಕಲಾವಿದರಾದ ನಾವು ಎಂದೂ ಮರೆಯುವಂತಿಲ್ಲ.

"ದೊಡ್ಡ ಹೊರೆ
ಇಳಿದಂತಾಯಿತು..."

೧೯೬೫ರ ಡಿಸೆಂಬರ್ ೨೯ ಮರೆಯಲಾಗದ ದಿನ. ನಾವು ಕೆಲವು ಗೆಳೆಯರು ಅಂದು ಕುಪ್ಪಳ್ಳಿಯಲ್ಲಿದ್ದೆವು. ನಮ್ಮ ಅದೃಷ್ಟಕ್ಕೆ ಆಗ ಕುವೆಂಪು ಮೈಸೂರಿನಿಂದ ಅಲ್ಲಿಗೆ ಬಂದಿದ್ದರು. ಅವರ ಜೊತೆ ನಾವೆಲ್ಲರೂ ಕುಪ್ಪಳ್ಳಿಯ ಅವರ ಮನೆಯ ಬೆನ್ನೇರಿ 'ಕವಿಶೈಲ'ಕ್ಕೆ ಹೋದೆವು.

ಕುಪ್ಪಳ್ಳಿ ಮನೆಗೆ ಅಂಟಿಕೊಂಡಂತೆ ಬೆಟ್ಟ ಒಂದಿದೆ. ಅಲ್ಲಿಗೆ ಹತ್ತಿ ಹೋದರೆ ಒಂದು ಸ್ಥಳದಿಂದ ಪಶ್ಚಿಮ ದಿಗಂತದಲ್ಲಿ ಮಾಲೆ ಮಾಲೆಯಾಗಿ ಹೋಗುತ್ತದೆ ಸಹ್ಯಾದ್ರಿ ಶ್ರೇಣಿ. ಉತ್ತರಕ್ಕೆ ತೆಂಗು, ಕಂಗುಗಳ ಹೆಮ್ಮರಗಳ ಕಾಡಿನ ಗರ್ಭದ ನಡುವೆ 'ಕುಂದಾದ್ರಿ' ಆದಿಶೇಷನ ಹೆಡೆ ಎತ್ತಿದಂತೆ ಗೋಚರಿಸುತ್ತದೆ. ಕುವೆಂಪು ತಮ್ಮ ಕವನದಲ್ಲಿ ಕವಿಶೈಲ ಸ್ಥಳದಲ್ಲಿ ಕಾಣುವ ನಿಸರ್ಗ ದೃಶ್ಯವನ್ನು ಬೇಕಾದಷ್ಟು ಕಡೆ ವರ್ಣಿಸಿದ್ದಾರೆ.

ಕವಿಶೈಲ ಅವರ ಒಂದು ಧ್ಯಾನದ ಮಂದಿರ ಇದ್ದಂತೆ. ಈ ಬಂಡೆ ರಾಮಕೃಷ್ಣ ಆಶ್ರಮದ ಸ್ವಾಮಿಗಳು, ಕುವೆಂಪು ಗುರುಗಳಾಗಿದ್ದ ಬಿ.ಎಂ.ಶ್ರೀ., ಪ್ರೊ. ವೆಂಕಟಯ್ಯ, ಕತೆಗಾರ 'ಆನಂದ' ಮೊದಲಾದವರು ಕುಳಿತು ಹೋದ ಪವಿತ್ರ ತಾಣ. ಅಲ್ಲಿ ಅವರೆಲ್ಲರ ಹಸ್ತಾಕ್ಷರ ಕೊರೆಯಲಾಗಿದೆ. ನಾವೂ ನಮ್ಮ ಹೆಸರನ್ನು ಅಲ್ಲಿ ಕೆತ್ತಿದೆವು.

ಡಿಸೆಂಬರ್ ೨೯ ಕುವೆಂಪು ಜನ್ಮದಿನವೂ ಆಗಿತ್ತು. ಆಗತಾನೆ ಅವರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಪದವಿಯಿಂದ ನಿವೃತ್ತರಾಗಿದ್ದರು. ಕುವೆಂಪು ಕವಿಶೈಲದ ಬಂಡೆಯ ಮೇಲೆ ಕುಳಿತರು. ಅವರ ಪಕ್ಕ ನಾವೆಲ್ಲ.

ಆಗ ಕುವೆಂಪು, "ನಾನು ಉಪಕುಲಪತಿ ಪದವಿ

ಯಿಂದ ಬಿಡುಗಡೆ ಆದದ್ದು ಒಂದು ದೊಡ್ಡ ಹೊರೆ ಇಳಿದಂತಾಯಿತು. ಈಗ ಸಂಪೂರ್ಣ ಸಾಹಿತ್ಯಾ ರಾಧನೆಯಲ್ಲಿ ಮುಳಗಬಹುದು." ಎಂದರು. ನಂತರ ಮೌನ ತಾಳಿ, ಕಣ್ಣು ಮುಚ್ಚಿ ಉಪನಿಷತ್ತಿನ ಮಂತ್ರ ಒಂದನ್ನು ಪಠಿಸಿದರು. ಆ ಪ್ರಕೃತಿ ದೇವಿಯ ಮಧ್ಯದ ಕರಿಯ ಶಿಲಾ ಪೀಠದಲ್ಲಿ ಧ್ಯಾನಮಗ್ನ ರಾಗಿದ್ದ ಕುವೆಂಪು ಅವರನ್ನು ನೋಡಿದ ನಮಗೆ ಕನ್ಯಾಕುಮಾರಿಯ ಧ್ಯಾನ ಮಗ್ನ ವಿವೇಕಾನಂದರ ನೆನಪಾಯಿತು.

ಕುವೆಂಪು ಅವರ ಎಡಭಾಗದಲ್ಲಿ ನಾನು, ತೇಜಸ್ವಿ, 'ಜೀ.ಶಂ.ಪ.', ದೇವಂಗಿ ರತ್ನಾಕರ ಗೌಡ, ಕಡಿದಾಳು ಶಾಮಣ್ಣ ಮೊದಲಾದವರು ಕುಳಿತಿದ್ದೆವು. ತೇಜಸ್ವಿ ಬಳಿ ಒಂದು ಆಟೋಮ್ಯಾ ಟಿಕ್ ಕ್ಯಾಮರಾ ಇತ್ತು. ನಮ್ಮ ಎದುರಿನಲ್ಲಿ ಕ್ಯಾಮರಾ ಇರಿಸಿ ಗುಂಡಿ ಒತ್ತಿ ಓಡಿ ಬಂದು ನಮ್ಮ ಜೊತೆ ಬಂದು ಸೇರಿಕೊಂಡರು. ಆಗ ತೆಗೆದ ಆ ಫೋಟೋ ನನ್ನ ಬಳಿ ಇನ್ನೂ ಇದೆ.

"ಲೋಕಕ್ಕೆ ಅವತರಿಸಿದಳು
ಹೆಸರಾಂತ ಹೇಮಾವತಿ.."

೧೯೮೨ರ ಸಪ್ಟೆಂಬರ್ ೧೫ರ ಬೆಳಗಿನ ಸಮಯ ಮೈಸೂರಿನ ಪತ್ರಿಕೆಯಲ್ಲಿ "ಕುವೆಂಪುಗೆ ಪತ್ನಿ ವಿಯೋಗ" ಎಂಬ ತಲೆ ಬರಹ ಓದಿದೆ. ಮನಸ್ಸಿಗೆ ಗಲಿಬಿಲಿಯಾಯಿತು. ಕೂಡಲೆ ಉದಯ ರವಿಯತ್ತ ಹೊರಟೆ. ತಾಯಿ ಹೇಮಾವತಿಯವ ರನ್ನು ಕುರಿತ ನೆನಪಿನ ಚಿತ್ರಗಳು ನನ್ನ ಮನಸ್ಸಿನಲ್ಲಿ ಲಗ್ಗೆ ಹಾಕಿದವು.

ಹೇಮಾವತಿಯವರಿಗೆ ಕಸೂತಿ ಕಲೆ ಕರಗತ ವಾಗಿತ್ತು. ನನಗೆ ಒಮ್ಮೆ ಒಂದು ಕಸೂತಿಯ ಮುದ್ರಿತ ಚಿತ್ರವನ್ನು ನಕಲು ಮಾಡಲು ಕೊಟ್ಟ



ದ್ದರು. ನನ್ನ ಅಜಾಗರೂಕತೆಯಿಂದ ಅವರು ಕೊಟ್ಟಿದ್ದ ಮೂಲಪ್ರತಿ ಕಾಣೆಯಾಗಿತ್ತು. ಹೇಮಾವತಮ್ಮನವರು ಎಲ್ಲಿ ಕೇಳುವರೋ ಎಂಬ ಆತಂಕ ನನ್ನನ್ನು ಸದಾ ಕಾಡುತ್ತಿತ್ತು. ಅವರ ಮುಖ ದರ್ಶನಕ್ಕೆ ಅಂಜುತಿದ್ದೆ, ಅಳುಕುತ್ತಿದ್ದೆ.

ನಾನು ಉದಯರವಿ ತಲುಪಿದಾಗ ಕುವೆಂಪು ವರಾಂಡದಲ್ಲಿ ಕುಳಿತಿದ್ದರು. ಅವರ ಪಕ್ಕದಲ್ಲಿ ಅವರ ಭಾವ ಮೈದುನ ರತ್ನಾಕರ ಗೌಡರು ನಿಂತಿದ್ದರು. ಕುವೆಂಪು ಅವರ ಕಣ್ಣು ಹನಿಗೂಡಿತ್ತು. ರತ್ನಾಕರ ಗೌಡರು, "ನಿನ್ನೆ ರಾತ್ರಿಯೇ ಎಲ್ಲವೂ ಮುಗಿಯಿತು," ಎಂದರು.

"ಏನು ಮಾಡುವುದು? ವಿಧಿನಿಯಮ. ಅಳಿಯನೇ ಡಾಕ್ಟರ್ ಇದ್ದು, ಅವರ ಕೈಮೀರಿ ಹೋಯಿತು," ಎಂದು ಸಮಾಧಾನದ ಮಾತುಗಳನ್ನಾಡಿದರು ಕುವೆಂಪು.

"ತೇಜಸ್ವಿ ಎಲ್ಲಿ ಸಾರ್," ಎಂದೆ.

"ಚಿತಾಭಸ್ಮ ತರಲು ಹೋಗಿದ್ದಾನೆ," ಎಂದರು.

ಇನ್ನು ಹೆಚ್ಚು ಮಾತು ಬೇಡ ಎನಿಸಿತು. ನಮಸ್ಕಾರ ಮಾಡಿದೆ. ಹೊರಡುವ ಮುನ್ನ ಕುವೆಂಪು "ತಿಪ್ಪೇಸ್ವಾಮಿ, ಅವರ (ಹೇಮಾವತಿಯವರ) ಭಾವಚಿತ್ರ ಬೇಕಿತ್ತು"- ಎಂದರು.

"ನನ್ನಲ್ಲಿ ನಿಮ್ಮಿಬ್ಬರ ಫೋಟೋ ಒಂದು ಇದೆ," ಎಂದೆ.

"ನನ್ನದು ಬೇಡ. ಪೂಜಾಮಂದಿರದಲ್ಲಿ ಇರಿಸಲು ಅವರೊಬ್ಬರದು ಮಾತ್ರ ಬೇಕು"- ಎಂದರು. ಅದನ್ನು ಕೇಳಿದ ತಕ್ಷಣ ನನ್ನಲ್ಲಿ ವಿದ್ಯುತ್ ಸಂಚರಿಸಿದಂತಾಯಿತು. ಏಕೆಂದರೆ ಹೆಣ್ಣನ್ನು ಶೋಷಣೆಯ ವಸ್ತುವಾಗಿಯೇ ಭಾವಿಸಿಕೊಂಡು ಬಂದಂತಹ ನಮ್ಮ ಸಮಾಜದಲ್ಲಿ ಹೆಣ್ಣಿಗೆ ಇವರು ಪೂಜ್ಯ ಸ್ಥಾನ ಕೊಟ್ಟಿರುವುದನ್ನು ಕಂಡ ನನಗೆ ಕೂಡಲೇ ಪರಮಹಂಸ-ಶಾರದಾದೇವಿಯವರ ನೆನಪಾಯಿತು.

ಕುವೆಂಪು ಹಾಗೂ ಅವರ ಪತ್ನಿ 'ಹೇಮಾವತಿ' ಅವರ ನೆನಪು ಬಂದಾಗಲೆಲ್ಲ ನನ್ನ ಮನಸ್ಸು ಕುವೆಂಪು ರಚಿಸಿದ ಕವನಗಳತ್ತ ಹೊರಳುತ್ತದೆ.

ಪುಟ್ಟಪ್ಪನವರು ಮೈಸೂರಿನಲ್ಲಿ ವ್ಯಾಸಂಗ ಮಾಡಿ ರಜೆಯಲ್ಲಿ ಮಾವನ ಊರಿಗೆ ಬಂದ ಸಂದರ್ಭ. ೧೯೨೧ರಲ್ಲಿ ಪುಟ್ಟಪ್ಪನವರ ದೇವಂಗಿ ದೊಡ್ಡ ಮಾವನಿಗೆ ಮೊದಲ ಮಗು ಹುಟ್ಟಿತು. "ಅದು ಹೆಣ್ಣಾಗಿರದೆ ಗಂಡಾಗಿದ್ದರೆ ಆ ನನ್ನ ನೆನಪಿನ ದೋಣಿಗೆ ಏರುತ್ತಲೇ ಇರಲಿಲ್ಲ," ಎಂದು ಕುವೆಂಪು ಮುಂದೆ ತಾವು ಲಗ್ನವಾದ ಹೇಮಾವತಿಯವರ ಬಗ್ಗೆ ನುಡಿಯುತ್ತಾರೆ.

ಆ ಹೊತ್ತು ಬಾಲೆಯನ್ನು ತೊಟ್ಟಿಲಿಗೆ ಹಾಕುವ ಮನೆಗೆ ದೇವಂಗಿ ದೊಡ್ಡ ಮಾವ ತಮ್ಮ ಜೊತೆಯಲ್ಲಿ ಯುವಕ ಪುಟ್ಟಪ್ಪನವರನ್ನು ಕರೆದುಕೊಂಡು ಹೋಗುತ್ತಾರೆ. ಮಗುವಿಗೆ ಒಂದು ಹೆಸರು ಸೂಚಿಸಲು ಹೇಳುತ್ತಾರೆ. ಮುಂದೆ ಹದಿನಾರು ವರ್ಷಗಳ ನಂತರ (೧೯೩೭) ಕುವೆಂಪು ಅವರಿಗೆ ಆ ಕೂಸು ಸಹಧರ್ಮಿಣಿಯಾಗಿ ಇವರ ಜೀವನವನ್ನು ಪಾವನಗೊಳಿಸಿ ಮಧುಮಯವನ್ನಾಗಿ ಮಾಡಲಿದ್ದು ಆ ತೊಟ್ಟಿಲ ಕೂಸಿಗೆ ಕುವೆಂಪು ತಾವೇ ಹೆಸರಿಡುವಂತೆ ಆದದ್ದು ವಿಧಿನಿಯಮ.

ಬಾಲೆ ತೊಟ್ಟಿಲಿಗೆ ಶಾಸ್ತ್ರ ಪೂರೈಸಿ, ಔತಣ ಊಟವಾಯಿತು. "ಲೋಕಕ್ಕೆ ಅವತರಿಸಿದಳು ಹೆಸರಾಂತ ಹೇಮಾವತಿ."

ಸಂಸಾರ ತಾಪತ್ರಯದ ಸೋಂಕಿಲ್ಲದೆ ಕುವೆಂಪು ಕಾವ್ಯಾರಾಧನೆಯಲ್ಲಿ ವಿಹರಿಸುವಂತೆ ಮನೆಯ ವಾತಾವರಣವನ್ನು ಹೇಮಾವತಿಯವರು ತಪೋವನವನ್ನಾಗಿ ಪರಿವರ್ತಿಸಿದರು.

### 'ಮಂಜೂಷ'ಕ್ಕೆ ಕುವೆಂಪು ಕೊಡುಗೆ

ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಡಿ. ವೀರೇಂದ್ರ ಹೆಗ್ಗಡೆ ಅವರ ಅಪಾರ ಕಲಾಸಕ್ತಿ ಹಾಗೂ ಪ್ರೇಮದಿಂದ ಸ್ಥಾಪಿತವಾದ 'ಮಂಜೂಷ' ವಸ್ತುಸಂಗ್ರಹಾಲಯದ ಬಗ್ಗೆ ಕುವೆಂಪು ಅವರ ಗಮನ ಸೆಳೆದ ಸಂದರ್ಭ. 'ಉದಯರವಿ'ಗೆ ಹೆಗ್ಗಡೆಯವರು ಕುಟುಂಬ ಸಮೇತ ಬಂದಿದ್ದರು. ಅವರು ಧರ್ಮಸ್ಥಳದಲ್ಲಿ ನಿರಂತರವಾಗಿ ನಡೆಯುತ್ತಿರುವ ವಿವಿಧ ಚಟುವಟಿಕೆಗಳ ಬಗ್ಗೆ ಅಭಿಮಾನ ತಾಳಿ ಮಾತನಾಡುತ್ತ ಕುವೆಂಪು, "ವಿಶ್ವಮಾನವ ಸಂದೇಶ ನಿಜವಾಗಿಯೂ ಏನಾದರೂ ಕಾರ್ಯರೂಪಕ್ಕೆ ತರುವ ಕೆಲಸ ನಡೆದಿದೆ ಎಂದರೆ ಅದು ಧರ್ಮಸ್ಥಳದಲ್ಲಿ ಮಾತ್ರ," ಎಂದರಲ್ಲದೆ,



'ಉದಯ ರವಿ'ಯಲ್ಲಿ ಮಹಾಕವಿಯೊಂದಿಗೆ ಧರ್ಮಸ್ಥಳದ ಡಿ.ವೀರೇಂದ್ರ ಹೆಗ್ಗಡೆಯವರು.
ಜತೆಗೆ ನಿಂತಿರುವವರು ಲೇಖಕ ಪಿ.ಆರ್.ತಿಪ್ಪೇಸ್ವಾಮಿ.

ಧರ್ಮಸ್ಥಳದಿಂದ ತಮಗೆ ಬರುತ್ತಿರುವ 'ಮಂಜುವಾಣಿ' ಬಗ್ಗೆಯೂ ಮಾತನಾಡುತ್ತ, "ಅದರಲ್ಲಿ ಮಾತೃಶ್ರೀ ರತ್ನಮ್ಮ ಅವರ 'ಮಗಳಿಗೊಂದು ಪತ್ರ' ನನಗೆ ತುಂಬಾ ಹಿಡಿಸಿದೆ," ಎಂದು ಅಭಿಮಾನ ತಾಳಿ ನುಡಿದಿದ್ದರು.

'ಮಂಜೂಷ' ವಸ್ತುಸಂಗ್ರಹಾಲಯಕ್ಕೆ, ತಾವು ಸಂಗ್ರಹಿಸಿದ್ದ ಮಣ್ಣಿನ ಜಿನಮೂರ್ತಿಯ ಅವಶೇಷವನ್ನು ಜೊತೆಗೆ, ಕಲಾತ್ಮಕ ಗಂಧದ ಮೂರ್ತಿಯನ್ನೂ ನೀಡಿದ್ದರು.

ಜಿನಮೂರ್ತಿಯ ಬಗ್ಗೆ ಕುವೆಂಪು ನೀಡಿದ ವಿವರ ಇಂತಿದೆ:

"ಈ ಸುಂದರ ಮುಖಭಾವದ ಜಿನಮೂರ್ತಿಯ ಅವಶೇಷ ಬಹಳ ವರ್ಷಗಳ ಹಿಂದೆ ಮೈಸೂರಿನ ಸಮೀಪದ ಗೊಮ್ಮಟಗಿರಿಯಲ್ಲಿ ದೊರೆತಿದೆ. ಒಮ್ಮೆ ಅನಿರೀಕ್ಷಿತವಾಗಿ ನಾನು ಗೊಮ್ಮಟಗಿರಿಗೆ ಹೋಗಿದ್ದೆ. ಈ ಗಿರಿ ದಟ್ಟವಾದ ಗಿಡಮರಗಳಿಂದ ಬೆಳೆದು ನಿಂತ ಕಾಡಾಗಿತ್ತು. ಜನರ ಪ್ರವೇಶವೇ ಇಲ್ಲ. ಗಿಡ ಪೊದೆಗಳನ್ನು ಸರಿಸಿ ಮಿತ್ರ 'ಸಭ' ಅವರೊಡನೆ ನಾನು ಮೆಟ್ಟಿಲು ಏರಿ ಮೇಲೆ ಹೋದೆ. ಅಲ್ಲಿ ಅಪೂರ್ವ ಗೊಮ್ಮಟ ಮೂರ್ತಿಯನ್ನು ಕಂಡೆ. ಅಚ್ಚರಿಗೊಂಡೆ. ಹೊಸದೊಂದು ಶೋಧ ನಡೆಸಿದ ಅನುಭವ ಕೂಡ. ಅಲ್ಲಿಯ ಪೌಳಿಯ ಗೋಡೆಯಿಂದ ಕಳಚಿ ಬಿದ್ದಿದ್ದ ಮಣ್ಣಿನ ಮೂರ್ತಿಯ ಮುಖ ಸೌಂದರ್ಯದಿಂದ ಆಕರ್ಷಿತನಾಗಿ ಕೆಲವನ್ನು ಸಂಗ್ರಹಿಸಿ ತಂದಿದ್ದು ಬಹಳ ಆಸಕ್ತಿಯಿಂದ ಈವರೆಗೂ ಕಾಪಾಡಿಕೊಂಡಿಕೊಂಡು ಬಂದೆ."

ಗೊಮ್ಮಟಗಿರಿಯ ದುರವಸ್ಥೆಯ ಬಗ್ಗೆ ಮೈಸೂರಿನ ಗಣ್ಯ ಜೈನರ ಗಮನ ಸೆಳೆದರು. ನಂತರ ಈ ಗೊಮ್ಮಟಗಿರಿಯ ಮೊದಲ ಮಹಾಮಸ್ತಕಾಭಿಷೇಕದಲ್ಲಿ ಕುವೆಂಪು ಹಾಗೂ ಡಿ.ವಿ.ಜಿ., ರಾಜರತ್ನಂ ಭಾಗವಹಿಸುವಂತಾಯಿತು. ೪೪ ವರ್ಷಗಳ ಹಿಂದಿನ ಸುದ್ದಿ ಇದು. ಅಲ್ಲಿಂದ ಈ ಗೊಮ್ಮಟಗಿರಿ ಸಾರ್ವಜನಿಕರ ಕಣ್ಣಿಗೆ ಬಿದ್ದು ಜೀರ್ಣೋದ್ಧಾರ ಕಾರ್ಯ ನಡೆಯಿತು. (ಈ ಗೊಮ್ಮಟಗಿರಿ ಮೈಸೂರು-ಮಡಿಕೇರಿ ಹೆದ್ದಾರಿಯಲ್ಲಿದೆ. ಎತ್ತರವಾದ ಕಲ್ಲುಗುಡ್ಡದ ಮೇಲೆ ಏಕ ಶಿಲೆಯ ೧೬ ಅಡಿ ಎತ್ತರದ ಗೊಮ್ಮಟ ಮೂರ್ತಿಯನ್ನು ಹತ್ತನೆ ಶತಮಾನದಲ್ಲಿ ಚೆಂಗಳ್ವದೊರೆ ಕಡೆಸಿ ಪ್ರತಿಷ್ಠಾಪಿಸಿದ ಇತಿಹಾಸ ಇದಕ್ಕಿದೆ.)

ಕುವೆಂಪು ಅವರು ಸಂಗ್ರಹಿಸಿ ತಂದು ಬಹುಕಾಲ ತಮ್ಮಲ್ಲಿ ಕಾಪಾಡಿಕೊಂಡು ಬಂದ ಗಾರೆಗಚ್ಚಿನ ಜಿನಮೂರ್ತಿಯ ಸುಂದರ ಅವಶೇಷದ ಸಂಗ್ರಹ ಕುತೂಹಲಕಾರಿಯಾಗಿದ್ದು 'ಮಂಜೂಷ'ಕ್ಕೆ ಬರುವ ಜನರನ್ನು ಆಕರ್ಷಿಸುತ್ತಿದೆ. ಅದರ ಜೊತೆ ಜೊತೆಯಲ್ಲಿ ಕುವೆಂಪು ಅವರ ನೆನಪನ್ನೂ ಮಾಡಿಕೊಡುತ್ತಿದೆ.

ಅಂದು ಹೆಗ್ಗಡೆ ಅವರು ತಮ್ಮ ಪತ್ನಿ ಮತ್ತು ಪುತ್ರಿ ಅವರನ್ನು ಪರಿಚಯಿಸಿದ ನಂತರ ಕುವೆಂಪು ಅವರ ಕೈಲಿ ಪೆನ್ನು, ಕಾಗದ ಕೊಟ್ಟರು. ಧರ್ಮಸ್ಥಳದಲ್ಲಿ ಸ್ಥಾಪಿಸಲಿರುವ ಹಸ್ತಪ್ರತಿ ಗ್ರಂಥಾಲಯಕ್ಕೆ ಹೆಸರಿಡುವಂತೆ ವಿನಂತಿಸಿದರು ಹೆಗ್ಗಡೆಯವರು. ಕುವೆಂಪು ಅವರು 'ಶ್ರೀ ಮಂಜುನಾಥಸ್ವಾಮಿ ಸಂಸ್ಕೃತಿ ಸಂಶೋಧನಾ ಪ್ರತಿಷ್ಠಾನ' ಎಂದು ಹಾಳೆಯ ಮೇಲೆ ಬರೆದರು. ಹೆಗ್ಗಡೆ ಅವರು ಚಪ್ಪಾಳೆ ತಟ್ಟಿ, "ಇಲ್ಲೇ ಗ್ರಂಥಾಲಯದ ಉದ್ಘಾಟನೆ ಆಯಿತು," ಎಂದರು ಸಂತಸದಿಂದ.

ನಂತರ ಹೆಗ್ಗಡೆ ಅವರು ಕುವೆಂಪುಗೆ ಹೂಮಾಲೆ ಅರ್ಪಿಸಿ, ಜತೆಯಲ್ಲಿ ತಂದಿದ್ದ 'ಕೊಡೆಕಡ್ಡಿ'ಯಂಥ ಅಪರೂಪದ ವಸ್ತುವನ್ನು ಮಹಾಕವಿಗೆ ಕಾಣಿಕೆಯಾಗಿ ಅರ್ಪಿಸಿದರು. ಬಿಡಿಸಿ ನೋಡಿದರೆ ಅದು ವಿದೇಶದ ದೊಡ್ಡ ಛತ್ರಿ! ಕುವೆಂಪು ಅವರು ಅಚ್ಚರಿಗೊಂಡರು. ನಾವೂ ಬೆರಗಾದೆವು. ●

---

ಗೆಳೆತನ ಮತ್ತು ಚಹ ಅಷ್ಟು ಬಿಸಿಯಾಗಿಲ್ಲದಿದ್ದಾಗಲೇ ರುಚಿಸುವುದು. ಅಷ್ಟೇ ಅಲ್ಲ, ಅಷ್ಟು ಸಿಹಿಯಿಲ್ಲದಿರುವುದೂ ಸಲ್ಲ.

● ರಶಿಯನ್ ಗಾದೆ

# ಕಡಲದೈತ್ಯನ ಸಾದ್ಯಂತ

## ತಿಮಿಂಗಿಲವೆನ್ನುವುದು ಪ್ರಕೃತಿಯ ಅದ್ಭುತ

● ಶ್ರೀಕಾಂತರಾವ್

**ಕೋ**ಟ್ಯಂತರ ವರ್ಷಗಳ ಹಿಂದೆ ಪೆಡಂಭೂತಗಳು ಜೀವಿಸಿದ್ದವು ನಿಜ. ಆದರೆ ಗಾತ್ರದಲ್ಲಿ ಅವನ್ನೂ ಮೀರುವ ಪ್ರಾಣಿಯೊಂದು ಇನ್ನೂ ಜೀವಿಸಿದೆಯೆಂದರೆ ನಂಬುತ್ತೀರಾ? ಕಡಲದೈತ್ಯನೆಂದು ಹೆಸರಾದ ತಿಮಿಂಗಿಲವೇ ಆ ಪ್ರಾಣಿ.

ತಿಮಿಂಗಿಲ ಮತ್ಸ್ಯವರ್ಗಕ್ಕೆ ಸೇರಿದ ಪ್ರಾಣಿಯೆಂದು ಅನೇಕ ಶಬ್ದಕೋಶಗಳು ಅರ್ಥ ಹೇಳುತ್ತವೆಯಾದರೂ ವಾಸ್ತವವಾಗಿ ತಿಮಿಂಗಿಲ ಮತ್ಸ್ಯವರ್ಗಕ್ಕೆ ಸೇರಿದ ಪ್ರಾಣಿಯಲ್ಲ, ಅದೊಂದು ಸಸ್ತನಿ. ಮೀನಿನ ಹಾಗೆ ಅದೂ ನೀರಿನಲ್ಲಿ ಜೀವಿಸುತ್ತದೆ. ಸಮುದ್ರದಲ್ಲಿ ಈಜುತ್ತದೆ ಎನ್ನುವುದನ್ನು ಹೊರತುಪಡಿಸಿದರೆ ಮೀನಿಗೂ ತಿಮಿಂಗಿಲಕ್ಕೂ ಹೆಚ್ಚು ಸಾಮ್ಯವಿಲ್ಲ.

ಮೀನುಗಳು-ಅಥವಾ ಮತ್ಸ್ಯವರ್ಗಕ್ಕೆ ಸೇರಿದ ಯಾವುದೇ ಪ್ರಾಣಿ ಎನ್ನಿಬೇಕಾದರೆ- ಬಿಸಿರಕ್ತದ ಜೀವಿಯಲ್ಲ, ಅವುಗಳ ದೇಹದ ಉಷ್ಣತೆಯು ಅವು ಜೀವಿಸುವ ನೀರಿನ ಉಷ್ಣತೆಯನ್ನು ಅವಲಂಬಿಸಿದೆ. ಆದರೆ ತಿಮಿಂಗಿಲದ ಮಾತು ಹಾಗಲ್ಲ. ಮಾನವರ ಹಾಗೆ ಅದರ ದೇಹದ ಉಷ್ಣತೆ ಏಕಪ್ರಕಾರವಾಗಿ ಇರುವಂಥಾದ್ದು. ಮೀನುಗಳು ನೀರನ್ನು ಹೀರಿ ತನ್ಮೂಲಕ ಪ್ರಾಣವಾಯುವನ್ನು ಪಡೆದು ಕಲ್ಲೆಗಳ ಮೂಲಕ ಉಳಿದ ನೀರನ್ನು ಹೊರಹಾಕುವವಾದರೆ ತಿಮಿಂಗಿಲ ನಮ್ಮಹಾಗೆ ನೇರವಾಗಿ ವಾತಾವರಣದಿಂದಲೆ ಪ್ರಾಣವಾಯುವನ್ನು ಪಡೆಯುತ್ತದೆ. ಅದಕ್ಕೆ ನಮಗಿರುವ ಹಾಗೆಯೆ ಅದಕ್ಕೂ ಪುಪ್ಪುಸಗಳಿವೆ. ಡಾಲ್ಫಿನ್ ಹಾಗೂ ಕಡಲ ಹಂದಿಗಳನ್ನೂ ತಿಮಿಂಗಿಲವರ್ಗಕ್ಕೆ ಸೇರಿಸುವುದಿದೆ.

ಮಿದುಳಿನ ಗಾತ್ರದಿಂದ ಜಾಣ್ಮೆಯನ್ನು ನಿರ್ಧರಿಸಲಾಗುವುದಿಲ್ಲ ನಿಜ. ಆದರೆ ತಿಮಿಂಗಿಲಿನ ಮಿದುಳು ಮಾನವ ಮಿದುಳಿಗಿಂತ ದೊಡ್ಡದು. (ಮಾನವ ಮಿದುಳಿನ ಸರಾಸರಿ ತೂಕ ೩ ಪೌಂಡುಗಳಾದರೆ ತಿಮಿಂಗಿಲದ್ದು ೨೦ ಪೌಂಡುಗಳಷ್ಟು) ತಿಮಿಂಗಿಲುಗಳನ್ನು ಹಿಡಿದು ಸಾಕುವುದಾಗಲಿ ಅವು ನೈಸರ್ಗಿಕ ಪರಿಸರದಲ್ಲಿ ಹೇಗೆ ವರ್ತಿಸುತ್ತವೆಂಬುದನ್ನು ಅಭ್ಯಸಿಸುವುದಾಗಲಿ ಅಸಾಧ್ಯವಾದುದರಿಂದ ತಿಮಿಂಗಿಲುಗಳ ವರ್ತನೆಯ ಬಗೆಗೆ, ಅವುಗಳ ಬುದ್ಧಿಮತ್ತೆಯ ಬಗೆಗೆ ಅಷ್ಟಾಗಿ ತಿಳಿದುಕೊಳ್ಳಲು ಆಗಿಲ್ಲ. ಆದರೆ ತಿಮಿಂಗಿಲುಗಳು ಯಾವುದೇ ಕಾರಣದಿಂದ ದಡಕ್ಕೆ ಬಂದು ಬಿದ್ದಾಗ ಅವುಗಳ ವರ್ತನೆಯನ್ನು ಅಭ್ಯಸಿಸಿದ ಪ್ರಾಣಿಶಾಸ್ತ್ರಜ್ಞರು ತಿಮಿಂಗಿಲುಗಳು ಬಹು ಸಹಕಾರ ಮನೋಭಾವವುಳ್ಳ ಪ್ರಾಣಿಗಳೆಂದೇ ಹೇಳುತ್ತಾರೆ.

ಸಸ್ತನಿಯಾದರೂ ತಿಮಿಂಗಿಲಕ್ಕೆ ನಮಗಿರುವ ಹಾಗೆ ಸ್ವೇದಗ್ರಂಥಿಗಳಿಲ್ಲ. ಹೀಗಾಗಿ ಅದಕ್ಕೆ ಬೆವರು ಬರುವ ಪ್ರಸಂಗವೇ ಇಲ್ಲ. ತಲೆಯ ಮೇಲೆ ಅಷ್ಟಿಷ್ಟು ಕೂದಲುಗಳಿರುವುದನ್ನು ಹೊರತುಪಡಿಸಿದರೆ ಮೈಮೇಲೆ ಕೂದಲುಗಳೇ ಇಲ್ಲ. ಚರ್ಮದ ಅಡಿಯಲ್ಲಿ ತೈಲಗ್ರಂಥಿಗಳೂ ಇಲ್ಲ. ಮೈಯನ್ನು ಮುಟ್ಟಿದರೆ ರಬ್ಬರಿನ ಹಾಗಿರುತ್ತದೆ.

ತಿಮಿಂಗಿಲಿನ ತಲೆಯ ಮೇಲೊಂದು ರಂಧ್ರ. ಅದರ ಮೂಲಕವೇ ತಿಮಿಂಗಿಲಿನ ಶ್ವಾಸೋಚ್ಛ್ವಾಸ. ನೀರಲ್ಲಿ ಮುಳುಗಿದಾಗ ರಂಧ್ರ ಮುಚ್ಚಿಕೊಳ್ಳುವುದು. ನೀರಿನಿಂದ ಹೊರಬಂದಾಗ ತೆರೆದುಕೊಳ್ಳುವುದು. ತಿಮಿಂಗಿಲ ೭೫ ನಿಮಿಷಗಳವರೆಗೂ ನೀರಲ್ಲಿ ಮುಳುಗಿ ಉಸಿರನ್ನು ಗಟ್ಟಿ ಹಿಡಿಯಬಲ್ಲದು.

ರಂಧ್ರದ ಗಾತ್ರ ಹಾಗೂ ಆಕಾರ ಬೇರೆ ಬೇರೆ ಜಾತಿಗಳ ತಿಮಿಂಗಿಲುಗಳಲ್ಲಿ ಬೇರೆ ಬೇರೆ. ಉಸಿರನ್ನು ಬಿಡುವಾಗ ನಿಃಶ್ವಾಸದೊಂದಿಗೆ ನೀರಿನ ಕಣ, ಅದರ ಶರೀರದಲ್ಲಿ ನಿಹಿತವಾದ ತೈಲದ

ಅಂಶ, ಹಬೆ ಎಲ್ಲವೂ ಸೇರಿರುತ್ತವೆ. ದೂರದಿಂದ ನೋಡಿದಾಗ ಅದೊಂದು ಸುಂದರ ದೃಶ್ಯ. ಕಾರಂಜಿಯಂತೆಯೇ ಕಾಣುತ್ತದೆ. ಈ ಕಾರಂಜಿ ಆರು ಅಡಿಯಿಂದ ಇಪ್ಪತ್ತೈದು ಅಡಿಗಳವರೆಗೂ ಪುಟಿಯಬಲ್ಲದು.

ಅಜೀರ್ಣವಾಗಿಯೋ ಅಥವಾ ಮತ್ತಾವ ಕಾರಣದಿಂದಲೋ ತಿಮಿಂಗಿಲ ಕಾರಿಕೊಂಡಾಗ ಅದು ಗಡ್ಡೆಗಡ್ಡೆಯಾಗಿ ಸಮುದ್ರದ ಮೇಲೆ ತೇಲುವುದು. ಅದಕ್ಕಿರುವ ಒಂದು ವಿಧದ ಪರಿಮಳದಿಂದಾಗಿ ಬೂದುಬಣ್ಣದ ಈ ಗಡ್ಡೆಗಳಿಗೆ ಮಾರು



೧೫೬೮ರಲ್ಲಿ ಡಚ್ ಕಲಾವಿದನೊಬ್ಬ, ಸಮುದ್ರ ದಡದ ಮೇಲೆ ಬಂದು ಬಿದ್ದು ಸತ್ತ ಬೃಹತ್ ತಿಮಿಂಗಿಲಿನ ಸುತ್ತ ಸೇರಿದ ಜನರನ್ನು, ಅವರು ನಡೆಸಿದ ಪರೀಕ್ಷೆಯನ್ನು ಕಲ್ಪಿಸಿ ರಚಿಸಿದ ಚಿತ್ರ.

ಕಟ್ಟೆಯಲ್ಲಿ ಭಾರೀ ಬೆಲೆ. ಪನ್ನಂಬರವೆಂಬ ಸುಗಂಧದ್ರವ್ಯ ತಿಮಿಂಗಿಲಿನ ಈ ಉಚ್ಛಿಷ್ಟದಿಂದಲೇ ಬಂದದ್ದು.

ಆದರೆ ಸುಗಂಧದ್ರವ್ಯವನ್ನು ಕೊಡುವ ತಿಮಿಂಗಿಲಕ್ಕೇ ಘ್ರಾಣೇಂದ್ರಿಯವಿಲ್ಲ! ದೃಷ್ಟಿ ಕೂಡ ಅಷ್ಟ



ಕ್ಕಷ್ಟೆ. ರಸನೇಂದ್ರಿಯವೂ ನಮ್ಮ ಹಾಗೆ ಅಭಿವೃದ್ಧಿಗೊಂಡಿಲ್ಲವಾದ್ದರಿಂದ ಅದಕ್ಕೆ ರುಚಿಯೂ ತಿಳಿಯುವುದಿಲ್ಲ. ಆದರೆ ಸ್ಪರ್ಶಜ್ಞಾನ ಸಾಕಷ್ಟಿದೆ. ಕಿವಿಯೂ ಚುರುಕಾಗಿದೆ. ಕೇಳುವ ವಿಧಾನ ಮಾತ್ರ ಬೇರೆ. ತಲೆಯ ಭಾಗದಿಂದ ಅದು ಹೊರಡಿಸಿದ ಧ್ವನಿತರಂಗಗಳು ನೀರಿನಲ್ಲಿನ ಉಳಿದ ಪದಾರ್ಥಗಳಿಗೆ ಅಥವಾ ಜೀವಿಗಳಿಗೆ ಅಪ್ಪಳಿಸಿ ಪ್ರತಿಫಲಿಸಲ್ಪಟ್ಟಾಗ ಹೀಗೆ ಪ್ರತಿಫಲಿಸಲ್ಪಟ್ಟ ತರಂಗಗಳ ಮೇಲಿಂದ ಬೇಟೆ ಎಲ್ಲಿದೆ, ಅದರ ಗಾತ್ರ ಎಷ್ಟು, ಅದು ಯಾವ ದಿಕ್ಕಿನಲ್ಲಿ ಚಲಿಸುತ್ತದೆ, ಎಷ್ಟು ತೀವ್ರವಾಗಿ ಚಲಿಸುತ್ತದೆ ಎಂಬೆಲ್ಲಾ ವಿವರಗಳನ್ನು ತಿಮಿಂಗಿಲ ತಿಳಿದುಕೊಳ್ಳುತ್ತದಂತೆ. ವಾಸ್ತವವಾಗಿ ಮಾನವನ ಕಿವಿಗಿಂತಲೂ ತಿಮಿಂಗಿಲದ 'ಕಿವಿ' ಬಹಳ ಸೂಕ್ಷ್ಮ.

ಎಲ್ಲ ಸಸ್ತನಿಗಳ ಹಾಗೆ ತಿಮಿಂಗಿಲುಗಳೂ ಮರಿ ಹಾಕುತ್ತವೆ. ಆದರೆ ಒಂದು ಸಲಕ್ಕೆ ಒಂದೇ ಮರಿ. ಭೀಮ ಗಾತ್ರದ್ದಾಗಿಯೆ ಹುಟ್ಟುತ್ತದೆ. ಆಗ ತಾನೆ ಹುಟ್ಟಿದ ಮರಿಯ ಮೇಲೆ ನಾಲ್ಕು ಮಾರುತಿಕಾರುಗಳನ್ನು ಸಲೀಸಾಗಿ ನಿಲ್ಲಿಸಿದರೂ ಮರಿಗೆ ಏನೂ ಆಗುವುದಿಲ್ಲ.

ತಿಮಿಂಗಿಲುಗಳು ಹೆಚ್ಚಾಗಿ ವಾಸಿಸುವುದು ಉತ್ತರ ಹಾಗೂ ದಕ್ಷಿಣ ಧ್ರುವಪ್ರದೇಶಗಳಲ್ಲಿ. ವಸಂತಕಾಲ ಹತ್ತಿರವಾಗುತ್ತಲೇ ಅವು ವಿಷವವೃತ್ತದೆಡೆಗೆ ಧಾವಿಸುತ್ತವೆ. ತಿಮಿಂಗಿಲುಗಳು ಮರಿ ಹಾಕುವುದು ಈ ಪ್ರದೇಶದಲ್ಲಿ. ಗರ್ಭಧಾರಣೆಯ ಅವಧಿ ಸರಿಸುಮಾರು ಹನ್ನೆರಡು ತಿಂಗಳಿನಷ್ಟು. ಪ್ರಸವಕಾಲದಲ್ಲಿ ಪ್ರಸವಿಸಲು ಸಹಾಯವಾಗುವಂತೆ ಒಂದೆರಡು ಹೆಣ್ಣು ತಿಮಿಂಗಿಲುಗಳು ಸೂಲಗಿತ್ತಿಯ ಕೆಲಸವಹಿಸಿಕೊಳ್ಳುವುದು ಈ ಪ್ರಾಣಿ ವರ್ಗದ ವೈಶಿಷ್ಟ್ಯ.

ತಿಮಿಂಗಿಲದ ಹಾಲು ನಮ್ಮ ನಿಮ್ಮಂಥವರು ಕುಡಿದು ದಕ್ಕಿಸಿಕೊಳ್ಳಲು ಸಾಧ್ಯವಾಗದಷ್ಟು ಗಟ್ಟಿ. ಅದರಲ್ಲಿರುವಷ್ಟು ಸ್ನಿಗ್ಧ, ಸಸಾರಜನಕ ಹಾಗೂ ಲವಣಗಳು ಭೂಮಿಯ ಮೇಲಿನ ಯಾವ ಪ್ರಾಣಿಯ ಹಾಲಿನಲ್ಲಿಯೂ ಇರುವುದಿಲ್ಲ. ಇಂಥಾ ಪುಷ್ಟಿದಾಯಕವಾದ ಹಾಲನ್ನು ಕುಡಿದ ಮರಿ ದಿನಕ್ಕೆ ಇನ್ನೂರು ಪೌಂಡುಗಳಷ್ಟು ಬೆಳೆಯತೊಡಗುತ್ತದೆ. ಆದರೂ ತಾಯಿಗೆ ಮರಿಗೆ ಏನಾದೀತೋ ಎಂಬ



ದಡಕ್ಕೆ ಬಂದು ಉಷ್ಣಾಘಾತದಿಂದ ಬಳಲುತ್ತಿರುವ ತಿಮಿಂಗಿಲಕ್ಕೆ ಚಿಕಿತ್ಸೆ ನಡೆಸುತ್ತಿರುವುದು.

ಭಯ. ಒಂದು ವರ್ಷದವರೆಗೂ ಮರಿಯನ್ನು ಬಿಟ್ಟು ಕದಲುವುದಿಲ್ಲ.

ತಿಮಿಂಗಿಲದ ಚರ್ಮ ಮೃದು. ಹೊಟ್ಟೆಯ ಕೆಳಗೆ ಹೊರಚರ್ಮದ ಅಡಿಯಲ್ಲಿ ಹದಿನೈದರಿಂದ ಇಪ್ಪತ್ತು ಇಂಚುಗಳಷ್ಟು ದಪ್ಪವಾದ ನೆಣದ ಪದರ ಏದೆ. ಈ ನೆಣ ನೀರಿಗಿಂತ ಹಗುರವಾಗಿರುವುದರಿಂದ ಅಷ್ಟು ದೊಡ್ಡ ದೇಹ ನೀರಿನಲ್ಲಿ ಕ್ರಮಿಸಲು ಅನುಕೂಲವಾಗಿದೆ. ಆಕಸ್ಮಾತ್ತಾಗಿ ಆಹಾರದ ಅಭಾವ ಉಂಟಾದರೆ ತಿಮಿಂಗಿಲ ಈ ನೆಣವನ್ನೇ ಬಳಸಿಕೊಂಡು ದೀರ್ಘಕಾಲದವರೆಗೆ ಜೀವಿಸಬಲ್ಲುದು. ಹಿಂದೆ ತಿಮಿಂಗಿಲದ ಬೇಟೆ ಭರದಿಂದ ನಡೆಯುತ್ತಿದ್ದಾಗ ಎಸ್ಕಿಮೋಗಳಿಗೆ ಆಹಾರಕ್ಕೂ ದೀಪ ಉರಿಸುವುದಕ್ಕೂ ಈ ನೆಣ ಉಪಯೋಗಕ್ಕೆ ಬರುತ್ತಿತ್ತು. ತಿಮಿಂಗಿಲಗಳು ನಿರ್ವಂಶವಾಗುವುದನ್ನು ತಡೆಯಲು ಅವುಗಳ ಬೇಟೆಯನ್ನೀಗ ನಿರ್ಬಂಧಿಸಲಾಗಿದ್ದರೂ ಕದ್ದುಮುಚ್ಚಿ ತಿಮಿಂಗಿಲುಗಳ ಬೇಟೆ ನಡೆಯುತ್ತಲೇ ಇದೆ. ತಿಮಿಂಗಿಲದ ಮಾಂಸವೆಂದರೆ ಎಸ್ಕಿಮೋಗಳಿಗಷ್ಟೇ ಅಲ್ಲ

ಜಪಾನಿಯರಿಗೂ ಬಹಳ ಇಷ್ಟ.

ತಿಮಿಂಗಿಲ ಒಂದೇ ಅಲ್ಲ. ಆಕಾರ, ಗಾತ್ರ, ರೂಪಗಳನ್ನು ಆಧರಿಸಿ ಅದರಲ್ಲಿ ಒಟ್ಟು ೭೬ ಪ್ರಭೇದಗಳುಂಟು. ಅವುಗಳಲ್ಲಿ ನೂರು ಅಡಿಗಳಷ್ಟು ಉದ್ದ ಬೆಳೆಯಬಲ್ಲ ನೀಲ ತಿಮಿಂಗಿಲವೇ ಅತಿ ದೊಡ್ಡದು. ಇದು ಚೆನ್ನಾಗಿ ಬೆಳೆದಾಗ ನೂರಿಪ್ಪತ್ತು ಟನ್ನಿನವರೆಗೂ ತೂಗಬಲ್ಲದು.

ಚಲಿಸಲು ಅನುವಾಗಲು ಮೀನಿನಹಾಗೆ ತಿಮಿಂಗಿಲಿಗೂ ಈಜು ರೆಕ್ಕೆಗಳಿವೆ. ಆದರೆ ಈ ಈಜು ರೆಕ್ಕೆಗಳು ಲಂಬವಾಗಿರದೆ ದೇಹಕ್ಕೆ ಸಮಾನಾಂತರವಾಗಿವೆ.

ತಿಮಿಂಗಿಲುಗಳಲ್ಲಿ ೭೬ ವಿಧಗಳಿದ್ದರೂ ಅವುಗಳನ್ನೆಲ್ಲ ಹಲ್ಲುಗಳಿರುವ ತಿಮಿಂಗಿಲುಗಳು, ಹಲ್ಲುಗಳ ಬದಲು ಸಾರಣಿಯಂತಹ ವ್ಯವಸ್ಥೆಯಿರುವ ತಿಮಿಂಗಿಲುಗಳು ಎಂದು ಎರಡು ಗುಂಪುಗಳಲ್ಲಿ ವರ್ಗೀಕರಿಸಬಹುದು. ಮೊದಲನೆಯ ವರ್ಗಕ್ಕೆ ಸೇರಿದ ತಿಮಿಂಗಿಲುಗಳಿಗೆ ೩೫ರಿಂದ ೪೦ರಷ್ಟು ಕೋನಾಕೃತಿಯ ಹಲ್ಲುಗಳಿವೆ. ಆದರೆ ಈ ಹಲ್ಲುಗಳಿಂದ ಬೇಟೆಯನ್ನು ಹಿಡಿಯಲು ಸಾಧ್ಯವೇ ಹೊರತು ಬೇಟೆಯನ್ನು ತಿನ್ನಲು ಅವುಗಳಿಂದಾಗದು. ಸಿಕ್ಕ ಬೇಟೆಯನ್ನು ನುಂಗುವುದೊಂದೇ ಕ್ಷುಧಾಬಾಧೆಯನ್ನು ತಣಿಸಿಕೊಳ್ಳಲು ಅವುಗಳಿಗೆ ಇರುವ ದಾರಿ. ಇನ್ನೊಂದು ವರ್ಗದ ತಿಮಿಂಗಿಲುಗಳಿಗೆ ಹಲ್ಲುಗಳಿಲ್ಲ; ಬಗಲು ಮೇಲ್ದವಡೆಯಿಂದ ಬೆಳೆದ ಉಗುರಿನಂತಹ ಉದ್ದನೆಯ ಮೂಳೆಗಳಿವೆ. ಈ ಬಗೆಯ ತಿಮಿಂಗಿಲುಗಳು ಒಂದು ಸಲಕ್ಕೆ ನೂರಾರು ಗ್ಯಾಲನ್ನುಗಳಷ್ಟು ನೀರನ್ನೆಳೆದುಕೊಂಡು, ದವಡೆಯನ್ನು ಮುಚ್ಚಿ, ನೀರನ್ನು ಕಿಂಡಿಗಳ ಮೂಲಕ ವಿಸರ್ಜಿಸುವವು. ಈ 'ಸಾರಣಿ'ಯ ಒಳಗೆ ಉಳಿದ ಮೀನು, ಸಮುದ್ರ ಕಸ, ಸಸ್ಯಗಳು ಇತ್ಯಾದಿ ತಿಮಿಂಗಿಲಕ್ಕೆ ಆಹಾರವಾಗುವವು. ಈ ಜಾತಿಯ ತಿಮಿಂಗಿಲಕ್ಕೂ ಆಹಾರವನ್ನು ತಿನ್ನುವ ಯೋಗವಿಲ್ಲ. ಎಲ್ಲವನ್ನೂ ನುಂಗಬೇಕು. ಒಂದು ವೇಳೆ ಪ್ರಕೃತಿಯು ತಿನ್ನುವ ವ್ಯವಸ್ಥೆಯನ್ನು ರೂಪಿಸಿದ್ದರೂ ಅದರಿಂದ ತಿಮಿಂಗಿಲುಗಳಿಗೆ ಪ್ರಯೋಜನವೆಷ್ಟಾಗು- ತ್ತಿತ್ತೆನ್ನುವುದನ್ನು ಹೇಳಲಾಗದು- ರಸನೇಂದ್ರಿಯವೇ ಇಲ್ಲದ್ದರಿಂದ.

ಧ್ರುವಪ್ರದೇಶದಲ್ಲೇ ಇರಲಿ, ವಿಷುವವೃತ್ತದ ಸಮೀಪ ವಲಸೆಗೇ ಬಂದಿರಲಿ, ತಿಮಿಂಗಿಲುಗಳು ಸಮುದ್ರ ಮಧ್ಯದಲ್ಲೆ ಜೀವಿಸುವಂತಹವು. ಸಮುದ್ರ ತೀರಕ್ಕೆ ಬರುವುದೇ ಅಪರೂಪ. ಆದರೂ ಕಾರವಾರದಂತಹ ಪ್ರದೇಶಕ್ಕೂ ಅವುಗಳ ಹೆಣ ತೇಲಿಕೊಂಡು ಬಂದಿದ್ದಿದೆ. ಅರೆಜೀವ ಸ್ಥಿತಿಯಲ್ಲಿಯೂ ಅವು ಇನ್ನೂ ಕೆಲವು ಕಡೆ ತೆವಳಿಕೊಂಡು ಬಂದು ತೀರದ ಮೇಲೆ ಬಸವಳಿದುಕೊಂಡು ಬಿದ್ದದ್ದಿದೆ. ಕಾರಣ ಗೊತ್ತಾಗಿಲ್ಲ.

ಹೀಗೆ ತೀರಕ್ಕೆ ಬಂದು ಬಿದ್ದ ತಿಮಿಂಗಿಲುಗಳನ್ನು ರಕ್ಷಿಸಿ, ಬಂಧಿತ ಸ್ಥಿತಿಯಲ್ಲಾದರೂ ಅವುಗಳ ವರ್ತನೆ, ಸ್ವಭಾವಗಳನ್ನು ಅಭ್ಯಸಿಸಬೇಕೆಂದು ಅಮೆರಿಕದ ವಿಜ್ಞಾನಿಗಳು ಪ್ರಯತ್ನಿಸಿದರು. ಆದರೆ ತಿಮಿಂಗಿಲುಗಳು ಬಹಳ ಕಾಲ ಬಾಳಲಿಲ್ಲ. ಆದರೆ



ಹಲ್ಲುಗಳ ಬದಲು ಸಾರಣಿಯ
ವ್ಯವಸ್ಥೆಯಿರುವ ತಿಮಿಂಗಲು



ಹಲ್ಲುಗಳಿರುವ ತಿಮಿಂಗಿಲು

ಜೀವಿತವಾಗಿರುವಷ್ಟು ಅವಧಿಯಲ್ಲಿ ಅವು ಮಾನವರೊಡನೆ ಸಹಕಾರದ ಮನೋಭಾವವನ್ನೇ ತೋರಿದವು.

ಸಮುದ್ರದ ನೀರು ತಿಮಿಂಗಿಲದ ದೇಹದ ಭಾರವನ್ನು ಎತ್ತಿಹಿಡಿಯುತ್ತದೆ. ಆದರೆ ತಿಮಿಂಗಿಲ ನೆಲದ ಮೇಲೆ ಬಿದ್ದಾಗ ಪ್ರಕೃತಿದತ್ತವಾದ ಆ ವ್ಯವಸ್ಥೆಯಿಲ್ಲದ್ದರಿಂದ ದೇಹದ ಭಾರವೇ ಅವುಗಳಿಗೆ ಮುಳುವಾಗುತ್ತದೆ. ದೇಹದ ಭಾರಗಿಂದಾಗಿ ಸರಿಯಾಗಿ ಉಸಿರಾಡಿಸಲೂ ಆಗುವುದಿಲ್ಲ ಎಂದು ವಿಜ್ಞಾನಿಗಳು ಹೇಳುತ್ತಾರೆ. ತೀರಕ್ಕೆ ಬಂದು ಬಿದ್ದು ಸತ್ತ ತಿಮಿಂಗಿಲುಗಳ ದೇಹವನ್ನು ವಿಚ್ಛೇದಿಸಿ ಪರೀಕ್ಷಿಸಿದಾಗ ಬಹುತೇಕವಾಗಿ ಅವೆಲ್ಲ ನ್ಯುಮೋನಿಯಾದಿಂದ ಬಳಲುತ್ತಿದ್ದುದು ಕಂಡುಬಂತು. ಅಲ್ಲದೆ ಪುಪ್ಪುಸದಲ್ಲೂ ಯಕೃತ್ತಿನಲ್ಲೂ ಮಿದುಳಿನಲ್ಲೂ ಪರೋಪಜೀವಿಗಳು ಕಾಣಿಸಿಕೊಂಡವು. ವ್ಯಾಧಿಯಿಂದಾಗಿ ಅವುಗಳ ಚಲನೆ ನಿಂತುಹೋಗಿ ತೆರೆಗಳ ಹೊಡೆತದಿಂದ ದಡಕ್ಕೆ ಬಂದು ಬಿದ್ದಿರಬೇಕೆಂಬ ಒಂದು ವಾದ ಇದೆಯಾದರೆ ಪರೋಪಜೀವಿಗಳಿಂದ ತೊಂದರೆಗೀಡಾದ ಮಿದುಳು ತನ್ನ ನಿಯಂತ್ರಣವನ್ನು ಕಳೆದುಕೊಂಡಿದ್ದರಿಂದ ಆ ಸ್ಥಿತಿಯಲ್ಲೆ ದಂಡೆಗೆ ಬಂದು ಬಿದ್ದಿರಬೇಕೆಂಬ ಇನ್ನೊಂದು ವಾದವೂ ಉಂಟು. ಇವೆರಡೂ ವಾದಗಳ ಪೈಕಿ ಸತ್ಯ ಯಾವುದೆಂಬುದು ಗೊತ್ತಿಲ್ಲ. ಪ್ರಾಕೃತಿಕ ಸ್ಥಿತಿಯಲ್ಲಿ ತಿಮಿಂಗಿಲುಗಳನ್ನು ಅಭ್ಯಸಿಸುವುದು ಸಾಧ್ಯವಿಲ್ಲವಾದುದರಿಂದ ಸದ್ಯದ ಮಟ್ಟಿಗಂತೂ ಅವುಗಳ ಸ್ವಭಾವವನ್ನು ಅಭ್ಯಸಿಸುವುದು ಅಸಾಧ್ಯ. ಆದರೆ ಅತಿದೊಡ್ಡ ಪ್ರಮಾಣದಲ್ಲಿ ಆಹಾರ ಸೇವಿಸುವ ಕೊಲೆಗಡುಕ ತಿಮಿಂಗಿಲುಗಳು ಅಥವಾ ಕಿಲ್ಲರ್ ವ್ಹೇಲ್ ಎಂದೇ ಹೆಸರಾದ ಒಂದು ಜಾತಿಯ ಭಯಂಕರ ಜಾತಿಪ್ರಭೇದ ಧ್ರುವಪ್ರದೇಶದಲ್ಲಿ ಸದಾ ಗುಂಪಿನಲ್ಲಿಯೆ ಆಹಾರಾನ್ವೇಷಣೆಗೆ ತೊಡಗಿರುವುದರಿಂದ ಅವುಗಳಲ್ಲಿ ಸಹಕಾರದ ಭಾವನೆ ಬಲವತ್ತರವಾಗಿರಬೇಕು ಎನಿಸುತ್ತದೆ. ಸಮುದ್ರತೀರದ ಮೇಲೆ ಅರೆಜೀವವಾಗಿ ಬಿದ್ದ ಯಾವ ತಿಮಿಂಗಿಲವೂ ಆಹಾರ ತಿನ್ನಲಿಲ್ಲ ನಿಜ. ಆದರೆ ಬಲವಂತದಿಂದ ತಿನ್ನಿಸಿದಾಗ ಹೆಚ್ಚು ಪ್ರತಿರೋಧವನ್ನು ತೋರಿಸಲಿಲ್ಲ ಎನ್ನುವುದೂ ಅಷ್ಟೇ ನಿಜ. ಅಸಹಾಯಕ ಸ್ಥಿತಿಯಲ್ಲಿ ಈ ವಿಧೇಯತೆ ಬಂತೋ ಅಥವಾ ಸ್ವಭಾವಜನ್ಯವಾಗಿಯೇ ಅವು ಸಹಕಾರಭಾವ ಹೊಂದಿರುವವೋ ಎಂಬುದೊಂದು ಜಿಜ್ಞಾಸೆಯ ವಿಷಯ.

ತಿಮಿಂಗಿಲುಗಳು ವಿರಳವಾಗುತ್ತಿರುವ ಹಿನ್ನೆಲೆಯಲ್ಲಿ ೧೯೮೬ರಿಂದಲೇ ತಿಮಿಂಗಿಲುಗಳ ಬೇಟೆಯನ್ನು ಅಂತಾರಾಷ್ಟ್ರೀಯವಾಗಿ ಪ್ರತಿಬಂಧಿಸಲಾಗಿದೆಯಾದರೂ ವೈಜ್ಞಾನಿಕ ಸಂಶೋಧನೆಯ ಹೆಸರಿನಲ್ಲಿ ಅವುಗಳ ಹತ್ಯೆ ನಡೆಯುತ್ತಲೇ ಇದೆ. ಇದರ ಮಾಂಸ, ಕೊಬ್ಬುಗಳಿಗೆ ಭಾರೀ ಬೇಡಿಕೆ. ಆನೆಯ ದಂತದಿಂದ ಕಲಾಕೃತಿಗಳನ್ನು ತಯಾರಿಸುವ ಹಾಗೆಯೆ ತಿಮಿಂಗಿಲದ ಎಲವುಗಳಿಂದಲೂ ಕಲಾಕೃತಿಗಳನ್ನು ತಯಾರಿಸಬಹುದು. ಇದ್ದ ಆನೆಗೆ ಎಷ್ಟು ಬೆಲೆಯೋ ಸತ್ತ ಆನೆಗೂ ಅಷ್ಟೇ ಬೆಲೆ ಎಂಬ ಮಾತು ತಿಮಿಂಗಿಲಕ್ಕೂ ಅಕ್ಷರಶಃ ಅನ್ವಯಿಸುತ್ತದೆ. ಸೌಂದರ್ಯ ಪ್ರಸಾಧನಗಳೇ, ರಸಗೊಬ್ಬರಗಳೇ, ಔಷಧಗಳೇ, ವಿವಿಧ ಬಗೆಯ ಅಂಟುಗಳೇ, ಪರಿಮಳದ್ರವ್ಯಗಳೇ, ಸೋಪುಗಳೇ ಇನ್ನೂ ಎಷ್ಟೋ ಬಗೆಗಳಲ್ಲಿ ತಿಮಿಂಗಿಲದ ದೇಹವನ್ನು ಬಳಸಿಕೊಳ್ಳಲಾಗುತ್ತಿದೆ.

ನಿಜ. ಈ ಕಡಲದೈತ್ಯನೂ ಮಾನವನಿಗೆ ಉಪಕಾರಿಯಾದ. ಆದರೆ ಮಾನವ? ಉತ್ತರ ಸ್ಪಷ್ಟವೇ ಆಗಿರುವುದರಿಂದ ಅದನ್ನಿಲ್ಲಿ ಹೇಳುವುದು ಬೇಡ.

---

## ಹೊಟ್ಟೆಬಾಕ!

**ಮೊ**ದಲನೆಯ ಶತಮಾನದಲ್ಲಿ ಜೀವಿಸಿದ್ದ ರೋಮನ್ ಅಧಿಪತಿ ವಿಟಲಸ್‌ನಷ್ಟು ಹೊಟ್ಟೆಬಾಕ ರಾಜರು ಜಗತ್ತಿನಲ್ಲಿ ಇನ್ನಾರೂ ಆಗಿರಲಿಕ್ಕಿಲ್ಲ. ಇಂದಿನ ಲೆಕ್ಕದಲ್ಲಿ ಸುಮಾರು ೩೬,೦೦೦ ರೂಪಾಯಿಗಳಷ್ಟು ಅಗಾಧ ಮೊತ್ತವನ್ನು ಪ್ರತಿದಿನ ತನ್ನ ಭೋಜನಕ್ಕಾಗಿ ವ್ಯಯಿಸುತ್ತಿದ್ದ. ದಿನವೆಲ್ಲ ತಿನ್ನುವುದರಲ್ಲೆ ಕಳೆಯುತ್ತಿದ್ದ. ಅವನ ಆಡಳಿತಕ್ಕೆ ಬೇಸತ್ತ ಪ್ರಜೆಗಳು ಕೊನೆಗೊಮ್ಮೆ ಬಂಡೆದ್ದು ವಿಟಲಸ್‌ನನ್ನು ಅಧಿಕಾರದಿಂದ ಕಿತ್ತೊಗೆದರು. ಅವನನ್ನು ಅನಾಮತ್ತಾಗಿ ಎತ್ತಿಕೊಂಡು ಹೋಗಿ ಟೈಬರ್ ನದಿಯಲ್ಲಿ ಎಸೆದರು. ದಿನಾಲು ಬರಿ ಪ್ರಾಣಿಗಳಷ್ಟೇ ಅಲ್ಲ, ವಿವಿಧ ಬಗೆಯ ಮತ್ಸ್ಯಗಳನ್ನೂ ಆಹಾರವಾಗಿ ಸೇವಿಸುತ್ತಿದ್ದ ಆತ ಕೊನೆಗೆ ತಾನೇ ಮೀನುಗಳಿಗೆ ಆಹಾರವಾದ.

ಪ್ರೊ. ಎಸ್.ಎಸ್. ಮಾಳವಾಡರ ನಿರೂಪಣೆ

# ನನ್ನ ಶ್ರೀಮತಿಯುವರ ಸಾಹಿತ್ಯ ಸೇವೆ

ಸಣ್ಣ ಕತೆಗಳ ಮೂಲಕ ಸಾಹಿತ್ಯರಂಗ ಪ್ರವೇಶಿಸಿದ ಶ್ರೀಮತಿ ಶಾಂತಾದೇವಿ ಈಗ ಸಣ್ಣ ಕತೆ ಬರೆಯುತ್ತಿಲ್ಲ. ಬರೆಯುವ ವಿಷಯಗಳ ಹರವು ಹೆಚ್ಚಾಗಿದೆ. ಕತೆ ಬರೆದರೂ ಅವು ಶಿವಶರಣರ ಇತರ ಪುಣ್ಯಜೀವಿಗಳ ಉದಾತ್ತ ಬಾಳಿನ ಸಂಕೇತವಾಗಿ ರೂಪುಗೊಳ್ಳುತ್ತಿವೆ. ಪ್ರಣಯ, ಮದುವೆ ದಾಂಪತ್ಯ ಜೀವನದ ಸರಸ ವಿರಸಗಳ ಚಿತ್ರಣ 'ಮೊಗ್ಗೆಯ ಮಾಲೆ' ಎಂಬ ಪ್ರಥಮ ಸಣ್ಣ ಕತೆ ಗಳ ಸಂಕಲನದಲ್ಲಿದೆ. ಈಗ ಅಕ್ಕಮಹಾದೇವಿ, ಬಸವಣ್ಣ ಇಂತಹ ಜೀವಜ್ಯೋತಿಗಳ ಅಂತರಂಗದ ಪ್ರಕಾಶವನ್ನು ಹೊರಹೊಮ್ಮಿಸುವ ಕಲ್ಪಕತೆಯೊಂದಿಗೆ ಕಥೆಗಳು ಮೂಡಿ ಬರುತ್ತಿವೆ. ಪರಿಪಕ್ವಗೊಂಡ ಮನಸ್ಸಿನಿಂದ ಬಾಳಿನ ಅನುಭವದಿಂದ ಶಾಂತಾನಲ್ಲಿ ಕಂಡು ಬರುವ ವಿಕಾಸವಿದು.

ಶಾಂತಾ ಸಣ್ಣಕತೆ ಬರೆಯಲು ಆರಂಭಿಸಿದ ಬಗೆಗೂ ಒಂದು ಕತೆಯಿದೆ. ಮದುವೆಯ ಪೂರ್ವದಲ್ಲಿ- ಆದರೆ ಹಿರಿಯರು ನಮ್ಮ ಮದುವೆಯನ್ನು ನಿಶ್ಚಿತಗೊಳಿಸಿದ ನಂತರ- ನಮಗೆ ಪ್ರಣಯಾರಾಧನೆಯ ಅವಕಾಶ ದೊರೆತಿತ್ತು. ಆಗ ನಾನು ನನ್ನ ಭಾವೀ ಪತ್ನಿಯಲ್ಲಿ ಕಥೆ-ಕಾದಂಬರಿ ಓದುವ ಉತ್ಕಟ ಹಂಬಲವನ್ನು ಕಂಡುಕೊಂಡೆ. ಈ ಅವಧಿಯಲ್ಲಿ ನಾನು ಪ್ರೇಮದ ಕೊಡುಗೆ

ಶ್ರೀಮತಿ ಶಾಂತಾದೇವಿ ಮಾಳವಾಡರ ಸಾಹಿತ್ಯ ಸೇವೆಯನ್ನು ಕುರಿತು ಅವರ ಪತಿಯೇ ಬರೆದ ಲೇಖವಿದು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಮೂರೂವರೆ ದಶಕಗಳ ಕಾಲ ಕನ್ನಡ ಪ್ರಾಧ್ಯಾಪಕರಾಗಿದ್ದ (ಈಗ ದಿವಂಗತರು) ಪ್ರೊ. ಸ.ಸ. ಮಾಳವಾಡರ ಸಾಹಿತ್ಯ ಸಾಧನೆ ಪರಿಚಿತವಾದದ್ದು.

ಪತಿ-ಪತ್ನಿ ಇಬ್ಬರೂ ಸಮಾನವಾಗಿ ಸಾಹಿತ್ಯ ಕಾರ್ಯದಲ್ಲಿ ತೊಡಗಿಕೊಂಡಿದ್ದ ಜೋಡಿಯು ಹಿರಿಯ ತಲೆಮಾರಿನವರಲ್ಲಿ ಕಂಡು ಬಂದದ್ದೇ ಇಲ್ಲ. ಮಾಳವಾಡದ್ವಯರದು ಈ ದೃಷ್ಟಿಯಿಂದಲೂ ಅಪೂರ್ವವಾದ ಅನುರೂಪದ ದಾಂಪತ್ಯ.

ಇದು ೨೨ ವರ್ಷಗಳ ಹಿಂದಿನ ಲೇಖ. ಕರ್ನಾಟಕ ವಿದ್ಯಾವರ್ಧಕ ಸಂಘದ 'ವಾಗ್ಭೂಷಣ' ವಾರ್ಷಿಕದಲ್ಲಿ (೧೯೭೩) ಆಗಿನ ಆದರ ಸಂಪಾದಕರಾಗಿದ್ದ ಪ್ರೊ. ಕೆ.ಎಸ್. ದೇಶಪಾಂಡೆಯವರ ಕೇಳಿಕೆಯ ಮೇರೆಗೆ ಬರೆದದ್ದು. ಅನಂತರವೂ ಶ್ರೀಮತಿ ಶಾಂತಕ್ಕ ತಮ್ಮ ಬರವಣಿಗೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಪ್ರೊ. ಮಾಳವಾಡರ ಈ ಲೇಖ, ಅವರ ಶ್ರೀಮತಿಯ ಸಾಹಿತ್ಯ ಕಾರ್ಯದ ಹಿನ್ನೆಲೆ ಮತ್ತು ಪ್ರೇರಣೆಗಳನ್ನು ತಿಳಿಯಪಡಿಸುತ್ತದೆ. ಮೋಜೆಂದರೆ, ಪ್ರೊ. ಮಾಳವಾಡರ ಲೇಖನ ಕಾರ್ಯದ ಬಗೆಗೂ ಅವರ ಶ್ರೀಮತಿ ಬರೆದದ್ದು, ವಾಗ್ಭೂಷಣದ ಅದೇ ಸಂಪುಟದಲ್ಲಿ ಪ್ರಕಟವಾಗಿದೆ. ಆದರೆ ಕೆಲವು ಅಂಶಗಳನ್ನು ಪ್ರತಿಕ್ರಿಯೆಯ ರೂಪದಲ್ಲಿ ಕೊಡಲಾಗಿದೆ.

● ಶ್ರೀ.ಹಾ. (ಪುಣೆ)

ಯೆಂದು ಕಳಿಸಿದ ಪುಸ್ತಕಗಳಲ್ಲಿ ಮೂರನ್ನು ಇಲ್ಲಿ ಉಲ್ಲೇಖಿಸುತ್ತೇನೆ: 'ಪರಿಣೀತಾ', 'ಬಂಧನದ ಆಚೆ', 'ಸೂತ್ರದ ಬೊಂಬೆ'. ಪರಿಣೀತಾ ಕಾದಂಬರಿಯಲ್ಲಿಯ ಮಧುರ ಭಾವವ್ಯಂಜಕತೆ, ಬಂಧನದ ಆಚೆಯಲ್ಲಿಯ ವಿಚಾರ ಸ್ವಾತಂತ್ರ್ಯ, ಸೂತ್ರದ ಬೊಂಬೆಯಲ್ಲಿ ವ್ಯಕ್ತವಾಗ ಮಹಿಳೆಯ ಸ್ವತಂತ್ರ, ಧೀರ ವ್ಯಕ್ತಿತ್ವ- ಇವು ಮೂರೂ ನಿನ್ನಲ್ಲಿ ಬೆಳೆಯಬೇಕೆಂದು ಪ್ರೇಮಪತ್ರದಲ್ಲಿ ಬರೆದಿದ್ದೆ. ಈ ದಿಸೆಯಲ್ಲಿ ಶಾಂತಾ ನನ್ನ ನಿರೀಕ್ಷೆಯನ್ನು ಮೀರಿಸಿಯೇ ರೂಪುಗೊಂಡಿದ್ದಾಳೆ.

ಹೆಂಡತಿಗೆ 'ನೋರಾ'ನ ವರ್ತನೆಯನ್ನು ಬೋಧಿಸುವ ನನ್ನ ಪ್ರಭಾವ ವಿಚಿತ್ರವೆಂದು ಕೆಲವರಿಗೆ ಅನಿಸಬಹುದು. ಆದರೆ ಸಹಜ ಒಳ್ಳೆಯತನದ ಬಗೆಗೆ ನನ್ನಲ್ಲಿ ಸಹಜವಾದ ಶ್ರದ್ಧೆಯಿದೆ. ಆ ಶ್ರದ್ಧೆಯ ಸಫಲತೆಯನ್ನು ಶಾಂತಾ ನನಗೆ ಒದಗಿಸಿದ್ದಾಳೆ. ಇರಲಿ. 'ಕಥೆ ಓದುವ ಆಸಕ್ತಿ ಇಷ್ಟು ಹೆಚ್ಚಾಗಿರುವ ನೀನೂ ಕಥೆಯನ್ನು ಬರೆಯಲು ಪ್ರಯತ್ನಿಸು' ಎಂಬ ಸಲಹೆ ಇನ್ನೊಂದು ಪ್ರೇಮ ಪತ್ರದಲ್ಲಿತ್ತು. ಶಾಂತಾ ತನಗೆ ಗೊತ್ತಿದ್ದ ಪೇರಲಹಣ್ಣು ಮಾರುವ ಮುದುಕಿಯ ಕತೆಯನ್ನು ತನಗೆ ತಿಳಿದಂತೆ ಬರೆದು ಕಳಿಸಿದಳು. ಅದಕ್ಕಿಷ್ಟು ಸಂಸ್ಕಾರ ಕೊಟ್ಟು ಅದನ್ನು ಧಾರವಾಡದ ಒಂದು ಪತ್ರಿಕೆಯಲ್ಲಿ "ಪೇರಲಹಣ್ಣಿನ ಫಾತಿಮಾ" ಎಂಬ ಹೆಸರಿನಿಂದ ಪ್ರಕಟಿಸಿದುದೂ ಆಯಿತು. ಪ್ರಣಯಾರಾಧನೆಯ ಅವಧಿಯ ಕತೆಯಿದು.

ಮದುವೆಯಾಗಿ ನಮ್ಮ ಮನೆಗೆ ಬಂದಾಗ ಅಲ್ಲಿಯ ಪುಸ್ತಕ ರಾಶಿ ಆಕೆಯನ್ನು ಬಹಳ ಸಂತೋಷಗೊಳಿಸಿತು. ನಮ್ಮಲ್ಲಿ ಹೊಸ ಹೊಸ ಪುಸ್ತಕಗಳು ಬರುತ್ತಲೇ ಇದ್ದವು. ಅವುಗಳಲ್ಲಿ ಕಥೆ ಕಾದಂಬರಿಗಳನ್ನು ಮಾತ್ರ ಆರಿಸಿಕೊಂಡು ಆಕೆ ಅವುಗಳನ್ನು ಓದಿ ಮುಗಿಸುತ್ತಿದ್ದಳು. ಕರ್ನಾಟಕ ಕಾಲೇಜು ಲೈಬ್ರರಿಯ ಕಥೆ ಕಾದಂಬರಿಗಳೂ ಸಾಲದಾದವು. ಆಗ ಅರ್ಜುಣಗಿ ರಾಮಣ್ಣ 'ಶಾಂತೇಶ ವಾಚನಾಲಯ'ದಿಂದ ಕಥೆ ಕಾದಂಬರಿಗಳನ್ನು ತಂದುಕೊಡುತ್ತಿದ್ದ. (ಈಗ ಶ್ರೀಮತಿ ಚಿಕ್ಕೋಡಿ ಅವರಿಗೆ ಅಂತಹ ಹೊಣೆ ಸೇರಿದೆ.) ಇಷ್ಟೆಲ್ಲ ಆದರೂ ಶಾಂತಾಳಿಗೆ ಇನ್ನೂ ಕಥೆ ಕಾದಂಬರಿ ಬೇಕೆನಿಸಿತು. ಆಗ ನಾನೊಂದು ಉಪಾಯ ಯೋಚಿಸಿದೆ. "ಕಥೆ ಕಾದಂಬರಿಗಳಿಗಿಂತ ಹೆಚ್ಚು ಗಂಭೀರವಾದ ಪುಸ್ತಕಗಳನ್ನು ನೀನು ಓದುವುದು ಒಳ್ಳೆಯದು." ಎಂದು ಸಲಹೆ ಕೊಟ್ಟೆ. ನನ್ನ ವಿಪುಲ ಪುಸ್ತಕ ಸಂಗ್ರಹ, ಅಂದಿನ ಉನ್ನತ ಮಟ್ಟದ ಸಾಹಿತಿಗಳ ಹತ್ತಿರದ ಪರಿಚಯ, ಸಾಹಿತ್ಯ ಸಮ್ಮೇಳನ ಉತ್ಸವಗಳಲ್ಲಿ ನನ್ನೊಂದಿಗೆ ಭಾಗಿಯಾಗುವ ಅವಕಾಶ- ಇವುಗಳಿಂದಾಗಿ ಶಾಂತಾನಲ್ಲಿ ವಿಚಾರ ಸಾಹಿತ್ಯ, ಗಂಭೀರ ಕೃತಿಗಳ ಬಗೆಗೆ ಆಸಕ್ತಿ ಬೆಳೆಯತೊಡಗಿತ್ತು. ಅಂತೆಯೇ ನನ್ನ ಸಲಹೆ ಫಲಕಾರಿಯಾಯಿತು. ಕಥೆ, ಕಾದಂಬರಿಗಳನ್ನು ತಂದುಕೊಡುವುದು ನನಗೆ ಕಠಿಣವೆನಿಸಿದಾಗ ನಾನು ಹರಿಹರನ ರಗಳೆಗಳನ್ನು ಓದಿ ತೋರಿಸಿ ಅವುಗಳನ್ನು ಓದುವಂತೆ ಹೇಳಿದೆ. ಮುಂದೆ ಷಟ್ಪದಿ ಕಾವ್ಯಗಳಲ್ಲಿಯ ರಮ್ಯ ತಾಣಗಳತ್ತ ಆಕೆಯನ್ನು ಆಕರ್ಷಿಸಿದೆ. ನನ್ನ ಯೋಜನೆಗೆ ಇನ್ನಿಷ್ಟು ಮೂರ್ತ ಸ್ವರೂಪ ಕೊಡಬೇಕೆಂದು ನನಗೆ ಅನಿಸಿತು. ಆಗ ಕನ್ನಡ ಸಾಹಿತ್ಯ ಪರಿಷತ್ತಿನ "ಕನ್ನಡ ಜಾಣ" ಪರೀಕ್ಷೆಗೆ ಕಟ್ಟುವಂತೆ ಆಕೆಯ ಮನವೊಲಿಸಿದೆ. ಬಿ.ಎಂ. ಶ್ರೀಕಂಠಯ್ಯ, ಮಾಸ್ತಿ, ಆಲೂರ ವೆಂಕಟರಾಯರು, ಮುದವೀಡು ಕೃಷ್ಣರಾಯರು, ಡಾ. ಹಳಕಟ್ಟಿ, ಕುವೆಂಪು ಅಂತಹರ ನಿಕಟ ಪರಿಚಯ. ಪ್ರೊ. ಬಸವನಾಳರಂತಹ ಹತ್ತಿರದ ಆಪ್ತರು. ಸಾಹಿತ್ಯ ಪರಿಷತ್ತಿನ ಅಂದಿನ ಚಟುವಟಿಕೆಗಳ ಬಗೆಗೆ ಆಸ್ಥೆ. ಪೋದ್ದಾರ ರಂಗಪ್ಪ, ಪಂಡಿತ ಮ.ಪ್ರ. ಪೂಜಾರರಂತಹರು ಮನೆಯವರೆಗೆ ಬಂದು ಪಾಠ ಹೇಳಲು ಒಪ್ಪಿದ್ದಕ್ಕಾಗಿ ಗೃಹಿಣಿ ಶಾಂತಾದೇವಿ ವಿದ್ಯಾರ್ಥಿನಿಯಾಗಲು ಒಪ್ಪಿದಳು. ಗೃಹಜೀವನದ ಹೊಣೆಯ ಮಧ್ಯದಲ್ಲಿಯೂ ಅಭ್ಯಾಸ ಮಾಡಿ ಪರೀಕ್ಷೆಗೆ ಕಟ್ಟಿ ಕನ್ನಡ ಜಾಣೆ ಆದಳು. ಮಾಸ್ತಿಯವರು 'ಜೀವನ' ಪತ್ರಿಕೆಗಾಗಿ ಒಂದು ಮಹತ್ವದ ಪುಸ್ತಕದ ಬಗೆಗೆ ವಿಮರ್ಶೆ ಬರೆಯುವಂತೆ ಮಾಡಿದರು. ಪ್ರೊ. ಬಸವನಾಳರು ವಚನ ಸಾಹಿತ್ಯವನ್ನು ಕುರಿತು ಲೇಖ ಬರೆಯಿಸಿದರು. ಮುಂದೆ ಅರವಿಂದಾಶ್ರಮದ ಸಂಪರ್ಕ. ಹೀಗೆ ಶಾಂತಾ ಕಥೆ ಕಾದಂಬರಿಗಳಿಂದ ಗಂಭೀರ ಸಾಹಿತ್ಯದತ್ತ ಆಸ್ಥೆ ಬೆಳೆಸಿಕೊಂಡಳು. ಅಂತೆಯೇ ಕತೆಗಾರ್ತಿ ಶಾಂತಾದೇವಿ ಈಗ ಗಂಭೀರ ಸಾಹಿತ್ಯ ರಚನೆಗೆ ತೊಡಗಿದ್ದಾರೆ.



ಶಾಂತಾನ ಸಣ್ಣ ಕತೆಯ ಸಂಕಲನಗಳು ಎರಡು: ಮೊಗ್ಗೆಯ ಮಾಲೆ (೧೯೪೧), ಕುಂಕುಮ ಬಲ (೧೯೫೪).

ಮೊಗ್ಗೆಯ ಮಾಲೆ ಚೊಚ್ಚಲ ಸಂಭ್ರಮ. ಚಿಕ್ಕ ಗಾತ್ರದಲ್ಲಿ ಆಕರ್ಷಣೀಯವಾಗಿ ಅದು ಪ್ರಕಟಗೊಂಡಿತು. ಅದರ ಪ್ರತಿಗಳು ಈಗ ದೊರೆಯುತ್ತಿಲ್ಲ. ನೋಡಲು ದೊರೆಯುವ ಪ್ರತಿಯ ಆಕರ್ಷಣೀಯತೆಯನ್ನು ಗೆದ್ದಿಲು ಹಾಳು ಮಾಡಿವೆ. ಈ ಕಥಾ ಸಂಕಲನದಲ್ಲಿ ಸ್ವಂತ ಜೀವನದ, ಸುತ್ತಣ ಪರಿಚಿತರ ಬಾಳಿನ ರಸ-ವಿಷ ಸನ್ನಿವೇಶಗಳ ಚಿತ್ರಣ ಸರಳವಾಗಿ ಮೂಡಿ ಬಂದಿದೆ. ನೇರವಾದ ನಿರೂಪಣೆ. ನಿರೂಪಣೆಗೆ ಇನ್ನೂ ಮೊನೆ ಬಂದಂತಿಲ್ಲ. ಆದರೆ ಹೃದಯ ಸ್ಪರ್ಶಿ ಸನ್ನಿವೇಶಗಳನ್ನು ರಮ್ಯವಾಗಿ ಹೇಳಬಲ್ಲ ಜಾಣ್ಮೆಯ ಮುನ್ಸೂಚನೆ ಇಲ್ಲಿದೆ. ಕುಂಕುಮ ಬಲದ ಕತೆಗಳಲ್ಲಿ ನಿರೂಪಣೆಯು ಒಂದು ಹದಕ್ಕೆ ಬರತೊಡಗಿದೆ. ಕಥಾವಸ್ತುವಿನಲ್ಲಿ ವೈವಿಧ್ಯವಿದೆ. ಬಾಳಿನ ಸಮಸ್ಯೆ ಸಂಘರ್ಷಗಳನ್ನು ಗುರುತಿಸುವ ದೃಷ್ಟಿಯಿದೆ. ಸಾತ್ವಿಕ-ಸಂತಾಪ, ವಿಚಾರಪರತೆಗಳ ಅಭಿವ್ಯಕ್ತಿ, ಸುಂದರ ಶೈಲಿ ಇಲ್ಲಿ ಸಾಧಿಸಿವೆ. ಅಂತೆಯೇ ಇಲ್ಲಿಯ ಕತೆಗಳು ಜನಪ್ರಿಯತೆ ಗಳಿಸಿದವು. ಕನ್ನಡ ಕತೆಗಾರ್ತಿಯರ ಸಾಲಿನಲ್ಲಿ ಶಾಂತಾದೇವಿಯ ಹೆಸರು ಗಣನೀಯವಾಗುವುದಕ್ಕೆ ಇಲ್ಲಿಯ ಕೆಲವು ಕತೆಗಳು ಕಾರಣವಾದವು. ಸರಸ ದಾಂಪತ್ಯದಿಂದ ಶಾಂತಾ ನಲಿಯುತ್ತಾಳೆ; ವಿರಸ ದಾಂಪತ್ಯದಿಂದ ನೋದುಕೊಳ್ಳುತ್ತಾಳೆ. ಈ ಸೂತ್ರದ ಪ್ರತಿಕ್ರಿಯೆಯೆಂಬಂತೆ ಇಲ್ಲಿಯ ಹೆಚ್ಚಿನ ಕತೆಗಳು ರೂಪುಗೊಂಡಿವೆ. ಡಾ. ವಿ.ಕೆ. ಗೋಕಾಕರು ಈ ಕಥಾಸಂಕಲನದ ಬಗೆಗೆ ಹೇಳಿದಂತೆ, "ಶಾಂತಾದೇವಿ ಅನುಭವದಿಂದ, ಅಭ್ಯಾಸದಿಂದ, ಮನನದಿಂದ ಸಾಂಸ್ಕೃತಿಕ ಹಾಗೂ ಜೀವನ ವಿಮರ್ಶಾತ್ಮಕ ದೃಷ್ಟಿಯೊಂದನ್ನು ಸಂಪಾದಿಸಿದ್ದಾರೆ. ಅದರ ಜೊತೆಗೆ ಸ್ತ್ರೀ ಸಹಜವಾದ ಒಂದು ಅಂತಃಕರಣವೂ, ಕರುಣೆಯೂ ಅವರಲ್ಲಿ ಮನೆ ಮಾಡಿಕೊಂಡಿದೆ. ಕಲೆಯನ್ನು ಹದಗೊಳಿಸಲು ಬೇಕಾದ ಕೃತಿ-ಪ್ರತಿಕೃತಿಗಾಗಿ ಸನ್ನಿವೇಶಗಳ ಸಂಘರ್ಷಣವೂ ಇವುಗಳಲ್ಲಿ ರೂಪುಗೊಂಡಿದೆ.

ಈ ಸಂಕಲನದ ಕತೆಗಳನ್ನು ಡಾ. ಗೋಕಾಕರು ಮೂರು ಬಗೆಯಾಗಿ ವಿಂಗಡಿಸಿದ್ದಾರೆ: ೧) ಕಥನಾತ್ಮಕ ಪ್ರಬಂಧಗಳು, ೨) ಧ್ಯಾನ ಚಿತ್ರಗಳು, ೩) ಪಾತ್ರಸೃಷ್ಟಿ ಸನ್ನಿವೇಶ ಸಂಘರ್ಷಣೆಗಳಿಂದ ಹದಗೊಂಡ ಕತೆಗಳು. ಧ್ಯಾನ ಚಿತ್ರಕ್ಕೆ ಸಂಬಂಧಿಸಿದ ಗುಂಪಿನಲ್ಲಿ 'ರಂಜನಿಮಹಾಲ್' ಬರುತ್ತಿದೆ. ಇದು ಕಿತ್ತೂರು ಸಂಸ್ಥಾನದ ಒಬ್ಬ ರಸಿಕ ಅರಸನ ಬಾಳಿನಲ್ಲಿಯ ಒಂದು ರೋಮಾಂಚಕಾರಿ ಸನ್ನಿವೇಶವನ್ನು ಚಿತ್ರಿಸುತ್ತದೆ. ದೇಸನೂರಿನ ಒಂದು ಕಟ್ಟಡವು ಅದಕ್ಕೆ ಪ್ರೇರಣೆಯನ್ನು ಒದಗಿಸಿತು. ಈ ಕತೆಯು ಇನ್ನೂ ಓದುಗರ ಸ್ಮರಣೆಯಲ್ಲಿ ಉಳಿದಿದೆಯೆಂದು ಅವರೇ ಹೇಳುತ್ತಾರೆ. ಮೂರನೆಯ ಗುಂಪಿನ ಶ್ರೇಷ್ಠ ಕತೆ 'ಕುಂಕುಮ ಬಲ.' ಇದಕ್ಕೆ ಶಾಂತಾಳ ಒಬ್ಬ ಅಜ್ಜಿಯ ಬಾಳು ಪ್ರೇರಣೆಯಾಯಿತು. "ಅಗ್ನಿಯ ಸೆಕೆ ತಾಕಿದರೂ ಕುಂದದ ಸ್ತ್ರೀ ಸಹಜ ಪ್ರೇಮದ, ತಾಳ್ಮೆಯ ಆಸೆ-ಆಕಾಂಕ್ಷೆಗಳ ಚಿತ್ರಣ ಇಲ್ಲಿದೆ. ಇಲ್ಲಿ ಕಥಾನಾಯಕಿಯರ ಅಂತರಂಗವನ್ನೇ ಹೊಕ್ಕು

## ಶಾಂತಾದೇವಿ ಮಾಳವಾಡರ ಪ್ರತಿಕ್ರಿಯೆ



# ನನ್ನ ಪತಿಯ ಸಾಹಿತ್ಯ ಸಾಧನೆ

**ಮೂ**ವತ್ತೈದು ವರುಷಗಳ ಹಿಂದೆ ನಮ್ಮ ಮದುವೆ ನಿಶ್ಚಿತವಾದೊಡನೆ ನನ್ನ ಯಜಮಾನರು ನನಗೊಂದು ಪ್ರೇಮ ಪತ್ರ ಬರೆದು ಕಾಣಿಕೆ ಕಳಿಸಿದ್ದರು. ಆ ಕಾಣಿಕೆಯ ಕಟ್ಟನ್ನು ಬಿಚ್ಚಿದಾಗ 'ಪರಿಣೀತಾ', 'ಬಂಧನದ ಆಚೆ', 'ಚಂದ್ರನಾಥ', 'ಸೂತ್ರದ ಗೊಂಬೆ' ಮೊದಲಾದ ಪುಸ್ತಕಗಳಿದ್ದವು. ಆ ಪುಸ್ತಕಗಳನ್ನೋದಿ, ಆ ಬಗೆಗೆ ಅಭಿಪ್ರಾಯ ವಿಮರ್ಶೆ ಬರೆದು ಕಳಿಸಲು ತಿಳಿಸಿದ್ದರು. ಆ ಪುಸ್ತಕಗಳ ಆಯ್ಕೆಯಿಂದ ಅವರ ಅಭಿರುಚಿಯ ಅರಿವು ನನಗಾಯಿತು. ನಾನಾಗ ಹದಿನೈದು ವರುಷದವಳು. ಆಗ ನನಗೆ ಸಾಹಿತ್ಯದ ಬಗೆಗೆ ಆಸ್ಥೆ ಇದ್ದರೂ ಹೆಚ್ಚಿನ ಅನುಭವವಿರಲಿಲ್ಲ.

'ದೃಷ್ಟಿಯಂತೆ ಸೃಷ್ಟಿ' ಎಂಬ ನುಡಿ ಸುಳ್ಳಲ್ಲ. ಸಾಹಿತ್ಯ ಸೃಷ್ಟಿಯಲ್ಲಿ ಈ ಮಾತಿನ ಅರಿವು ನನಗಾಯಿತು. 'ಸಾಹಿತ್ಯ ಜೀವನದ ಪ್ರತಿಬಿಂಬ' ಎಂಬುದೂ ಅಷ್ಟೇ ಸತ್ಯವಾದದ್ದೆಂದು ನನ್ನವರ ಸಾಹಿತ್ಯ ಸಾಧನೆಯಿಂದ ನಾನರಿತುಕೊಂಡಿದ್ದೇನೆ. ಕನ್ನಡ ಪ್ರಾಧ್ಯಾಪಕರಾದ ಅವರು ಸದಾ ಸಾಹಿತ್ಯಾಭ್ಯಾಸದಲ್ಲಿ ನಿರತರು. ನನಗೆ ಲಲಿತ ಸಾಹಿತ್ಯ ಇಷ್ಟವಾದರೆ ಅವರಿಗೆ ವಿಚಾರ ಸಾಹಿತ್ಯ ಪ್ರಿಯವಾದುದು. ಓದಲು ಪುಸ್ತಕ ಕೈಯಲ್ಲಿ ಹಿಡಿದರೆ ಸಾಕು, ಇನ್ನೊಂದು ಕೈಯ್ಯಲ್ಲಿ ಪೆನ್ಸಿಲ್ ಇರಲೇಬೇಕು. ತರಗತಿಯ ಪಾಠ, ಸಾರ್ವಜನಿಕ ಭಾಷಣಗಳಿಗಾಗಿ ಮೊದಲು ಟಿಪ್ಪಣಿ ಸಿದ್ಧಗೊಳಿಸುವ ರೂಢಿಯುಳ್ಳ ಅವರು, ಯಾವುದೇ ಪುಸ್ತಕ ಓದಿದರೂ ತಮಗೆ ಮೆಚ್ಚಿಗೆಯಾದ ಸಾಲಿನ ಕೆಳಗೆ ಗೆರೆಯೆಳೆಯುವುದುಂಟು. ಅವುಗಳನ್ನು ಒಂದು ಕಾಗದದಲ್ಲಿ ಪ್ರತಿ ಮಾಡಿ ಇಡುವುದುಂಟು. ಓದು ವಾಗ ಅಚ್ಚಿನ ದೋಷಗಳಿದ್ದರೆ, ವಾಕ್ಯರಚನೆಯ ದೋಷ ಕಂಡು ಬಂದರೆ ಕೂಡಲೆ ಅವುಗಳನ್ನು ಕೆಂಪು ಪೆನ್ಸಿಲ್ಲಿನಿಂದ ಗುರುತು ಮಾಡುವದು ಅವರ ಸ್ವಭಾವ.

ಆತ್ಮವಿಶ್ವಾಸದ ಕವಿ ರನ್ನ, ಬಿಚ್ಚುಮಾತಿನ ಸರ್ವಜ್ಞ, ಕೆಚ್ಚೆದೆಯ ನಿಸ್ಪೃಹ ಮನೋಭಾವದ ಕವಿ ಹರಿಹರ, ನನ್ನ ಪತಿಯ ಅಚ್ಚುಮೆಚ್ಚಿನ ಕವಿಗಳು. ಯಾಕೆಂದರೆ ಆ ಮೂವರೂ ಯಾರಿಗೂ ತಲೆ ಬಾಗದೆ ಆತ್ಮವಿಶ್ವಾಸದಿಂದ ಸ್ವಾಭಿಮಾನದಿಂದ ಬಾಳಿದವರು. ಅಭಿಮಾನಕ್ಕೆ ಚ್ಯುತಿ ಬರುವಂತೆ ಕಂಡಾಗ ದೊರೆತ ಸ್ಥಾನವನ್ನು ಬಿಟ್ಟುಹೋದ ಧೀರರು. ಹರಿಹರನು ಪಂಪಾ ಶತಕದಲ್ಲಿ ನಿರೂಪಿಸಿದ "ಪೋಗೆನೆ ಪೋಪ ಬಾರೆಲವೊ ಬಾರನೆ ಜೀಯ ಹಸಾದವೆಂದು ಬೆಳ್ಳಾಗುತೆ ಬರ್ಪ, ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ. ಮತ್ತಾಗಳೆ ಝುಂಕಿಸಲ್ ನಡುಗಿ ಬೀಳುವ ಸೇವೆಯ ಕಷ್ಟವೃತ್ತಿಯಂ ನೀಗಿದೆನಿಂದು ನಿಮ್ಮ ದಯೆಯಿಂ ಕರುಣಾಕರ ಹಂಪೆಯಾಳ್ದನೆ" ಈ ನುಡಿ ನನ್ನ ಪತಿಗೆ ಅಚ್ಚುಮೆಚ್ಚಿನದು. ಅವರ ಜೀವನ ದೃಷ್ಟಿ ಈ ರೀತಿ ರೂಪಿತವಾಗಿದೆ. 'ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು,' ಎಂಬ ಬಸವಣ್ಣನವರ ನುಡಿಯಂತೆ ನಡೆಯುತ್ತಿರುವ ನನ್ನವರ ಸಾಹಿತ್ಯ ಸಾಧನೆ ಆ ದಿಸೆಯಲ್ಲಿ ಸಾಗಿದೆ. ಗಂಭೀರ ಸಾಹಿತ್ಯ, ವಿಮರ್ಶಾ ಸಾಹಿತ್ಯ ಅವರಿಗೆ ಪ್ರಿಯವಾದುದು. ಪಾಶ್ಚಾತ್ಯ ಬರೆಹಗಾರರಲ್ಲಿ ಸೋಮರಸೆಟ್ ಮಾಮ್‌ನ ಕೃತಿಗಳು ಅವರ ಮನವನ್ನು ಸೆರೆ ಹಿಡಿದಿವೆ.

ಕತೆ-ಕಾದಂಬರಿಗಳನ್ನು ಓದುವ ಚಟ ಹೆಚ್ಚಾಗಿ

ಅವರಿಗಿಲ್ಲ. ಗಂಭೀರ ಸಮಸ್ಯೆಗಳನ್ನು ವಿಚಾರ ಪ್ರಚೋದಕ ಹಿನ್ನೆಲೆಯನ್ನು ಹೊಂದಿದ ಕತೆ-ಕಾದಂಬರಿಗಳನ್ನು ಮಾತ್ರ ಆಸ್ಥೆಯಿಂದ ಓದುತ್ತಾರೆ. ತುಲನಾತ್ಮಕ ವಿವೇಚನೆಯ ಗ್ರಂಥಗಳು, ವಿಮರ್ಶೆ, ತತ್ವಜ್ಞಾನ, ಕಾವ್ಯಗಳನ್ನೇ ಓದುವರು.

ವಿಮರ್ಶಾ ಸಾಹಿತ್ಯ ನನ್ನವರಿಗೆ ಪ್ರಿಯವಾದುದು. ಗ್ರಂಥ ವಿಮರ್ಶೆ ಮಾಡುವಾಗ ಸಂಕುಚಿತ ಭಾವನೆಗೆ ಆಸ್ಪದ ಕೊಡದೆ, ಪ್ರಕಾಶಕರ ಹಾಗೂ ಲೇಖಕರ ದಾಕ್ಷಿಣ್ಯಕ್ಕೆ ಒಳಗಾಗದೆ ಸ್ಪಷ್ಟ ಅಭಿಪ್ರಾಯ ಬರೆಯುವುದು ಅವರ ಸ್ವಭಾವ. ಬೇಕಾದವರ ಗ್ರಂಥಗಳನ್ನು, ಬೇಕಾದ ವ್ಯಕ್ತಿಯನ್ನು ಹೊಗಳಿ, ಬೇಡಾದವರ ಸಾಹಿತ್ಯಗಲ್ಲಿಯ ಅರೆಕೊರೆಗಳನ್ನು ಹುಡುಕಿ ಬರೆಯುವ ರೀತಿ ನೀತಿ ಅವರಿಗರಿಯದು. ವಿಮರ್ಶಿಸಬೇಕಾದ ಗ್ರಂಥಗಳ ಪುಟ ಪುಟಗಳನ್ನು ಸೂಕ್ಷ್ಮವಾಗಿ ಆಸ್ಥೆಯಿಂದ ಓದಿ ತಪ್ಪುಗಳಿದ್ದರೆ ಅವುಗಳನ್ನು ಗುರುತಿಸಿ, ಒಳ್ಳೆಯದನ್ನು ಎತ್ತಿ ತೋರಿ ಸ್ಪಷ್ಟ ಅಭಿಪ್ರಾಯವನ್ನು ವಿಮರ್ಶೆಯಲ್ಲಿ ವ್ಯಕ್ತಪಡಿಸುತ್ತಾರೆ. ಹಳೆಗನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ ಅವರು ಶಬ್ದಾಡಂಬರದ ಪ್ರದರ್ಶನಕ್ಕೆ ಹೋಗುವುದಿಲ್ಲ. ಅತಿ ಹೊಗಳಿಕೆ, ಅತಿ ವರ್ಣನೆ, ಅತಿ ವಿನಯ ಅವರ ಜೀವನದಲ್ಲಿಯೂ ಇಲ್ಲ. ಸಾಹಿತ್ಯದಲ್ಲಿಯೂ ಇಲ್ಲ. ಮತ್ತೊಬ್ಬರು ಆ ರೀತಿ ಬಳಸಿದರೂ ಅವರಿಗೆ ಸೇರುವುದಿಲ್ಲ. ನಾನು ಬರೆದ ಲೇಖನಗಳನ್ನು ಅವರ ಅವಗಾಹನೆಗೆ ಕೊಟ್ಟಾಗ ಶಬ್ದಗಳ ಆಡಂಬರ ಕಂಡರೆ ಕತ್ತರಿ ಪ್ರಯೋಗ ಮಾಡಿಯೇ ಬಿಡುವರು. ಏಕಾಗ್ರಚಿತ್ತದಿಂದ ಓದಿ, ಓದಿದುದನ್ನು ಗಂಭೀರವಾಗಿ ವಿಚಾರ ಮಾಡಿ, ಶಬ್ದಗಳನ್ನು ಅಳೆದು ತೂಗಿ ಬರೆಯುವದು ಅವರ ಪರಿಪಾಠ. ಮಾತೂ ಅಷ್ಟೇ! ನುಡಿದಂತೆ ನಡೆಯುತ್ತ ನಡೆದಂತೆ ಬರೆಯುತ್ತ ಸಾಹಿತ್ಯ ಸಾಧನೆಯಲ್ಲಿ ತೊಡಗಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ. ಆಧ್ಯಾತ್ಮ ಚಿಂತನ, ಸಾಹಿತ್ಯ ಮಂಥನಗಳಲ್ಲಿ ಸಂತೃಪ್ತ ಜೀವನ ನಡೆಸುತ್ತಿರುವ ನನ್ನ ಪತಿಯ ಸಾಹಿತ್ಯ ಸಾಧನೆ ಸಾರ್ಥಕವಾದದ್ದು.



(ಶಾಂತಾದೇವಿಯವರು) ನೋಡಿದ್ದಾರೆ." ಎಂಬುದು ವಿಮರ್ಶಕರ ಉಕ್ತಿಯಾಗಿದೆ.

ಶಾಂತಾ ಸಣ್ಣ ಕತೆಯ ಪ್ರಪಂಚದಿಂದ ಸರಿಯುವದಕ್ಕೆ ಹರಿಹರನ ರಗಳೆಗಳ ಅಭ್ಯಾಸ ಕಾರಣವಾಯಿತು. ಹರಿಹರನ ಭಕ್ತಿ ನಿರ್ಭರತೆ, ಉತ್ಸಾಹ, ರಗಳೆಯ ಓಟ, ಸೊಬಗುಗಳನ್ನು ಆಕೆ ಮೆಚ್ಚಿಕೊಂಡಳು. ಶಿವನನ್ನು ಕುರಿತ ಹರಿಹರನ ಪ್ರಾರ್ಥನೆಗಳಿಗೆ ಮಾರುಹೋದಳು. ಪೂಜೆಯ ಕಾಲಕ್ಕೆ ಅವುಗಳನ್ನು ಪಠಿಸುವ ಅಭ್ಯಾಸ ಇಟ್ಟುಕೊಂಡಳು.



ಮುಂದೆ ಅಂತಹ ಪ್ರಾರ್ಥನೆಗಳನ್ನು ಸಂಗ್ರಹಿಸಿ 'ಹರಿಹರನ ಪ್ರಾರ್ಥನೆಗಳು' ಎಂಬ ಪುಸ್ತಕದ ಸಂಪಾದಕಿಯಾದಳು.

ವಿಪುಲ ವಾಚನ, ಆಧ್ಯಾತ್ಮದ ಬಗೆಗೆ ಆಸಕ್ತಿ, ಮಹಿಳೆಯರ ಹಿರಿಮೆಯ ಬಗೆಗೆ ಅಸಾಧಾರಣವಾದ ಹೆಮ್ಮೆ ಬೆಳೆದುದರ ಫಲವಾಗಿ ಆಕೆ ಮಹಿಳೆಯರ 'ಆತ್ಮಶ್ರೀ' ಎಂಬ ಚಿಕ್ಕ ಪುಸ್ತಕ ರಚಿಸಿದಳು. ಅದು ೧೯೫೦ರಲ್ಲಿ ಗವಿಮಠದಲ್ಲಿ ಸೇರಿದ ಸರ್ವಧರ್ಮ ಸಮ್ಮೇಳನದ ಕಾಲಕ್ಕೆ ಪ್ರಕಟವಾಯಿತು. ಅದರಲ್ಲಿ ೧)

ವೇದೋಪನಿಷತ್, ೨) ರಾಮಾಯಣ-ಮಹಾಭಾರತ, ೩) ಜೈನ, ಬೌದ್ಧ ಯುಗಗಳ ಮಹಿಳೆಯರ ಆತ್ಮಶ್ರೇಯನ್ನು ಸಂಗ್ರಹವಾಗಿ ನಿರೂಪಿಸಿ ಬಸವಯುಗದ ಶಿವಶರಣೆಯರ ಆಧ್ಯಾತ್ಮಿಕ ಸಂಪತ್ತನ್ನು ವಿವರಿಸಲಾಗಿದೆ. ಈ ಕೃತಿ ರಚನೆಯ ಹೊತ್ತಿಗೆ ಶಾಂತಾ ವಿವಿಧ ವಿಷಯಗಳ ಬಗೆಗೆ ವ್ಯವಸ್ಥಿತವಾಗಿ ವ್ಯಾಸಂಗ ಮಾಡುವುದನ್ನು ಆರಂಭಿಸಿದ್ದಳು. ಇದು ಬೆಳೆದು ಮುಂದೆ ಆಕೆ ಸಂಶೋಧನಾ ಕ್ರಮವನ್ನು ರೂಢಿಸಿಕೊಂಡಳು. ನಾನು ಕನ್ನಡ ಸಂಶೋಧನ ಸಂಸ್ಥೆಯ ಡೈರೆಕ್ಟರ್ ಆಗಿದ್ದಾಗ ನನ್ನೊಂದಿಗೆ ಆಕೆ ಸಂಚಾರ ಕೈಕೊಂಡಳು. ಪ್ರಾಚೀನ ಕರ್ನಾಟಕದ ಶಿಲ್ಪಕಲೆಯನ್ನು ಮಹಿಳೆಯರ ಕೇಶಾಲಂಕಾರ, ವೇಷ-ಭೂಷಣಗಳ ದೃಷ್ಟಿಯಿಂದ ಸೂಕ್ಷ್ಮವಾಗಿ ಅವಲೋಕಿಸಿ ಟಿಪ್ಪಣಿ ಮಾಡಿಕೊಂಡಳು. ಈ ಬಗೆಗೆ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಬರುವ ವರ್ಣನೆಗಳನ್ನು ಓದಿ ಬರೆದಿಟ್ಟುಕೊಂಡಳು. ಕಾವ್ಯಗಳ ವರ್ಣನೆಗೆ ಅನುಗುಣವಾಗುವಂತೆ ಶಿಲ್ಪಕಲೆಯ ಆಕಾರಗಳನ್ನು ಹೊಂದಿಸಿಕೊಂಡಳು.

ಈ ಬಗೆಯ ದೀರ್ಘ ಶ್ರಮದಿಂದಾಗಿ ಆಕೆ "ಮಹಿಳೆಯರ ಅಲಂಕಾರ" ಎಂಬ ಸಚಿತ್ರ ಮಹತ್ವಪೂರ್ಣ ಗ್ರಂಥವನ್ನು ರಚಿಸಿದಳು (೧೯೬೧). ಪದವಿಗಳಿಗಾಗಿ ಸಿದ್ಧಗೊಳಿಸುವ ಮಹಾಪ್ರಬಂಧಗಳ ಮಾದರಿಯಲ್ಲಿ ಆಕ ಪರಿಶ್ರಮ ಪಟ್ಟು ಸಾಮಗ್ರಿ ಸಂಗ್ರಹಿಸುವುದನ್ನು, ಅದನ್ನು ಕ್ರಮಗೊಳಿಸುವುದನ್ನು ಕಂಡು ನಾನೇ ಅಚ್ಚರಿಪಟ್ಟುಕೊಂಡೆ. "ನಿನ್ನ ಈ ಪುಸ್ತಕ ನೋಡಿ ನಿನಗೆ ಯಾರಾದರೂ ಡಿಗ್ರಿ ಕೊಡಬಹುದು," ಎಂದು ವಿನೋದ ಮಾಡಿದೆ. ಶಾಂತಾದೇವಿ ರಚಿಸಿದ ಕೃತಿಗಳಲ್ಲಿ ಇದು ಬಹಳ ಅಭ್ಯಾಸಪೂರ್ಣವೂ ಮೌಲಿಕ ಸಾಮಗ್ರಿಯುಳ್ಳದ್ದೂ ಆಗಿದೆ. ಅಲ್ಲದೆ ಕನ್ನಡ ಸಾಹಿತ್ಯದಲ್ಲಿ ಈ ಬಗೆಯ ಕೃತಿ ಇದೊಂದೇ ಆದಂತಿದೆ. ಆದರ ಈ ಬಗೆಯ ಗಂಭೀರ ಮತ್ತು ಮಹತ್ವದ ಕೃತಿಗೆ ಸಾಕಷ್ಟು ಪ್ರಚಾರ ಮನ್ನಣೆಗಳು ಮಾತ್ರ ದೊರೆಯಲಿಲ್ಲ. ಇದನ್ನು ಕುರಿತ ವಿವೇಚನೆ ಇಲ್ಲಿ ಪ್ರಸ್ತುತವಲ್ಲ. ಈ ಪುಸ್ತಕದಲ್ಲಿ ೧) ಕೇಶಾಲಂಕಾರ, ೨) ಆಭರಣಗಳ ಅಂದ, ೩) ಸೀರೆಯ ಸೊಬಗು ಎಂಬ ಮೂರು ಭಾಗಗಳಿವೆ. ಆಯಾ ವಿಷಯಕ್ಕೆ ಸಂಬಂಧಪಟ್ಟ ಚಿತ್ರ, ನಕ್ಷೆಗಳಿವೆ. ವಿವಿಧ ಬಗೆಯ ಕೇಶಾಲಂಕಾರಗಳಿಗೆ ಸಮರ್ಪಕ ಹೆಸರುಗಳನ್ನು ನಿರ್ಧರಿಸುವಲ್ಲಿ ಶಾಂತಾದೇವಿ ಸ್ವಂತಿಕೆಯನ್ನು ತೋರಿದ್ದಾಳೆ. ಹಳೆಯ ಆಭರಣಗಳ ಸಂಗ್ರಹ, ಅವುಗಳ ಛಾಯಾಚಿತ್ರ, ಭಾರತದ ವಿವಿಧ ಪ್ರದೇಶಗಳ ಸೀರೆಗಳು, ಕಸೂತಿ ಜನಪದ ಸಾಹಿತ್ಯದಿಂದ ಆಯ್ದುಕೊಂಡ ಸೀರೆಯ ಹೆಸರುಗಳು ಇವೆಲ್ಲ ಈ ಗ್ರಂಥದ ಉಪಯುಕ್ತತೆ, ವೈವಿಧ್ಯಗಳನ್ನು ಹೆಚ್ಚಿಸಿವೆ. ಈ ಪುಸ್ತಕಕ್ಕೆ ದೊರೆತ ಮನ್ನಣೆಯ ಮಾತೇನೇ ಇರಲಿ, ಈ ಗ್ರಂಥ ಪ್ರಕಟಣೆಯ ಮೂಲಕ ಶಾಂತಾದೇವಿ ಮಹಿಳೆಯರ ಕೇಶಾಲಂಕಾರ, ಆಭರಣ, ಸೀರೆಗಳ ಬಗೆಗೆ ಅಧಿಕೃತವಾಗಿ ಹೇಳಬಲ್ಲವಳೆಂಬುದು ಅನೇಕರಿಗೆ ತಿಳಿದು ಬಂದಿತು.

ಬಣ್ಣ, ವೈವಿಧ್ಯ, ಅಲಂಕಾರ, ಅಚ್ಚುಕಟ್ಟುತನ, ವಿವಿಧ ತಿಂಡಿಗಳ ತಯಾರಿಕೆ, ಇಬ್ಬದಾದ ಪದ ಸರಣಿ, ಕಸೂತಿ, ಹೆಣಿಕೆ, ಹೂಗಳು ಶಾಂತಾನ ಮೆಚ್ಚಿಗೆಯ ವಿಷಯಗಳಾಗಿವೆ. ಗೃಹಾಲಂಕಾರದ ಬಗೆಗೆ ನಮ್ಮ ಮನೆಯು ಆಕೆಗೆ ಒಂದು ಪ್ರಯೋಗ ಶಾಲೆಯಾಗಿಯೂ ಪರಿಣಮಿಸಿದೆ. ಸಹಜವಾದ ಆಸ್ಥೆಯನ್ನು ವ್ಯಾಸಂಗದ ಮೂಲಕ ಬಲಿಸಿಕೊಂಡು ಆಕೆ 'ಸೊಬಗಿನ ಮನೆ' ಎಂಬ ಪುಸ್ತಕವನ್ನು ರಚಿಸಿದಳು (೧೯೫೧). ಈ ಪುಸ್ತಕವು ಹಲವಾರು ಬಗೆಯ ಉಪಯುಕ್ತ ವಿಷಯಗಳಿಂದ ಕೂಡಿದೆ. ನಿರೂಪಣೆ ಸರಳವಾಗಿದೆ. ಅಂತೆಯೇ ಅದಕ್ಕೆ ಜನಪ್ರಿಯತೆ ಒದಗಿ ಬಂದಿದೆ. ಗೃಹವಿಜ್ಞಾನದ ವಿದ್ಯಾರ್ಥಿನಿಗಳಿಗೆ ಪ್ರಯೋಜನಕಾರಿಯಾದ ಪುಸ್ತಕವದು. ಆದರೆ ಆ ಪುಸ್ತಕದ ಪ್ರತಿಗಳು ಒಂದು ಸಹಕಾರಿ ಸಂಸ್ಥೆಯ ಗುದಾಮದಲ್ಲಿ ಹಾಗೆಯೇ ಉಳಿದು ಅವು ಸಹಜ ಸುಲಭವಾಗಿ ದೊರೆಯದಂತಹ ಸನ್ನಿವೇಶವುಂಟಾಗಿದೆ.

ಶ್ರೀಮತಿ ಶಾಂತಾದೇವಿಯ ಅತ್ಯಂತ ಜನಪ್ರಿಯ ಕೃತಿಯಾಗಿ ಪರಿಣಮಿಸಿದ್ದು 'ಕನ್ನಡ ತಾಯಿ' (೧೯೫೬) ಎಂಬ ४೦ ಪುಟಗಳ ಪುಸ್ತಕ. ಈ ಪುಸ್ತಕದೊಂದಿಗೆ 'ಜಯಪ್ರಕಾಶನ' ಎಂಬ ಹೆಸರಿನ ನಮ್ಮ ಖಾಸಗಿ ಪ್ರಕಟನಾಲಯವೂ ರೂಪುಗೊಂಡಿತು. 'ಏಳ್ ಕನ್ನಡ ತಾಯ್, ಬಾಳ್ ಕನ್ನಡ ತಾಯ್' ಎಂಬ ನುಡಿಗಳನ್ನು ಬಿ.ಎಂ. ಶ್ರೀ. ಭಾವ

ಪೂರ್ಣವಾಗಿ ಹೇಳುತ್ತಿದ್ದುದನ್ನು ಶಾಂತಾ ಮೆಚ್ಚಿಕೊಂಡಳು. ಅದು ಈ ಪುಸ್ತಕ ಬರೆಯುವಲ್ಲಿ ಫಲಕಾರಿಯಾಯಿತು. ಪ್ರಾಚೀನ ಕರ್ನಾಟಕದ ಕೆಲವು ಮಹಿಳೆಯರ ಸ್ಫೂರ್ತಿದಾಯಕ ಜೀವನ ಚಿತ್ರಣ ಈ ಪುಸ್ತಕದಲ್ಲಿದೆ. ಸ್ಫೂರ್ತಿದಾಯಕ ವ್ಯಕ್ತಿಗಳನ್ನು ಚಿತ್ರಿಸುವ ಇಲ್ಲಿಯ ಶೈಲಿಯೂ ಸ್ಫೂರ್ತಿದಾಯಕ ವಾಗಿ ಮೂಡಿ ಬಂದಿದೆ. ಈ ಪುಸ್ತಕದ ಮೂರು ಆವೃತ್ತಿಗಳು ಬಂದಿವೆ. ಈಗ ಪ್ರತಿಗಳು ಲಭ್ಯವಿಲ್ಲ. ಹಲವಾರು ಗದ್ಯ ಸಂಗ್ರಹಗಳಲ್ಲಿ ಇದರಲ್ಲಿಯ ಗದ್ಯ ಭಾಗಗಳನ್ನು ಸೇರಿಸಲಾಗಿದೆ. ಮುಂಬಯಿ ವಿಶ್ವವಿದ್ಯಾಲಯವು ಈ ಪುಸ್ತಕದ ಗದ್ಯ ಭಾಗವನ್ನು ಹಲವಾರು ಸಲ ಆರಿಸಿಕೊಂಡು ಶಾಂತಾನಿಗೆ ಮನ್ನಣೆ ಸಲ್ಲಿಸಿದೆ. ಈ ಪುಸ್ತಕದ ರಚನೆಯನ್ನು ಶಾಂತಾ ಸುಲಭವಾಗಿ ಪೂರೈಸಿದಳು. 'ಮಹಿಳೆಯರ ಅಲಂಕಾರ' ಪುಸ್ತಕಕ್ಕೆ ದೀರ್ಘ ಪರಿಶ್ರಮಪಟ್ಟಿದ್ದಳು. ಅದಕ್ಕೆ ದೊರೆತ ಪ್ರಚಾರ, ಮನ್ನಣೆಗಳ ದಿಸೆಯಲ್ಲಿ ಮಾತ್ರ ವಿಪರೀತ ಕಂಡು ಬಂದಿದೆ.

ಶ್ರೀ ಅರವಿಂದಾಶ್ರಮದ ನಿಕಟ ಸಂಪರ್ಕ ಮತ್ತು ವಚನ ಸಾಹಿತ್ಯದ ಅಭ್ಯಾಸಗಳು ಶಾಂತಾನಲ್ಲಿ ಹೊಸ ದೃಷ್ಟಿಯನ್ನು ತಂದಿವೆ. ವಚನ ಸಾಹಿತ್ಯವನ್ನು ಹೆಚ್ಚು ಹೆಚ್ಚಾಗಿ ಓದಿದಂತೆ ಆಕೆ ಶಿವಶರಣೆಯರ ಜೀವನ-ಸಾಧನೆಗಳನ್ನು ಹೊಸ ಬಗೆಯಾಗಿ ಅರ್ಥೈಸಿಕೊಂಡಿದ್ದಾಳೆ. ಬಸವಣ್ಣನವರ ಬಗೆಗೆ ವ್ಯಾಸಂಗ ಮಾಡಿ ಅವರ ಅಂತರಂಗವನ್ನು ಕಂಡುಕೊಂಡಿದ್ದಾಳೆ. ಅವರ ದಾಂಪತ್ಯ ಜೀವನದ ಬಗೆಗೆ ಮನನ ಮಾಡಿದ್ದಾಳೆ. ಇವುಗಳ ಫಲವಾಗಿ 'ಬಸವ ಪ್ರಕಾಶ' ಎಂಬ ಕೃತಿ ಮೂಡಿ ಬಂದಿದೆ (೧೯೭೬). ಅದು ಬಸವಣ್ಣನವರ ಕೌಟುಂಬಿಕ, ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಬಾಳನ್ನು ಕುರಿತ ರಮ್ಯ ಕಥಾನಕವಾಗಿದೆ. ಶಿವಾನುಭವ ಮಂಟಪದ ಬಗೆಗೆ ಓದಿದ್ದನ್ನು ಶ್ರೀ ಅರವಿಂದಾಶ್ರಮದಲ್ಲಿ ಕಂಡದ್ದನ್ನು ಸಮನ್ವಯಿಸಿದ ಚಿತ್ರಣವಾಗಿದೆ.

'ಬಸವ ಪ್ರಕಾಶ' ಶ್ರೀಮತಿ ಶಾಂತಕ್ಕ ಅವರ ಉದ್ಗ್ರಂಥವಾಗಿದೆ. ಮಾಗುತ್ತ ನಡೆದಿದ್ದ ಅವರ ವ್ಯಕ್ತಿತ್ವ ಇದರಲ್ಲಿ ಪೂರ್ಣ ಅಭಿವ್ಯಕ್ತಿಯನ್ನು ಪಡೆದಿದೆ. ಸುಂದರವಾದ, ಚಿರಕಾಲ ಬಾಳಬಲ್ಲ, ಸಾಹಿತ್ಯ ಕೃತಿಯನ್ನು ಅವರು ಕನ್ನಡಿಗರಿಗೆ ಕಾಣಿಕೆಯಿತ್ತಿದ್ದಾರೆ. ವಚನಗಳಿಗೆ ಉಚಿತವಾದ ಸನ್ನಿವೇಶಗಳು ಅರಳಿದಾಗ- ಸನ್ನಿವೇಶಕ್ಕಾಗಿ ವಚನದ ಉದ್ಧರಣವೋ ಇಲ್ಲವೆ ವಚನದ ಸೌಂದರ್ಯ ನಿರೂಪಣೆಗಾಗಿ ಸನ್ನಿವೇಶದ ನಿರ್ಮಾಣವೋ ಎಂದು ನಾವು ತೂಗಗೊಳ್ಳುತ್ತೇವೆ. ಒಂದೊಂದು ವಚನಕ್ಕೆ ಒಂದೊಂದು ಸನ್ನಿವೇಶದ ತೊಡವನ್ನಿಟ್ಟು ನೋಡಿ ಶ್ರೀಮತಿಯವರು ಸಂತೋಷಿಸಿದ್ದಾರೆ. ಈ ಕೃತಿಯ ಇನ್ನೊಂದು ವಿಶೇಷವೆಂದರೆ ಪಾತ್ರಗಳ ಆಧ್ಯಾತ್ಮಿಕ ವಿಕಾಸದ ಮೇಲೆ ಎಲ್ಲ ಪ್ರಕಾಶವನ್ನು ಕೇಂದ್ರೀಕರಿಸಿರುವುದು"- ಹೀಗೆಂದು ವಿಮರ್ಶಕರ ನುಡಿ ಒಡಮೂಡಿದೆ.

ಬಸವಣ್ಣನವರ ಪವಾಡಗಳಿಗಿಂತ ಅವರ ಆಧ್ಯಾತ್ಮ ಶಕ್ತಿಯ ಪ್ರಭಾವ ಹೆಚ್ಚಿನದೆಂಬುದನ್ನು ತೋರಿಸಿಕೊಡುವುದು ಲೇಖಕಿಯ ಇಲ್ಲಿಯ ಉದ್ದೇಶವಾಗಿದೆ. ಮಲಾಪಹಾರಿ ಕೃಷ್ಣೆಯರು ಸೇರುವ ಕೂಡಲಸಂಗಮದ ಕಲ್ಲು ಮಂಟಪವನ್ನು ಚಿಂತನಶೀಲತೆಯಿಂದ ನಿರೀಕ್ಷಿಸುತ್ತಿರುವಾಗ ಈ ಪುಸ್ತಕ ರಚನೆಗೆ ಪ್ರೇರಣೆ ಒದಗಿ ಬಂದಿತು. ವಚನ ಸಾಹಿತ್ಯದ ಆಧಾರ ಈ ಕೃತಿಗಿದ್ದರೂ ಇಲ್ಲಿ ಕಲ್ಪಕತೆಯನ್ನು ಹರಿಬಿಡಲಾಗಿದೆ. ಆ ಕಲ್ಪಕತೆಯು ಸುಂದರವಾಗಿಯೂ ಮೂಡಿ ಬಂದಿದೆ. ಬಸವಣ್ಣನವರ ಹಿರಿಮೆಯನ್ನು ಚಿತ್ರಿಸುವ ಕೃತಿ ಇದಾಗಿದ್ದರೂ ಇದರಲ್ಲಿ ಅಕ್ಕನಾಗಮ್ಮ, ನೀಲಲೋಚನೆ, ಗಂಗಾದೇವಿಯರ ಹಿರಿಮೆಯನ್ನು ಸ್ಫುಟಗೊಳಿಸಿದಂತಾಗಿದೆ. ಬಸವಣ್ಣನವರನ್ನು ತೇಜಃಪುಂಜ ವ್ಯಕ್ತಿಯಾಗಿ ರೂಪಿಸಿದ ಶ್ರೇಯಸ್ಸು ಆ ಮೂವರು

**ಅಂದು–ಇಂದು**

ಅಂದು
ಗುರುಕುಲದಲ್ಲಿ
ಗುರು ಬೋಧಿಸುತ್ತಿದ್ದ
ಅಪಹರಿಸಿ.
'ವಿದ್ಯಾರ್ಥಿ ಚಿತ್ತ!'
ಇಂದೂss
ಬೋಧಿಸುವವರಿದ್ದಾರೆ
ಅಪಹರಿಸಿ
'ವಿದ್ಯಾರ್ಥಿ ವಿತ್ತ!!'

● ಎಚ್.ಎನ್. ಸೋಮಶೇಖರ

ಶಿವಶರಣೆಯರಿಗೆ, ಎಂಬ ಪ್ರತಿಪಾದನೆ ಇಲ್ಲಿದೆ. ಶಾಂತಾದೇವಿ ಮಹಿಳಾವಾದಿ. ಬಸವಣ್ಣನವರ ಬಾಳನ್ನು ಕುರಿತ ಹೊಸ ಬಗೆಯ ಗ್ರಂಥವಿದಾಗಿದೆ. ಮೈಸೂರು ವಿಶ್ವವಿದ್ಯಾನಿಲಯವು ಇದನ್ನು ಪಠ್ಯ ಪುಸ್ತಕವೆಂದು ನೇಮಕ ಮಾಡಿದುದು ಶಾಂತಾನಿಗೆ ಹೆಮ್ಮೆಯ ವಿಷಯವೇ ಅಹುದು. ಏಕೆಂದರೆ ಶಾಂತಾ ಶಾಲೆಯಲ್ಲಿ ಕಲಿತದ್ದು ಇಂಗ್ಲಿಷ್ ಎರಡನೆಯ ಇಯತ್ತೆಯವರೆಗೆ ಮಾತ್ರ. ಆಮೇಲೆ ಓದಿದ್ದು ಮಾತ್ರ ಸಾಕಷ್ಟು.

ಒಂದೊಂದು ವಚನಕ್ಕೆ ಒಂದೊಂದು ಸನ್ನಿವೇಶ ನಿರ್ಮಾಣ ಮಾಡುವ ದೃಷ್ಟಿಯಿಂದಾಗಿ 'ಅಕ್ಕನ ಭಾವ ಸೌರಭ' ಎಂಬ ಹೊಸ ಕೃತಿಯೊಂದು ಹೊರಬಂದಿತು. ಅಂಗೈ ಗಾತ್ರದ ಐವತ್ತು ಪುಟಗಳ ಚಿಕ್ಕ ಪುಸ್ತಕವಿದು. ಅಕ್ಕಮಹಾದೇವಿಯ ವಚನಗಳಿಗೆ ಹಿನ್ನೆಲೆಯನ್ನು ಕಲ್ಪಿಸಿಕೊಂಡ ಭಾವಕಥನ ಗುಚ್ಛವಿದು. ಇದು ಶ್ರೀ ಸಿದ್ಧಗಂಗಾ ಕ್ಷೇತ್ರದ ಪೂಜ್ಯ ಡಾ. ಶಿವಕುಮಾರ ಸ್ವಾಮಿಗಳ ರಜತ ಮಹೋತ್ಸವದ ಕಾಲಕ್ಕೆ (೨೭-೫-೧೯೭೨) ಪ್ರಕಟವಾಗಿ ಪೂಜ್ಯ ಸ್ವಾಮಿಗಳಿಗೆ ಸಮರ್ಪಿತವಾಗಿದೆ. ಇಲ್ಲಿಯ ಭಾವ ಕಥನದ ಬಗೆಯು ಹೊಸತೂ ಆಗಿದೆ.

ಶ್ರೀಮತಿ ಶಾಂತಾದೇವಿ ಕಳೆದ ಮೂವತ್ತು ವರುಷಗಳಿಂದ ಸಾಹಿತ್ಯ ಸಾಧನೆಯಲ್ಲಿ ತೊಡಗಿದ್ದಾಳೆ. ಪ್ರಕಟವಾಗಬೇಕಾದ ಸಾಮಗ್ರಿಯು ಇನ್ನೂ ಸಾಕಷ್ಟಿದೆ. ಸಣ್ಣಕತೆ, ಜೀವನಚಿತ್ರ, ಮಹಿಳೆಯರ ಅಲಂಕಾರ, ಕುಶಲ ಕಲೆ, ಗೃಹಾಲಂಕಾರ, ಮಹಿಳೆಯರ ಆತ್ಮ ತೇಜಸ್ಸು, ಸಮಸ್ಯೆಗಳು, ಪ್ರಾರ್ಥನಾ ಸಂಕಲನ, ಬಸವಣ್ಣನವರ ಬಾಳು, ಅಕ್ಕ ಮಹಾದೇವಿಯ ಭಾವಲೋಕ- ಈ ದಿಸೆಗಳಲ್ಲಿ ನನ್ನ ಶ್ರೀಮತಿ ಸಾಹಿತ್ಯ ಸೇವೆ ಗೈದಿದ್ದಾಳೆ.

★ ★ ★

ಈ ವಿಷಯವನ್ನು ಕುರಿತು ಲೇಖನ ಬರೆಯಬೇಕೆಂದು ಸಂಪಾದಕರು ನನ್ನನ್ನು ಕೇಳಿದ್ದು ಅವರು ನನ್ನಿಂದ ಅಪೇಕ್ಷಿಸಿದ ಮೊದಲನೆಯ ಬಿಕ್ಕಟ್ಟಿನ ಕೆಲಸವೆನ್ನಬಹುದು. ಯಥಾರ್ಥವಾದಿಯು ನಿರ್ವಿಕಾರವಾಗಿ ಬರೆಯಬೇಕು. ಆದರೆ ಹೆಂಡತಿಯ ಬಗೆಗೆ ನಿರ್ವಿಕಾರವಾಗಿ ಉಳಿಯಲು ಸಾಧ್ಯವೆ? ಈ ತೊಡಕಿನಲ್ಲಿ ನಾನು ಲೇಖನ ಬರೆಯುವುದನ್ನು ಮುಂದೆ ತಳ್ಳುತ್ತ ಬಂದೆ. ಸಂಪಾದಕರ ನೆನಪಿನ ಮಾತುಗಳ ಹೂಬಾಣ ಹೆಚ್ಚಾದಾಗ ಅವಸರದಲ್ಲಿ ಇದನ್ನು ಬರೆದು ಮುಗಿಸಿದೆ. ಅದೀಗ ಓದುಗರ ಮುಂದಿದೆ. ನನಗೋ ಬರಹವು ಯಥಾರ್ಥವಾಗಿ ಮೂಡಿ ಬಂದೀತೇ? ನಿರ್ವಿಕಾರವಾಗಿ ಬರೆಯುವುದು ಆದೀತೇ? ಎಂಬ ಯೋಚನಾ ಚಕ್ರದಿಂದ ಬಿಡುಗಡೆ ದೊರೆತಿದೆ. ●

## ಪ್ರಪಂಚದ ಅತ್ಯಂತ ದೊಡ್ಡ ಏಡಿ

ಜಪಾನಿನ ದೈತ್ಯ 'ಜೇಡರ ಏಡಿ' ತನ್ನ ಹೊರಚಾಚಿದ ಹನ್ನೊಂದು ಅಡಿ ಅಂತರದ ಚಿಮಟಗಳನ್ನು ಹೊಂದಿರುವ, ಪ್ರಪಂಚದಲ್ಲೆಲ್ಲ ಅತ್ಯಂತ ದೊಡ್ಡದಾದ ಗಡಸು ಚರ್ಮದ ಏಡಿ ಜಾತಿಗೆ ಸೇರಿದ ಸಮುದ್ರ ಜೀವಿ. ಬಹು ಅಪರೂಪದ ಪ್ರಾಯಕ್ಕೆ ಬಂದ ಈ ದೈತ್ಯ ಜೇಡರ ಏಡಿ ಸಾಧಾರಣವಾಗಿ ಸಮುದ್ರ ತಳದಲ್ಲಿ ಸಾವಿರದ ಇನ್ನೂರು ಅಡಿ ಆಳದಲ್ಲಿ ವಾಸಿಸುತ್ತದೆ. ವಸಂತ ಕಾಲದಲ್ಲಿ ಗಂಡಿನ ಜತೆಗೂಡುವ ಹೆಣ್ಣು ಏಡಿ ಮೊಟ್ಟೆ ಇಡಲು ಮಾತ್ರ ಆಳವಿಲ್ಲದ ಪ್ರದೇಶಕ್ಕೆ ವಲಸೆ ಹೋಗುತ್ತದೆ. ಹೆಣ್ಣು ಏಡಿ ಒಂದು ಸಲಕ್ಕೆ ೧೫ ಲಕ್ಷ ತತ್ತಿಗಳನ್ನಿಡುತ್ತದೆಯಾದರೂ ಅವುಗಳಲ್ಲಿ ಉಳಿಯುವವು ಕೆಲವು ಮಾತ್ರ. ಒಂದು ಸಾವಿರ ಜಾತಿಯ ಏಡಿಗಳ ಪೈಕಿ ಅತ್ಯಂತ ಭಾರಿಯಾದ ಇದು ಐವತ್ತು ವರ್ಷಗಳವರೆಗೂ ಜೀವಿಸಿರಬಲ್ಲದು.

ಮುಳುಗಿ ಸತ್ತವರ ದೇಹವನ್ನು ಕಬಳಿಸುವುದರಿಂದ ಈ ದೈತ್ಯ ಏಡಿಯನ್ನು 'ಶಿನಿನ್‌ಗಾನಿ' (ಸತ್ತ ಮನುಷ್ಯನ ಏಡಿ) ಎನ್ನುತ್ತಾರೆ ಜಪಾನೀಯರು. ಸಾಧಾರಣವಾಗಿ ಮೀನು, ಕಪ್ಪೆಚಿಪ್ಪುಗಳು ಮತ್ತಿತರ ಮೃದ್ವಂಗಿಗಳೇ ಇದರ ಆಹಾರ.

• ಬೋನ್ಸಾಯ್ ಶ್ರೀನಿವಾಸ

# ಜ್ಞಾನನಿಧಿ

## ವಿದ್ಯಾರ್ಥಿ ಅಂಕಣ

## ಜೀವನ ಜಲ

ಪೃಥ್ವಿಯ ಒಟ್ಟು ಮೂವತ್ತೆರಡು ಕೋಟಿ ಅರವತ್ತು ಲಕ್ಷ ಘನ ಮೈಲುಗಳಷ್ಟು ವಿಶಾಲವಾದ ಜಾಗದಲ್ಲಿ ನೀರು ವ್ಯಾಪಿಸಿದೆ. ಒಂದು ಘನಮೈಲಿನಷ್ಟು ಜಾಗದಲ್ಲಿ ೧,೦೦೦,೦೦೦,೦೦೦,೦೦೦ ಗ್ಯಾಲನ್ನುಗಳಷ್ಟು ನೀರು ಇದೆಯೆಂದರೆ ಈ ಮೂವತ್ತೆರಡು ಕೋಟಿ ಅರವತ್ತು ಲಕ್ಷ ಘನಮೈಲುಗಳಷ್ಟು ಜಾಗದಲ್ಲಿ ಎಷ್ಟು ನೀರು ಇರಬಹುದೆನ್ನುವುದನ್ನು ನೀವೇ ಲೆಕ್ಕಹಾಕಿ.

ಆದರೆ ಈ ಎಲ್ಲ ನೀರೂ ಪ್ರಯೋಜನಕ್ಕೆ ಬರುವುದಿಲ್ಲ. ಪೃಥ್ವಿಯಲ್ಲಿ ಸಂಗ್ರಹಗೊಂಡಿರುವ ನೀರಿನ ಪೈಕಿ ಶೇಕಡಾ ಮೂರರಷ್ಟು ಮಾತ್ರ ಸ್ವಚ್ಛ ನೀರು. ಈ ಸ್ವಚ್ಛ ನೀರಿನ ಮುಕ್ಕಾಲು ಪಾಲು ಧ್ರುವ ಪ್ರದೇಶಗಳಲ್ಲೂ ಎತ್ತರದ ಶೀತಲ ಪ್ರದೇಶಗಳಲ್ಲೂ ಹಿಮಗಟ್ಟಿದೆ. ಪೃಥ್ವಿಯ ಮೇಲೆ ಹರಿಯುವ ಎಲ್ಲ ನದಿಗಳ ನೀರನ್ನೂ ಒಂದೂ ಹನಿ ಬಿಡದಂತೆ ಸಾವಿರ ವರ್ಷಗಳವರೆಗೆ ಸಂಗ್ರಹಿಸಿದರೆ ಆಗುವಷ್ಟು ನೀರು ಧ್ರುವ ಪ್ರದೇಶಗಳಲ್ಲಿ ಹಿಮಗಟ್ಟಿದೆ.

ಘನ, ದ್ರವ ಹಾಗೂ ಅನಿಲ (ಹಬೆ) ಈ ಮೂರೂ ರೂಪದಲ್ಲಿರುವ ಏಕೈಕ ಪದಾರ್ಥವೆಂದರೆ ನೀರೊಂದೇ.

ನಾವು ಇಡಿ ಜೀವಮಾನದಲ್ಲಿ ಸರಾಸರಿಯಾಗಿ ಹದಿನಾರುಸಾವಿರ ಗ್ಯಾಲನ್ನುಗಳಷ್ಟು ಅರ್ಥಾತ್ ಅರವತ್ತು ಸಾವಿರದ ಆರುನೂರು ಲೀಟರುಗಳಷ್ಟು ನೀರನ್ನು ಕುಡಿಯುತ್ತೇವೆ.

ಆದರೆ ಉದ್ದಿಮೆಗಳು ಬಳಸುವ ಪ್ರಮಾಣವನ್ನು ಪರಿಗಣಿಸಿದರೆ ಮಾನವ ಸ್ವಂತಕ್ಕಾಗಿ ಬಳಸುವ ನೀರಿನ ಪ್ರಮಾಣ ಏನೂ ಅಲ್ಲ. ಒಂದು ಕಿಲೋಗ್ರಾಂನಷ್ಟು ಉಕ್ಕು ತಯಾರಿಸಲು ೧೭೦ ಲೀಟರುಗಳಷ್ಟು ನೀರು ಬೇಕು. ಕಾಗದದ ಉದ್ದಿಮೆಯಲ್ಲಿಯೂ ನೀರನ್ನು ಬಹುದೊಡ್ಡ ಪ್ರಮಾಣದಲ್ಲಿ ಬಳಸಿಕೊಳ್ಳಲಾಗುತ್ತಿದೆ.

ನೀವು ನಂಬುತ್ತೀರೋ ಇಲ್ಲವೋ, ನಮ್ಮಲ್ಲಿ ಹೆಚ್ಚಿನ ಪಾಲು ನೀರೇ ಇದೆ. ನಮ್ಮ ದೇಹದ ಶೇಕಡ ಮೂವತ್ತೈದರಷ್ಟು ಭಾಗ ಮಾತ್ರ ಘನರೂಪದಲ್ಲಿದೆ. ಉಳಿದ ಶೇಕಡಾ

(೪೭ನೆ ಪುಟಕ್ಕೆ)

## ಎಷ್ಟು ಉದ್ದ ?

ಜಗತ್ತಿನ ಅತಿ ದೊಡ್ಡ ಪುಸ್ತಕದಂಗಡಿ ಯಾವುದು ಗೊತ್ತೆ ? ಲಂಡನ್ನಿನ ಡಬ್ಲು ಆ್ಯಂಡ್ ಜಿ ಫಾಯ್ಲ್. ಅಲ್ಲಿನ ಪುಸ್ತಕದ ಷೆಲ್ಫುಗಳನ್ನೆಲ್ಲ ಸಾಲಾಗಿ ಜೋಡಿಸಿದರೆ ಮೂವತ್ತು ಮೈಲಿನಷ್ಟು ಉದ್ದವಾಗುವುದು.

ಹಳೆಯ ಪುಸ್ತಕಗಳನ್ನು ಮಾರುವ ಅತಿ ದೊಡ್ಡ ಪುಸ್ತಕದಂಗಡಿಯಿರುವುದೂ ಇಂಗ್ಲೆಂಡಿನಲ್ಲೆ. ವೇಲ್ಸ್‌ನಲ್ಲಿ ರಿಚರ್ಡ್ ಬೂತ್ ಕಂಪನಿಯವರು ನಡೆಸುವ ಆ ಅಂಗಡಿಯಲ್ಲಿ ಒಂಬತ್ತರಿಂದ ಹನ್ನೊಂದು ಲಕ್ಷದಷ್ಟು ಹಳೆಯ ಪುಸ್ತಕಗಳ ಸಂಗ್ರಹ ಯಾವಾಗಲೂ ಇರುತ್ತದೆ.



# ಔಷಧಗಳು ಹೇಗೆ ಕೆಲಸ ಮಾಡುತ್ತವೆ ?

ಭಾಗ-೨

ಮೊದಲೇ ಹೇಳಿದ ಹಾಗೆ ಶರೀರ ಒಂದು ರಾಸಾಯನಿಕ ಕಾರಖಾನೆ ಇದ್ದಹಾಗೆ. ಆರೋಗ್ಯ ಸರಿಯಾಗಿ ಉಳಿಯಬೇಕಾದರೆ ರಾಸಾಯನಿಕಗಳು ಕ್ಲುಪ್ತ ಪ್ರಮಾಣದಲ್ಲಿಯೆ ಉತ್ಪಾದನೆಗೊಳ್ಳಬೇಕು. ಸ್ವಲ್ಪ ಹೆಚ್ಚು ಕಡಿಮೆ ಯಾದರೂ ಶರೀರದ ರಕ್ಷಣಾವ್ಯವಸ್ಥೆಗೆ ಧಕ್ಕೆ ಯುಂಟಾಗಿ ಹೊರಗಿನಿಂದ ಒಳಸೇರಿದ ರೋಗಗಳು ವರ್ಧಿಸಲು ಅನುವಾಗುವುದು. ಪೇಟೆಯಲ್ಲಿ ದೊರೆಯುವ ಅನೇಕ ಔಷಧಿಗಳು ಶರೀರದಲ್ಲಿ ಉತ್ಪಾದನೆಗೊಳ್ಳುವ ರಾಸಾಯನಿಕಗಳಿಗೆ ಆಸರೆಯೊದಗಿಸುವ ಕೆಲಸ ಮಾಡುತ್ತವೆನ್ನುವುದು ನಿಮ್ಮಲ್ಲನೇಕರಿಗೆ ಗೊತ್ತಿರಲಿಕ್ಕಿಲ್ಲ.

ರೋಗ ಬ್ಯಾಕ್ಟೀರಿಯದಿಂದಲೂ ಬರಬಹುದು; ವೈರಸ್ಸುಗಳಿಂದಲೂ ಬರಬಹುದು. ಬ್ಯಾಕ್ಟೀರಿಯದಿಂದ ರೋಗವುಂಟಾದಾಗ ಡಾಕ್ಟರರು ಪ್ರತಿಜೈವಿಕಗಳನ್ನು ವಿಧಿಸುವುದುಂಟು. ಪೆನ್‌ಸಿಲ್ಲಿನ್ನಿನಂಥ ಪ್ರತಿಜೈವಿಕಗ

ಳನ್ನು ಮೊದಲು ಅತಿ ನವಿರಾದ ಮೃತ್ತಿಕೆಯಲ್ಲಿ ಬೆಳೆಸಿ ಪ್ರತ್ಯೇಕಿಸಲಾಗುತ್ತಿತ್ತು. ಆದರೆ ಇಂದು ಪ್ರಯೋಗಾಲಯಗಳಲ್ಲಿ ಬೇರೆ ಬೇರೆ ರಾಸಾಯನಿಕಗಳನ್ನು ಸಂಶ್ಲೇಷಿಸುವ ಮೂಲಕ ಪ್ರತಿಜೈವಿಕಗಳನ್ನು ಪಡೆಯಲಾಗುತ್ತಿದೆ. ಇವು ದೇಹದಲ್ಲಿ ಕಾರ್ಯವೆಸಗುವ ವಿಧಾನ ಎರಡು ತೆರನಾದದ್ದು: ಒಂದು ಬಗೆಯ ಪ್ರತಿಜೈವಿಕಗಳು ಬ್ಯಾಕ್ಟೀರಿಯ ಹೊರಗವಚವನ್ನು ನಿರ್ಮಿಸಿಕೊಳ್ಳುವುದನ್ನು ತಡೆಗಟ್ಟಿದ್ದರೆ ಇನ್ನೊಂದು ಬಗೆಯ ಪ್ರತಿಜೈವಿಕಗಳು ಬ್ಯಾಕ್ಟೀರಿಯದ ಜೀವಕಣದ ರಾಸಾಯನಿಕ ಕ್ರಿಯೆಯನ್ನು ಉಧ್ವಸ್ತಗೊಳಿಸುವ ಮೂಲಕ ರೋಗಾಣುವನ್ನು ನಾಶಪಡಿಸುತ್ತವೆ.

ವೈರಸ್ಸುಗಳ ಗಾತ್ರ ಬ್ಯಾಕ್ಟೀರಿಯಕ್ಕಿಂತ ಸೂಕ್ಷ್ಮವಾದದ್ದು. ಇವು ಮಾಡುವ ಉಪಟಳ ಅಷ್ಟಿಷ್ಟಲ್ಲ. ಮುಖದ ತುಂಬಾ ಗುಳಿಬಿದ್ದ ಕೆಲವರನ್ನು ನೀವು ನೋಡಿಲ್ಲವೆ? ಸಿಡುಬಿನಿಂದ ಹೀಗಾದದ್ದು. ಈ ಸಿಡುಬನ್ನುಂಟು ಮಾಡುವುದು ಒಂದು ಬಗೆಯ ವೈರಸ್ಸು. ಕೆಲವರ್ಷಗಳ ಹಿಂದೆ ಸಿಡುಬನ್ನು ಸಂಪೂರ್ಣವಾಗಿ ನಿರ್ಮೂಲಗೊಳಿಸಲಾಗಿದೆಯೆಂದು ಭಾವಿಸಲಾಗಿತ್ತು. ಆದರೆ ಆ ರೋಗ ಇತ್ತೀಚೆಗೆ ಮತ್ತೆ ತಲೆಯೆತ್ತುತ್ತಿದೆ. ನಮಗೆ ನೆಗಡಿಯನ್ನುಂಟುಮಾಡುವುದೂ ಕೆಲ ಬಗೆಯ ವೈರಸ್ಸುಗಳೇ.

ಇವು ದೇಹದ ಜೀವಕಣಗಳಲ್ಲಿ ಸೇರಿಕೊಂಡು ಬೆಳೆಯುವುದರಿಂದ ಜೀವಕಣಕ್ಕೆ ಧಕ್ಕೆಯನ್ನುಂಟುಮಾಡದೆ ವೈರಸ್ಸುಗಳನ್ನಷ್ಟೇ ನಾಶಪಡಿಸುವಂತಹ ಔಷಧಗಳನ್ನು ಕಂಡುಹಿಡಿಯುವುದು ಕಷ್ಟ. ಆದ್ದರಿಂದ ವೈರಸ್ಸುಗಳು ಶರೀರಕ್ಕೆ ದಾಳಿಯಿಟ್ಟಾಗ ಅವು ಪುನರುತ್ಪಾದನೆಗೊಳ್ಳಲು ಅನುವಾಗುವ ರಾಸಾಯನಿಕಗಳು ತಯಾರಾಗದ ಹಾಗೆ ಕೆಲವು ಔಷಧಗಳನ್ನು ಡಾಕ್ಟರರು ವಿಧಿಸುತ್ತಾರೆ. ವೈರಸ್ಸುಗಳ ಸಂಖ್ಯೆ ವೃದ್ಧಿಸುವುದಿಲ್ಲವಾದ್ದರಿಂದ ಹಾಗೂ ಶರೀರದ ರಕ್ಷಣಾವ್ಯವಸ್ಥೆ ತಂತಾನೆ ಬಲಗೊಳ್ಳುವುದರಿಂದ ಬಂದ ರೋಗ ಹೊರಟುಹೋಗುತ್ತದೆ.

ಏಡ್ಸ್ ಬರುವುದೂ ಒಂದು ಬಗೆಯ ವೈರಸ್ಸಿನಿಂದಲೇ. ಶರೀರದ ರಕ್ಷಣಾವ್ಯವಸ್ಥೆಯನ್ನೇ ಅಭದ್ರಗೊಳಿಸುವ ಈ ವೈರಸ್ಸಿನದು ಬಲು ಗಟ್ಟಿ ಜೀವ. ಇಂಥಾ ಗಟ್ಟಿ ಜೀವವನ್ನು ಪಳಗಿಸುವ ಔಷಧವನ್ನು ಕಂಡು ಹಿಡಿಯಲು ವಿಜ್ಞಾನಿಗಳಿಗೆ ಅನೇಕ ವರ್ಷಗಳೇ ಬೇಕಾಗಬಹುದು.

ಅಂದಹಾಗೆ ಗಾಯವಾದಾಗ ಹಿರಿಯರು ಗಾಯವಾದ ಭಾಗಕ್ಕೆ ಮುಲಾಮನ್ನು ಸವರುತ್ತಾರೆ. ಮುಖಕ್ಷೌರ ಮಾಡಿಕೊಂಡ ಬಳಿಕ ಆಫ್ಟರ್ ಷೇವ್- ಲೋಷನ್ನನ್ನು ಸವರಿಕೊಳ್ಳುತ್ತಾರೆ. ಏಕೆ ಗೊತ್ತೆ? ಇವೆಲ್ಲ ಬ್ಯಾಕ್ಟೀರಿಯಗಳನ್ನು ನಾಶಗೊಳಿಸುವ ಪೂತಿನಾಶಕಗಳನ್ನು ಒಳಗೊಂಡಿರುತ್ತವೆಯಾದ್ದರಿಂದ. ಬ್ಯಾಕ್ಟೀರಿಯಗಳ ಜೀವಕಣ ಪ್ರೋಟೀನಿನಿಂದಾದದ್ದು. ಈ ಪ್ರೊಟೀನನ್ನು ವಿಘಟನೆಗೊಳಿಸುವ ಮೂಲಕ ಬ್ಯಾಕ್ಟೀರಿಯವನ್ನು ನಾಶಪಡಿಸುವ ಗುಣ ಮದ್ಯಾರ್ಕಕ್ಕಿರುವುದರಿಂದ ಚುಚ್ಚುಮದ್ದು ನೀಡುವ ಮೊದಲು ಡಾಕ್ಟರರು ಆ ಭಾಗಕ್ಕೆ ಅದನ್ನು ಸವರುತ್ತಾರೆ. ಇದರಿಂದಾಗಿ ರೋಗಾಣುಗಳು ನಾಶವಾಗುತ್ತವೆ. ಅಲ್ಲದೆ ನೋವಿನ ಸಂವೇದನೆಯೂ ಕಡಿಮೆಯಾಗುತ್ತದೆ.

● 'ಎಂ. ದೀಪಾ'

---

ಹೆಚ್ಚು ಸಲ ಊಟ ಮಾಡದಂತೆ ಮನೆಯಲ್ಲಿ ಯಾರಾದರೂ ನಿಮ್ಮನ್ನು ನಿರ್ಬಂಧಿಸುತ್ತಾರೆಯೆ? ಇಲ್ಲ, ಅಲ್ಲವೆ? ಆದರೆ ಇಂಗ್ಲೆಂಡಿನಲ್ಲಿ ಅಂಥ ಕಾನೂನೇ ಇತ್ತೆಂದರೆ ನಂಬುತ್ತೀರಾ? ದಿನಕ್ಕೆ ಮೂರಕ್ಕಿಂತ ಹೆಚ್ಚು ಸಲ ಊಟ ಮಾಡುವುದನ್ನು ನಿಷೇಧಿಸುವ ಕಾನೂನು ಇಂಗ್ಲೆಂಡಿನಲ್ಲಿ ಹದಿನಾಲ್ಕನೆಯ ಶತಮಾನದಿಂದ ಹದಿನಾರನೆಯ ಶತಮಾನದ ವರೆಗೂ ಜಾರಿಯಲ್ಲಿತ್ತು.

# ಮಾನವ ದೇಹದಲ್ಲಿ....

- ಅತಿ ದೊಡ್ಡ ಮೂಳೆ- ತೊಡೆ ಮೂಳೆ
- ಅತಿ ಸಣ್ಣ ಮೂಳೆ- ಸ್ಟೇಪೀಸ್ (ಮಧ್ಯ ಕಿವಿಯಲ್ಲಿರುವ ರಿಕಾಪು ಮೂಳೆ)
- ಅತಿ ದೊಡ್ಡ ಗ್ರಂಥಿ- ಯಕೃತ್ತು.
- ಕತ್ತಿನ ಬುಡದ ಬಳಿಯಿರುವ, ಎಳೆಯ ವಯಸ್ಸಿನಲ್ಲಿ ದೊಡ್ಡದಾಗಿದ್ದು, ವಯಸ್ಸಾದಾಗ ಅತಿ ಚಿಕ್ಕದಾಗುವ ನಿರ್ನಾಳ ಗ್ರಂಥಿ- ಥೈಮಸ್ ಗ್ರಂಥಿ.
- ಎಲುವುಗಳ ಸಂಖ್ಯೆ- ೨೦೬.
- ಸ್ನಾಯುಗಳ ಸಂಖ್ಯೆ- ೬೩೯.
- ನಗಲು ಕೆಲಸ ಮಾಡಬೇಕಾದ ಸ್ನಾಯುಗಳ ಸಂಖ್ಯೆ- ೨೪.
- ಮುಖ ಗಂಟಿಕ್ಕುವಾಗ ಕೆಲಸ ಮಾಡುವ ಸ್ನಾಯುಗಳ ಸಂಖ್ಯೆ- ೭೨.
- ತಲೆಬುರುಡೆಯಲ್ಲಿರುವ ಮೂಳೆಗಳ ಸಂಖ್ಯೆ- ೨೨.
- ರುಚಿಯನ್ನು ಗುರುತಿಸಲು ನೆರವಾಗುವ ನಾಲಗೆಯಲ್ಲಿರುವ ರುಚಿಮೊಗ್ಗುಗಳ ಸಂಖ್ಯೆ- ೧೦,೦೦೦.
- ಹೃದಯದ ಸರಾಸರಿ ತೂಕ- ೩೦೦ ಗ್ರಾಂ.
- ಮಿದುಳಿನ ಸರಾಸರಿ ತೂಕ- ೧.೪ ಕೆ.ಜಿ.
- ಯಕೃತ್ತಿನ ಸರಾಸರಿ ತೂಕ- ೧.೫ ಕೆ.ಜಿ.
- ಮೂತ್ರಪಿಂಡವೊಂದರ ತೂಕ- ಸುಮಾರು ೧೫೦ ಗ್ರಾಂ.
- ಬೆನ್ನೆಲುಬು ಅಥವಾ ಬೆನ್ನುಹುರಿಯಲ್ಲಿರುವ ಎಲುವುಗಳ ಸಂಖ್ಯೆ- ೩೩.
- ಎದೆಯಲ್ಲಿನ ಪಕ್ಕೆಲುಬುಗಳ ಸಂಖ್ಯೆ- ೧೨ ಜೊತೆ.
- ಆರೋಗ್ಯವಂತ ಮಾನವ ದೇಹದ ಉಷ್ಣಾಂಶ- ೩೭ ಸೆಂಟಿಗ್ರೇಡ್ ಅಥವಾ ೯೮.೪ ಫ್ಯಾರೆನ್‌ಹೀಟ್.
- ಕೂದಲಿಗೆ ಚರ್ಮಕ್ಕೆ ಬಣ್ಣ ಕೊಡುವ ವರ್ಣದ್ರವ್ಯ- ಮೆಲನಿನ್.
- ಸಾಮಾನ್ಯ ರಕ್ತದೊತ್ತಡ- ೧೨೦-೮೦ ಪಾದರಸದಷ್ಟು.
- ಬಿಳಿರಕ್ತಕಣಗಳ ಸಂಖ್ಯೆ ಜಾಸ್ತಿಯಾದಾಗ ಬರುವ ರೋಗ- ಲ್ಯುಕೇಮಿಯಾ.
- ರಕ್ತದಲ್ಲಿ ಕೆಂಪು ರಕ್ತಕಣಗಳು ಅಥವಾ ಹಿಮೊಗ್ಲೋಬಿನ್‌ನ ಪ್ರಮಾಣ ಕಡಿಮೆಯಾದರೆ ಬರುವ ರೋಗ- ಅನೀಮಿಯಾ.
- ಶ್ವಾಸನಾಳದ ಸರಾಸರಿ ಉದ್ದ- ೧೨ ಸೆಂಟಿಮೀಟರ್.
- ಅನ್ನನಾಳದ ಸರಾಸರಿ ಉದ್ದ- ೨೫ ಸೆಂಟಿಮೀಟರ್.
- ಎರಡನೆ ಅತಿ ದೊಡ್ಡ ಪಾಚಕ ಗ್ರಂಥಿ- ಮೇದೋಜೀರಕ.
- ನವಜಾತ ಶಿಶುವಿನ ಮಿದುಳಿನ ತೂಕ- ೩೭೦-೪೦೦ ಗ್ರಾಮ್.

● ಸಂಗ್ರಹ: **ಬಿ.ಕೆ. ವರದರಾಜ**

# ಜ್ಞಾನನಿಧಿ

## ಏಳರಲ್ಲೆ ಮುಪ್ಪನ್ನು ಕಂಡ

• ಎಂ.ಆರ್.ಎಸ್.

೧೮೨೯ರ ಮಾರ್ಚ್ ಹದಿನಾಲ್ಕ ರಂದು ಇಂಗ್ಲೆಂಡಿನ ಸ್ಟಾಫೋರ್ಡ್‌ಷೈರಿನಲ್ಲಿ ಹುಟ್ಟಿದ ಚಾರ್ಲ್ಸ್ ಚಾರ್ಲ್‌ವರ್ತನ ಕಥೆಯೇ ವಿಚಿತ್ರ.

ಹುಟ್ಟಿದಂದಿನಿಂದಲೇ ಗಾತ್ರವೊಂದನ್ನು ಹೊರತುಪಡಿಸಿ ಉಳಿದೆಲ್ಲ ರೀತಿಯಲ್ಲಿಯೂ ಆತ ಭರದಿಂದ ಬೆಳೆಯತೊಡಗಿದ. ನಾಲ್ಕ ನೆಯ ವಯಸ್ಸಿನಲ್ಲೆ ಆತ ಹದಿಹರೆಯದ ತರುಣನಂತಾದ. ಆಗಿನ ಕಾಲದ ಪದ್ಧತಿ ಯಂತೆ ನೀಳವಾದ ಗಡ್ಡವನ್ನೂ ಬಿಟ್ಟ: ಆದರೆ ಈ ತಾರುಣ್ಯ ಬಹಳ ಕಾಲ ಉಳಿಯಲಿಲ್ಲ. ಮುಂದೊಂದು ವರ್ಷದಲ್ಲೆ ಗಡ್ಡ, ಮೀಸೆ, ತಲೆಗೂದಲೆಲ್ಲ ಬಿಳಿಬಣ್ಣಕ್ಕೆ ತಿರುಗಿದವು. ಚರ್ಮ ಸುಕ್ಕುಗಟ್ಟಿ ಮೈತುಂಬಾ ನಿರಿಗೆಗಳು ಬಿದ್ದವು. ಮುಖ ಬಿಳಿಚಿಕೊಂಡಿತು. ದೇಹ ಸೊರಗಿತು. ಊರುಗೋಲಿನ ಆಸರೆಯಿಲ್ಲದೆ ನಡೆಯಲಿಕ್ಕೂ ಬಾರದಂತಾಯಿತು. ಆರನೆಯ ವಯಸ್ಸಿಗೆ ಬರುವಷ್ಟರಲ್ಲೆ ಸೊಂಟ ಬಗ್ಗಿತ್ತು. ಶರೀರ ಕಂಪಿಸುತ್ತಿತ್ತು. ಒಂದೊಂದು ಹೆಜ್ಜೆಯಿ ಡಲೂ ಕಷ್ಟವಾಗುತ್ತಿತ್ತು. ಕಣ್ಣೂ ಮಂಜಾಗಿ ಸರಿಯಾಗಿ ಕಾಣುತ್ತಿರಲಿಲ್ಲ. ಏಳನೆಯ ವಯ ಸ್ಸಿನಲ್ಲಿ ಚಾರ್ಲ್‌ವರ್ತ್ ಹೃದಯಾಘಾತದಿಂದ ತೀರಿಕೊಂಡ. ವಾಸ್ತವವಾಗಿ ಏಳು ವರ್ಷಗ ಳಲ್ಲೆ ಆತ ಎಪ್ಪತ್ತರ ಅನುಭವವನ್ನು ಪಡೆ ದಿದ್ದ.

ಹೌದು. ಕಾಲರಾಯನ ಕುಟಿಲತನವನ್ನು ಬಲ್ಲವರಾರು ?

---

## ಭಿನ್ನತೆ ಏನು?

ಕೆಳಗೆ ಪ್ರತಿ ಸಾಲಿನಲ್ಲಿಯೂ ಐದೈದು ಪದಗಹನ್ನು ನೀಡಲಾಗಿದೆ. ಈ ಪೈಕಿ ನಾಲ್ಕು ಸಮಾನವಾಗಿವೆ. ಒಂದು ಮಾತ್ರ ಪ್ರತ್ಯೇಕ ವಾಗಿ ತೋರುತ್ತದೆ. ಯಾವುದು ಆ ಪದ ? ಅದರ ಪ್ರತ್ಯೇಕತೆ ಏನು ? ಗುರುತಿಸಿ ಹೇಳು ವಿರಾ ?

೧. ಜನವರಿ, ಮಾರ್ಚ್, ಸಪ್ಟಂಬರ್, ಅಕ್ಟೋಬರ್, ಡಿಸೆಂಬರ್.
೨. ಚಂದ್ರಗುಪ್ತ, ಸಮುದ್ರಗುಪ್ತ, ಹರ್ಷವರ್ಧನ, ಚಾಣಕ್ಯ, ವಿಕ್ರಮಾದಿತ್ಯ.
೩. ಗ್ಯಾಲನ್, ಪಿಂಟ್, ಲೀಟರ್, ಡ್ರಾಮ್, ಗ್ರಾಮ್.
೪. ಮೊಸರು, ಬೆಣ್ಣೆ, ಕೆನೆ, ಎಣ್ಣೆ, ಪನೀರ್.
೫. ಟೊಪ್ಪಿಗೆ, ಪರದೆ, ಪಗಡಿ, ಹೆಲ್ಮೆಟ್, ರುಮಾಲು.
೬. ಬ್ಯಾಡ್ಮಿಂಟನ್, ಕ್ರಿಕೆಟ್, ಹಾಕಿ, ಗೋಲ್ಫ್, ಟೆನ್ನಿಸ್.
೭. ಸ್ಪೇನ್, ಪೋಲಂಡ್, ಕೋರಿಯಾ, ಇಟಲಿ, ಗ್ರೀಸ್.
೮. ಡೆಲ್ಟಾ, ಗಾಮಾ, ಆಲ್ಫಾ, ಮೀಟಾ, ಥೀಟಾ.
೯. ತಿಮಿಂಗಿಲು, ಆಮೆ, ಶಾರ್ಕ್, ಡಾಲ್ಫಿನ್, ಹೆರಿಂಗ್.
೧೦. ಅರಬ್, ಸಹಾರಾ, ಗೋಬಿ, ಥಾರ್, ಸುಂದರಬನ್.

(ಉತ್ತರಗಳು ೪೮ನೆ ಪುಟದಲ್ಲಿ)



# ಕೊನೆಗೂ ಪುಳ್ಳಾಗಲೇ ಇಲ್ಲ!

೧೭೭೯ರಲ್ಲೊಂದು ರಾತ್ರಿ. ಇನ್ನು ಮೂರನೆಯ ದಿನ ಸರಿಯಾಗಿ ಮಧ್ಯರಾತ್ರಿಗೆ ಸಾಯುವುದಾಗಿ ಲಾರ್ಡ್ ಥಾಮಸ್ ಲಿಟಲ್‌ಟನ್ನರಿಗೆ ಕನಸು ಬಿತ್ತು. ಏನೋ ಕೆಟ್ಟ ಕನಸು ಎಂದು ಅವರು ಕಣ್ಣುಮುಚ್ಚುವುದೇ ತಡ, ಮತ್ತೆ ಅದೇ ಕನಸು. ಅದೇ ರಾತ್ರಿ ಮೂರು-ನಾಲ್ಕು ಸಲ ಇದೇ ಕನಸು ಪುನರಾವರ್ತಿಸಿದಾಗ ಲಿಟಲ್‌ಟನ್ನರಿಗೆ ದಿಗಿಲಾಯಿತು.

ಮೂರನೆಯ ದಿನ ಸಮೀಪಿಸಿದ ಹಾಗೆ ಮತ್ತಷ್ಟು ದಿಗಿಲು. ದುಗುಡವನ್ನು ಕಡಿಮೆ ಮಾಡಿಕೊಳ್ಳಲು ಆ ದಿನ ಮಿತ್ರರನ್ನೆಲ್ಲ ಕರೆದು ಭೋಜನಕೂಟವನ್ನೇರ್ಪಡಿಸಿದರು. ಆದರೂ ದುಗುಡ ಕಡಿಮೆಯಾಗಲಿಲ್ಲ. "ಹೇಳಿಕೇಳಿ ಕನಸು, ಅದನ್ನೇಕೆ ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳುತ್ತೀ ?" ಎಂದು ಸ್ನೇಹಿತರು ಸಮಾಧಾನಪಡಿಸಲೆತ್ನಿಸಿದರು. ಪ್ರಯೋಜನವಾಗಲಿಲ್ಲ.

ಮಧ್ಯರಾತ್ರಿ ಸಮೀಪಿಸುತ್ತಿದ್ದ ಹಾಗೆ ಲಿಟಲ್‌ಟನ್ನರಿಗೆ ಇನ್ನಷ್ಟು ದಿಗಿಲು. ದುಗುಡ ಸ್ವಲ್ಪವಾದರೂ ಕಡಿಮೆಯಾದೀತೆಂದು ಮಂಚದ ಮೇಲೆ ಅಡ್ಡಾದರು. ಏಕಾಏಕಿ ಗೋಡೆಯ ಮೇಲಿದ್ದ ಗಡಿಯಾರದತ್ತ ಅವರು ಗಮನ ಹೋಯಿತು. ಹೌದು. ಹನ್ನೆರಡಕ್ಕೆ ಇನ್ನು ಐದೇ ನಿಮಿಷ ! ಆಮೇಲೆ ತನ್ನ ಪಾಲಿಗೆ ಎಲ್ಲವೂ ಮುಗಿದಂತೆಯೇ ಅಂದುಕೊಂಡರು

ಲಿಟಲ್‌ಟನ್. ಆ ಐದು ನಿಮಿಷಗಳೂ ಸರಿದುಹೋದವು. ಊಂಹುಂ. ಏನೂ ಆಗಲಿಲ್ಲ.

ಅದೇ ವೇಳೆಗೆ ಕುತೂಹಲದಿಂದ ಭೋಜನಕೂಟದಲ್ಲಿ ಭಾಗವಹಿಸಿದ್ದ ಸ್ನೇಹಿತರು ಬಂದರು. ಲಿಟಲ್‌ಟನ್ ಗಟ್ಟಿಮುಟ್ಟಾಗಿಯೆ ಇದ್ದದ್ದನ್ನು ನೋಡಿ ಅವರಿಗೂ ಸಂತೋಷ. ಲಿಟಲ್‌ಟನ್ ಅಂತೂ "ಮೃತ್ಯುವನ್ನು ಗೆದ್ದುಬಿಟ್ಟೆ!" ಎಂದು ಆನಂದತುಂದಿಲರಾಗಿ ಕೋಣೆಯ ತುಂಬಾ ಹಾರಾಡಿದರು. ಸ್ನೇಹಿತರೆಲ್ಲರೂ ಮತ್ತೆ ಇಸ್ಪೀಟ್ ಆಡಲು ಹೊರಟುಹೋದರು.

ಸುಮಾರು ಇನ್ನರ್ಧ ಗಂಟೆ ಸರಿಯಿತು. ಲಿಟಲ್‌ಟನ್ನರ ಪರಿಚಾರಕ ಅವರ ಮಲಗುವ ಕೋಣೆಗೆ ಹೋದಾಗ ಪರಿಸ್ಥಿತಿ ತೀರಾ ಬದಲಾಗಿತ್ತು. ಲಿಟಲ್‌ಟನ್ ಏದುಸಿರು ಬಿಡುತ್ತಿದ್ದರು. ಮುಖ ವಿವರ್ಣವಾಗಿತ್ತು. ಕಣ್ಣುಗುಡ್ಡೆಗಳು ಕಿತ್ತು ಹೊರಬರುವ ಹಾಗೆ ಆಗಿದ್ದವು. ಪರಿಚಾರಕ ಗಾಬರಿಯಿಂದ ಕೂಗಿದ. ಸ್ನೇಹಿತರೆಲ್ಲ ಆತುರಾತುರವಾಗಿ ಓಡಿ ಬಂದರು. ವೈದ್ಯರನ್ನು ಕರೆಸಿ ಚಿಕಿತ್ಸೆ ಕೊಡಿಸಿದರೂ ಪ್ರಯೋಜನವಾಗಲಿಲ್ಲ. ಎಷ್ಟು ಪ್ರಯತ್ನಿಸಿದರೂ ಡಾಕ್ಟರರಿಗೆ ಲಿಟಲ್‌ಟನ್ನರನ್ನು ಉಳಿಸಿಕೊಳ್ಳಲಾಗಲಿಲ್ಲ. ಅವರ ಪ್ರಾಣೋತ್ಕ್ರಮಣವಾದಾಗ ಗೋಡೆಯ ಮೇಲಿನ ಗಡಿಯಾರ ಹನ್ನೆರಡೂವರೆಯಾಗಿದ್ದನ್ನುತೋರಿಸುತ್ತಿತ್ತು.

"ಹಾಗಾದರೆ ಕನಸು ಸರಿಯಾಗಿಯೆ ಇತ್ತು. ದೇವರು ಇನ್ನರ್ಧ ಗಂಟೆಯನ್ನು ದಯಪಾಲಿಸಿದ್ದರಿಂದ ಆತ ಹನ್ನೆರಡೂವರೆಗೆ ತೀರಿಕೊಂಡ ಎಂದೇ ನಾವು ಭಾವಿಸಬೇಕು" ಅಂದ ಸ್ನೇಹಿತನೊಬ್ಬ.

"ದೇವರು ಅಷ್ಟು ಕರುಣಾಮಯನಾಗಿರಲಿಲ್ಲ ರಾಯರೆ, ನಿಜ ಹೇಳಬೇಕೆಂದರೆ ಒಡೆಯರ ದುಗುಡವನ್ನು ನೋಡಲಾಗದೆ .ನಾನೇ ಅವರಿಗೆ ತಿಳಿಯದ ಹಾಗೆ ಗಡಿಯಾರದ ಮುಳ್ಳನ್ನು ಅರ್ಧ ಗಂಟೆಯಷ್ಟು ಹಿಂದೆ ತಿರುಗಿಸಿದ್ದೆ" ಎಂದ ಲಿಟಲ್‌ಟನ್ನರ ಪರಿಚಾರಕ.

● 'ಎಂ.ಆರ್.ಎಸ್. ರಾವ್'

# ಜ್ಞಾನನಿಧಿ

(೪೧ನೇ ಪುಟದಿಂದ)

ಅರವತ್ತೈದು ಭಾಗ ಜಲಮಯ. ಆನೆಯ ಇಡಿ ದೇಹದಲ್ಲಿ ದ್ರವದ ಪ್ರಮಾಣ ಇದಕ್ಕಿಂತ ಶೇಕಡಾ ಐದರಷ್ಟು ಹೆಚ್ಚು. ಅಂದಹಾಗೆ ಬಟಾಟೆ ಗಟ್ಟಿಯಾಗಿದೆಯೆಂದು ನೀವೆಲ್ಲ ಭಾವಿಸಿದ್ದಿರಲ್ಲವೆ? ಆದರೆ ಬಟಾಟೆಯಲ್ಲಿ ಶೇಕಡಾ ಎಂಬತ್ತರಷ್ಟು ನೀರೇ ಇದೆ. ಟೊಮ್ಯಾಟೋವಿನಲ್ಲಿ ನೀರಿನ ಪ್ರಮಾಣ ಶೇಕಡಾ ತೊಂಬತ್ತೈದರಷ್ಟು.

●

ಪೃಥ್ವಿಯ ಮೇಲಿನ ನೀರು ಎಂದಾದರೂ ತೀರಿಹೋಗುವುದೆ? ಉಪಯೋಗಿಸಿದ ನೀರನ್ನೇ ಮತ್ತೆ ಮತ್ತೆ ಉಪಯೋಗಿಸಲಾಗುವುದರಿಂದ ಹಾಗೆ ಆಗಲು ಸಾಧ್ಯವೇ ಇಲ್ಲ. ನೀವು ಕುಡಿಯುವ ನೀರು ಸಾವಿರಾರು ವರ್ಷಗಳಿಂದ ಒಂದಿಲ್ಲ ಒಂದು ರೀತಿಯಲ್ಲಿ ಬಳಸಲ್ಪಡುತ್ತಾ ಬಂದಿರುವುದು ಎಂದಾದರೂ ನಿಮ್ಮ ಗಮನಕ್ಕೆ ಬಂದಿದೆಯ?

● 'ಕಲ್ಲಪ್ಪಾಚಾರ್ಯ'

## 'ಲವಣಧನ' ಅಂದರೇನು?

ಉಪ್ಪಿಗೂ ಸಂಬಳಕ್ಕೂ ಏನು ಸಂಬಂಧ ಅನ್ನುತ್ತೀರಾ? ನಮ್ಮಲ್ಲಿಲ್ಲದಿದ್ದರೂ ಪಾಶ್ಚಾತ್ಯರಲ್ಲಿ ಇದಕ್ಕೆ ಖಂಡಿತ ಸಂಬಂಧ ಉಂಟು. ಹಿಂದೆ ರೋಮನ್ನರ ಕಾಲದಲ್ಲಿ ಕೆಲಸಗಾರರಿಗೆ ಸಂಬಳದ ಒಂದು ಭಾಗವನ್ನು ಉಪ್ಪಿನ ರೂಪದಲ್ಲಿ ಕೊಡಲಾಗುತ್ತಿತ್ತು. ಲ್ಯಾಟಿನ್ನಿನಲ್ಲಿ ಸಾಲ್ ಎಂದರೆ ಉಪ್ಪು. ಸ್ಯಾಲರಿಯಮ್ ಎಂದರೆ ಲವಣಧನ. ಇಂಗ್ಲಿಷಿನ ಸ್ಯಾಲರಿ ಈ ಸ್ಯಾಲರಿಯಮ್ಮಿನಿಂದಲೇ ಬಂದದ್ದು.

# ಸಂಖ್ಯಾ ಪ್ರಪಂಚ

## ಮೂವತ್ತೇಳರ ವೈಶಿಷ್ಟ್ಯ

೩೭ x ೩ = ೧೧೧, ೩೭ x ೬ = ೨೨೨,
೩೭x೯ = ೩೩೩, ೩೭x೧೨ = ೪೪೪,
೩೭x೧೫ = ೫೫೫, ೩೭x೧೮ = ೬೬೬,
೩೭x೨೧ = ೭೭೭, ೩೭x೨೪ = ೮೮೮.
೩೭ x ೨೭ = ೯೯೯.

---

## ದೊಡ್ಡ ಅಂಕಿ

ಶ್ರೀಲಂಕಾದ ಭಾಷೆಯಲ್ಲಿ ಒಂದು ಅತಿದೊಡ್ಡ ಅಂಕಿ ಇದೆ. ಇದಕ್ಕೆ ಸಿಂಹಳಿ ಭಾಷೆಯಲ್ಲಿ 'ಅಸ್ಸಾಂಕ' ಎನ್ನುತ್ತಾರೆ. ಇದನ್ನು ಬರೆಯಲು ಸ್ವಲ್ಪ ತಾಳ್ಮೆ ಬೇಕು. ಲೆಕ್ಕ ತಪ್ಪಿದರೆ ಗೋವಿಂದ !

೧,೦೦೦,೦೦೦,೦೦೦,೦೦೦,೦೦೦,೦೦೦,೦೦೦,
೦೦೦,೦೦೦,೦೦೦,೦೦೦,೦೦೦,೦೦೦,೦೦೦,೦೦೦,
೦೦೦,೦೦೦,೦೦೦,೦೦೦,೦೦೦,೦೦೦.

ಅಂದರೆ ೧ರ ಮುಂದೆ ೬೩ ಸೊನ್ನೆ. ಗೂಗೊಲ್‌ಪ್ಲೆಕ್ಸ್‌ಅನ್ನು ಹೊರತುಪಡಿಸಿ ಜಗತ್ತಿನ ಯಾವ ಭಾಷೆಯಲ್ಲೂ ಇಷ್ಟು ದೊಡ್ಡ ಅಂಕಿ ಬೇರೆ ಇದ್ದಂತಿಲ್ಲ.

● ಸುಧೀಂದ್ರ ಎಂ.ವಿ.

## ಉತ್ತರಗಳು:

(೪೫ನೆ ಪುಟದಿಂದ)

೧. ಸಪ್ಟಂಬರ್. (ಉಳಿದ ತಿಂಗಳುಗಳೆಲ್ಲ ೩೧ ದಿನಗಳವು.)
೨. ಚಾಣಕ್ಯ. (ಉಳಿದೆಲ್ಲರೂ ರಾಜರು.)
೩. ಗ್ರಾಮ್. (ಉಳಿದವೆಲ್ಲ ದ್ರವಮಾಪಕಗಳು.)
೪. ಎಣ್ಣೆ. (ಉಳಿದವೆಲ್ಲ ದುಗ್ಧಜನ್ಯ ವಸ್ತುಗಳು.)
೫. ಪರದೆ. (ಉಳಿದವೆಲ್ಲ ತಲೆಗೆ ಧರಿಸುವಂಥವು.)
೬. ಬ್ಯಾಡ್ಮಿಂಟನ್. (ಉಳಿದವೆಲ್ಲ ಚೆಂಡಿನಿಂದ ಆಡುವಂಥವು.)
೭. ಕೋರಿಯಾ. (ಉಳಿದವೆಲ್ಲ ಯುರೋಪಿನ ದೇಶಗಳು.)
೮. ಮೀಟಾ. (ಉಳಿದವೆಲ್ಲ ಗ್ರೀಕ್ ಅಕ್ಷರಗಳು. ಗಣಿತದಲ್ಲಿ ಬಳಸುವಂಥವು.)
೯. ಆಮೆ. (ಉಳಿದವೆಲ್ಲ ಮತ್ಸ್ಯ ಸಂಕುಲಕ್ಕೆ ಸೇರಿದಂಥವು.)
೧೦. ಸುಂದರಬನ್. (ಉಳಿದವೆಲ್ಲ ಮರುಭೂಮಿಗಳು.)

## ನಿದ್ರೆಯಲ್ಲೂ ಎಚ್ಚರ!

ವಿಶ್ವವಿಖ್ಯಾತ ಭೌತ ವಿಜ್ಞಾನಿಗಳೂ ನೊಬೆಲ್ ಪ್ರಶಸ್ತಿ ವಿಜೇತರೂ ಆದ ನೀಲ್ ಬೋರ್ ಅವರು ನೀಡುತ್ತಿದ್ದ ಉಪನ್ಯಾಸವೊಂದರಲ್ಲಿ ಭಾರತದ ವಿಜ್ಞಾನಿ ಪ್ರೊ. ಸತ್ಯೇಂದ್ರನಾಥ ಬ್ಯಾನರ್ಜಿ ಅವರೂ ಆಹ್ವಾನಿತರಾಗಿದ್ದರು. ಉಪನ್ಯಾಸದ ಅಂಗವಾಗಿ ಬೋರ್ ಅವರು ಸಮೀಕರಣವೊಂದನ್ನು ವಿವರಿಸುತ್ತಿದ್ದಾಗ ಏಕೋ ತಡೆಯಾಯಿತು. ಆಗ ಅವರು ಕಣ್ಣುಮುಚ್ಚಿ ನಿದ್ರಾಭಂಗಿಯಲ್ಲಿದ್ದ ಪ್ರೊ. ಬ್ಯಾನರ್ಜಿ ಅವರನ್ನು, "ದಯವಿಟ್ಟು ಸ್ವಲ್ಪ ಸಹಾಯ ಮಾಡುವಿರಾ?" ಎಂದು ಕೇಳಿದಾಗ, ಪ್ರೊ. ಬ್ಯಾನರ್ಜಿ ಅವರು ಎದ್ದು ಸರಸರನೆ ಸಮೀಕರಣವನ್ನು ಸಲೀಸಾಗಿ ಬಿಡಿಸಿ ತಮ್ಮ ಸ್ಥಳದಲ್ಲಿ ಕುಳಿತು ಪುನಃ ಕಣ್ಣುಗಳನ್ನು ಮುಚ್ಚಿಕೊಂಡು ಆಲೋಚನಾವಶರಾದರಂತೆ.

● ಕೆ. ವೆಂಕಣ್ಣಾಚಾರ್

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತವೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

---

೧. ದೇದೀಪ್ಯಮಾನ
(ಅ) ದೀಪ ಹಿಡಿಯುವ
(ಆ) ಚಂದ್ರ
(ಇ) ಹಣತೆ
(ಈ) ಪ್ರಕಾಶಿಸುವ

೨. ಕಮರು
(ಅ) ಸುಟ್ಟುಹೋಗು
(ಆ) ಇತ್ರಂಡ
(ಇ) ಮುಚ್ಚು
(ಈ) ಸೌಂದರ್ಯ

೩. ಪರಾಙ್ಮುಖ
(ಅ) ಎದುರಾಳಿ
(ಆ) ಬ್ರಹ್ಮ
(ಇ) ಮುಖ ತಿರುಗಿಸಿದ
(ಈ) ಹೊಗಳುಭಟ್ಟ

೪. ವೈಖರಿ
(ಅ) ಮಾತಿನ ಜಾಣ್ಮೆ
(ಆ) ಕಣ್ಣು ಕುಕ್ಕಿಸುವುದು
(ಇ) ಮೋಸ
(ಈ) ಅರ್ಭಟ

೫. ಜರ್ಬು
(ಅ) ಪ್ರತಾಪ
(ಆ) ದರ್ಪದ ಮಾತು
(ಇ) ಮುದುಕಿ
(ಈ) ಎಳೆದಾಟ

೬. ಸಾದೃಶ್ಯ
(ಅ) ಸುಂದರವಾದ ನೋಟ
(ಆ) ಮಾಯವಾಗುವಿಕೆ
(ಇ) ರುಚಿಕರ
(ಈ) ಹೋಲಿಕೆ

೭. ಧಾರ್ಷ್ಟ್ಯ
(ಅ) ದಡ್ಡತನ
(ಆ) ದಪ್ಪ
(ಇ) ದಿಟ್ಟತನ
(ಈ) ಕೋಪ

೮. ಪರಾಯಣ
(ಅ) ಮುಖ್ಯ ಧ್ಯೇಯ
(ಆ) ಸಾವು
(ಇ) ಪತ್ರ
(ಈ) ನಿಶ್ಚಯ

೯. ಪ್ರಸಕ್ತಿ
(ಅ) ಕ್ರೂರ
(ಆ) ಸಂದರ್ಭ
(ಇ) ಆಶ್ಚರ್ಯ
(ಈ) ಹಡೆಯುವುದು

೧೦. ವಿರೋಧಾಭಾಸ
(ಅ) ಶತ್ರುತ್ವ ಪ್ರದರ್ಶನ
(ಆ) ಮಂದಪ್ರಕಾಶ
(ಇ) ಪರಸ್ಪರ ವಿರುದ್ಧವೆಂಬಂತಿರುವ
(ಈ) ಅಡಚಣೆ

೧೧. ಪೊರದಿ
(ಅ) ಕಣಿವೆ
(ಆ) ಪೊಂಡತನ
(ಇ) ಏಬ್ಬ
(ಈ) ಡೊಂಕು

೧೨. ಕೌತುಕ
(ಅ) ತಿಳಿದುಕೊಳ್ಳುವ ಅಪೇಕ್ಷೆ
(ಆ) ಸಂಶಯ
(ಇ) ಉಲ್ಲಾಸ
(ಈ) ವಕ್ರಬುದ್ಧಿ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ದೇದೀಪ್ಯಮಾನ

(ಈ) ಪ್ರಕಾಶಿಸುವ, ಬೆಳಗುವ, ತಳತಳಿಸುವ. ಉದಾ: ದೇದೀಪ್ಯಮಾನವಾದ ರೂಪದಿಂದ ಶಿವನು ಪ್ರತ್ಯಕ್ಷನಾದನು. (ಸಂ.)

೨. ಕಮರು

(ಅ) ಸುಟ್ಟುಹೋಗು, ಸೀದುಹೋಗು, ಸುಟ್ಟು ಕರಿದಾಗು, ಸುಟ್ಟುಹೋಗುವಿಕೆ, ಸುಟ್ಟ ದುರ್ವಾಸನೆ. ಉದಾ: ಅವನ ಮಾತಿನಿಂದ ನನ್ನ ಆಸೆಯ ಕುಡಿ ಕಮರಿಹೋಯಿತು. (ಕ.)

೩. ಪರಾಙ್ಮುಖ

(ಇ) ಮುಖ ಹಿಂತಿರುವಿದ, ಬೆನ್ನು ತೋರಿಸಿದ, (ಹೋರಾಟದಲ್ಲಿ) ಪಲಾಯನ ಮಾಡಿದ, ವಿರೋಧಿಸುವ, ಅಲಕ್ಷಿಸುವ. ಉದಾ: ಅವನ ಮನಸ್ಸು ರಾಜಕಾರಣದಿಂದ ಪರಾಙ್ಮುಖವಾಯಿತು. (ಸಂ.)

೪. ವೈಖರಿ

(ಅ) ಮಾತಿನ ಜಾಣ್ಮೆ, ಒಳ್ಳೆಯ ನಡತೆ ಅಥವಾ ಶೈಲಿ. ಉದಾ: ವಾಗ್ವೈಖರಿಯಿಂದ ಸುರೇಂದ್ರನಾಥ ಬೆನರ್ಜಿಯವರು ಜನರನ್ನು ಮರುಳಾಗಿಸುತ್ತಿದ್ದರು. (ಸಂ.)

೫. ಜಬರ್ು

(ಅ) ದರ್ಪದ ಮಾತು, ಕೂಗಾಟ, ಜರೆಯುವಿಕೆ, ದರ್ಪದ ದನಿ. (=ಜರ್ವು). ಉದಾ: ಅರಸುತನದ ಜಬರ್ು ತೋರಿಸಿದರೆ ಈಗಿನ ಜನ ಕೇಳುವರೆ? (ಕ.)

೬. ಸಾದೃಶ್ಯ

(ಈ) ಹೋಲಿಕೆ, ಸಮಾನ ರೂಪ, ಒಂದರಂತೆ ಇನ್ನೊಂದಿರುವಿಕೆ. ಉದಾ: ಅವನ ಕವಿತೆಗೂ ಇವನ ದಕ್ಕೂ ಸಾದೃಶ್ಯವಿದೆ. (ಸಂ.)

೭. ಧಾರ್ಷ್ಟ್ಯ

(ಇ) ದಿಟ್ಟತನ, ಧೈರ್ಯ, ಸಾಹಸ. ಉದಾ: ಪುರುಷೋತ್ತಮನ ಧಾರ್ಷ್ಟ್ಯದ ಉತ್ತರದಿಂದ ಸಿಕಂದರ ಬೆರಗಾದನು. (ಸಂ.)

೮. ಪರಾಯಣ

(ಅ) (ಯಾವುದನ್ನಾದರೂ) ಮುಖ್ಯ ಧ್ಯೇಯವನ್ನಾಗಿರಿಸಿಕೊಳ್ಳುವುದು, ಒಂದೇ ವಿಷಯದಲ್ಲಿ ನಿಷ್ಠೆ ಅಥವಾ ಆಸಕ್ತಿ. ಉದಾ: ಧರ್ಮಪರಾಯಣ= ಧರ್ಮದಲ್ಲಿ ಅತ್ಯಂತ ಆಸಕ್ತನಾದವ. (ಸಂ.)

೯. ಪ್ರಸಕ್ತಿ

(ಅ) ಸಂದರ್ಭ, ಪ್ರಸಂಗ, ಸಂಬಂಧ, ಆಸಕ್ತಿ, ನಿಷ್ಠೆ, ಪ್ರಯತ್ನ. ನನಗೆ ಅದರೊಡನೆ ಪ್ರಸಕ್ತಿಯಿಲ್ಲ ಅಂದರೆ ಸಂಬಂಧವಿಲ್ಲ, ಈ ಪ್ರಸಕ್ತಿಯಲ್ಲಿ ಅಂದರೆ ಪ್ರಸಂಗದಲ್ಲಿ, ರಾಜಕಾರ್ಯ ಪ್ರಸಕ್ತಿ ಅಂದರೆ ರಾಜಕಾರ್ಯದಲ್ಲಿ ನಿಷ್ಠೆ. (ಸಂ.)

೧೦. ವಿರೋಧಾಭಾಸ

(ಅ) ಒಂದೇ ವಿಷಯದಲ್ಲಿ ಪರಸ್ಪರ ವಿರುದ್ಧವಾಗಿರುವಂತೆ ಕಾಣುವ ಗುಣಗಳ ಇರುವಿಕೆ, ಅಂಥ ಗುಣವುಳ್ಳ ಒಂದು ಅಲಂಕಾರ. ಉದಾ: ಅವನ ಮಾತುಗಳಲ್ಲಿ ಅನೇಕ ವಿರೋಧಾಭಾಸಗಳು ಇವೆ ಅಂದರೆ ಒಂದಕ್ಕೊಂದು ಮೇಳವಿಲ್ಲದ ಹಾಗೆ ಕಾಣುತ್ತವೆ. (ನಿಜವಾಗಿ ಹಾಗಿವೆಯೆಂದಲ್ಲ.) (ಸಂ.)

೧೧. ಮೊರಡಿ

(ಇ) ದಿಬ್ಬ, ಚಿಕ್ಕ ಗುಡ್ಡ, ದಿನ್ನೆ, ಒಂದು ಗಿಡ.

೧೨. ಕೌತುಕ

(ಅ) ತಿಳಿದುಕೊಳ್ಳುವ ಅಪೇಕ್ಷೆ, ಇಚ್ಛೆ, ಉತ್ಸಾಹ, ಕುತೂಹಲ, ಆಶ್ಚರ್ಯದ ಸಂಗತಿ. (ಸಂ.)

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬-೮ ಸರಿಯಿದ್ದರೆ | ... | ಸಾಧಾರಣ |
| ೯-೧೦ ಸರಿಯಿದ್ದರೆ | ... | ಉತ್ತಮ |
| ೧೧-೧೨ ಸರಿಯಿದ್ದರೆ | ... | ಅತ್ಯುತ್ತಮ |

# ಸದೃಶ ಸ್ವರ ಸಂವಾದ ರಹಸ್ಯ

ಹರಟೆ

● ಹರಿದಾಸ ಆಚಾರ್ಯ

ಕರೆಗಂಟೆಯ ಶಬ್ದಕ್ಕೆ ಬಾಗಿಲು ತೆರೆದಾಗ ಸುಮಾರು ಐದೂವರೆ ಅಡಿ ಎತ್ತರದ, ಕನ್ನಡಕ ಧಾರಿ ಮಧ್ಯವಯಸ್ಕ ವ್ಯಕ್ತಿ, "ಹೋಮ್ಸ್ ಅವರನ್ನು ಕಾಣಬೇಕಿತ್ತು," ಎಂದಿತು. ಒಳಗೆ ಬರ ಹೇಳಿ ಕುಳ್ಳಿರಿಸಿದೆ. ತಂಪು ಪಾನೀಯ ಸರಬರಾಜಾದ ನಂತರವೂ ಆ ವ್ಯಕ್ತಿಯ ಮುಖದಲ್ಲಿ ಕೊಂಚವೂ ದಣಿವಾರಿದಂತೆ ಕಾಣಲಿಲ್ಲ. ನಾನೇ ಪರಿಚಯಿಸಿಕೊಂಡು ಮಾತಿಗೆ ಪ್ರಾರಂಭಿಸಿದೆ: "ನನ್ನ ಹೆಸರು ವ್ಯಾಟ್ಸನ್. ನಾನು ಹೋಮ್ಸ್‌ನ ಗೆಳೆಯ. ಹೋಮ್ಸ್ ಮುಖ್ಯ ಕೆಲಸದ ನಿಮಿತ್ತ ಬೇರೆ ಊರಿಗೆ ಹೋಗಿದ್ದಾರೆ. ನೀವು ಬಂದಿರುವ ಉದ್ದೇಶ ತಿಳಿಸಿದರೆ ಹೋಮ್ಸ್ ಬಂದೊಡನೆ ಅವರಿಗೆ ವಿವರಿಸುವೆ." ಎಂದೆ.

"ನನ್ನ ಹೆಸರು ಶಂಕರ್. ಬೆಂಗಳೂರಿನಲ್ಲಿ ರಾಷ್ಟ್ರೀಕೃತ ಬ್ಯಾಂಕೊಂದರಲ್ಲಿ ಉದ್ಯೋಗಿಯಾಗಿದ್ದೇನೆ." ಪರಿಚಯದ ಪೀಠಿಕೆಯ ನಂತರ ಮಾತು ಮುಂದುವರಿಸಿತು ವ್ಯಕ್ತಿ. "ಆದರೆ ನಾನೀಗ ತೀರ ವೈಯಕ್ತಿಕ ವಿಷಯ ಒಂದರ ಬಗ್ಗೆ ತನಿಖೆಗಾಗಿ ಹೋಮ್ಸ್ ಅವರ ನೆರವನ್ನು ಪಡೆಯಬೇಕಾಗಿದೆ."

"ವಿಷಯವನ್ನು ವಿವರವಾಗಿ ತಿಳಿಸಬಹುದೇ?" ಎಂದು ಕೇಳಿದೆ.

"೧೯೯೦ನೆ ಇಸವಿ ಏಪ್ರಿಲ್ ತಿಂಗಳಿನಲ್ಲಿ ನನ್ನ ವಿವಾಹ ಶೃಂಗೇರಿಯ ಸರಸ್ವತಿ ಎನ್ನುವವಳ ಜೊತೆ ನಡೆಯಿತು. ನಮ್ಮದೇನೂ ಪ್ರೇಮವಿವಾಹವಲ್ಲ. ಮಲೆನಾಡು ನೋಡೋಣವೆಂದು ಗೆಳೆಯನ ಜೊತೆ ಶೃಂಗೇರಿಗೆ ಹೋದಾಗ ಅಲ್ಲಿಯ ಏಕೈಕ ಮುಖ್ಯ ಬೀದಿಯಾದ 'ಭಾರತೀ ಬೀದಿ'ಯಲ್ಲಿ ಒಂದೇ ದಿನದಲ್ಲಿ ಮೂರನೆಯ ಸಲ ಮಲೆನಾಡಿನ ಹುಡುಗಿ, ಬೆಡಗಿ ಸರಸ್ವತಿಯ ಸುಂದರ ಮುಖನೋಡಿ ಮಾರು ಹೋದೆ. ಗೆಳೆಯನ ಸಹಕಾರದಿಂದ ಒಂದು ವಾರದೊಳಗೆ ಅಲ್ಲಿಯ ಜೈ ಶಂಕರ ನಿಕೇತನದಲ್ಲಿ ಮದುವೆಯೂ ನಡೆಯಿತು. ಆದರೆ ಮೊದಲ ರಾತ್ರಿಯೇ ನನಗೆ ಆಘಾತ ಕಾದಿತ್ತು," ಎಂದು ಹೇಳಿ ಶಂಕರ್ ಅರೆಕ್ಷಣ ಕಣ್ಣುಮುಚ್ಚಿ ಕುಳಿತರು.

"ಎಂತಹ ಆಘಾತ?" ನಾನು ಕುತೂಹಲದಿಂದ ಕೇಳಿದೆ.

"ದೈಹಿಕ ಸೌಂದರ್ಯದಲ್ಲಿ ಅಪ್ಸರೆಯಂತೆ ಕಾಣುತ್ತ ನನ್ನ ಮನಸ್ಸನ್ನು ಅಪಹರಿಸಿದ್ದರೂ ಅವಳು ಮಾತನಾಡಿದಾಗ ಸ್ವರ ಮಾತ್ರ ಹೊಟ್ಟೆಯ ಮೂಲೆಯೊಂದರಿಂದ ಕಷ್ಟಪಟ್ಟು ಹೊರಬಂದಂತೆ ಕೇಳುತ್ತಿತ್ತು. ಅವಳ ಪ್ರತಿ ಮಾತೂ ಮೂರು ಮೂರುಸಲ ಹೇಳಿದ ಮೇಲೆಯೇ ನನಗೆ ಅರ್ಥ ವಾಗುತ್ತಿದ್ದುದು. ಓಹ್, ಅವಳ ಸ್ವರ! ಭಾರದಿಂದ ನಲುಗುತ್ತ ಗಂಟಲಿನಿಂದ ಹೊರಬಂದಂತೆ ಕೇಳುತ್ತಿತ್ತು. ಅವಳು ಅತ್ಯುತ್ತಮ ಜೋಕ್ ಹೇಳಿದಾಗಲೂ, ಅವಳ ಸ್ವರ ಕೇಳುತ್ತ ಕೇಳುತ್ತ ನನಗೆ ಅತೀವ ದುಃಖವಾಗುತ್ತಿತ್ತು. ಇನ್ನು ಅವಳು ಹಾಡುವಾಗಲಂತೂ...."

"ಸಂಗೀತದ ಸಪ್ತಸ್ವರಗಳ ಪರಿಧಿಯೊಳಗೆ ಆ ಸ್ವರ ಬರುತ್ತಿರಲಿಲ್ಲ, ಅಲ್ಲವೇ? ಮುಂದೆ?"

"ಹೌದು, ಅವಳದ್ದು ಅಷ್ಟಮ ಸ್ವರ. ಅವಳ ಆ ಸ್ವರದ ಸಮಸ್ಯೆಯ ಬಗ್ಗೆ ಬೆಂಗಳೂರಿಗೆ ಹಿಂತಿರುಗಿದ ಮೇಲೆ ಹಲವಾರು ವೈದ್ಯರನ್ನು ಸಂಪರ್ಕಿಸಿದೆ. ಕೊನೆಗೆ ಹಿರಿಯ ವೈದ್ಯರೊಬ್ಬರು ಸಲಹೆ ಕೊಟ್ಟರು "ಜೀವನದಲ್ಲಿ ಹಲವು ವಸ್ತುಗಳನ್ನು ಅವು ಹೇಗಿವೆಯೋ ಹಾಗೆ ಸಂತೋಷದಿಂದ ಅನುಭವಿಸಲು ಕಲಿಯಬೇಕು."

"ಅಷ್ಟಮ ಸ್ವರಕ್ಕೆ ಹೊಂದಿಕೊಂಡು ಆನಂದದಿಂದ ನಿಮ್ಮ ಜೀವನ ನಡೆಸಲು ಪ್ರಾರಂಭಿಸಿದಿರಿ?"

"ಆನಂದದಿಂದಲೋ, ದುಃಖದಿಂದಲೋ ಅಂತೂ ಅವಳ ಸ್ವರಕ್ಕೆ ಕಿವಿಯನ್ನು ಹೊಂದಿಸಿಕೊಂಡು ದಿನಗಳೆಯಲು ಪ್ರಾರಂಭಿಸಿದೆ."

"ಈ ಬಗ್ಗೆ ಹೋಮ್ಸ್ ಏನು ಸಲಹೆ ನೀಡಬಹುದೆಂದು ತಿಳಿಯುವುದಕ್ಕೆ ಬಂದಿರೋ?"

"ಇಲ್ಲ ಇಲ್ಲ, ಪೂರ್ತಿ ಕೇಳಿ. ಮುಂದೆ ಅವಳ ಸ್ವರದ ಬಗ್ಗೆ ತಲೆ ಕೆಡಿಸಿಕೊಳ್ಳುವುದನ್ನು ಬಿಟ್ಟು ದೈನಂದಿನ ಕೆಲಸಗಳಲ್ಲಿ ತೊಡಗಿಕೊಂಡೆ. ಆ ನಡುವೆ ನಮಗೆ ಎರಡು ಮಕ್ಕಳಾದವು- ಒಂದು ಗಂಡು, ಒಂದು ಹೆಣ್ಣು. ಮೊನ್ನೆ ಹಳೆಯ ಗೆಳೆಯನೊಬ್ಬ ನನ್ನನ್ನು ಮಾತನಾಡಿಸಲು ಬಂದವನು ಹೇಳಿದಾಗಲೇ ನಾನು ಗಮನಿಸಿದ್ದು; ಈಗ ನನ್ನವಳ ಸ್ವರ ಪೂರ್ಣ ಸರಿಯಾಗಿದೆ!"

"ಮತ್ತೆ ಸಮಸ್ಯೆ ಏನು?"

"ಸರೂಳ ಸ್ವರದ ಬಗ್ಗೆ ನಾನು ಮದುವೆಯಾದ ಪ್ರಾರಂಭದಲ್ಲಿ ತಲೆ ಕೆಡಿಸಿಕೊಂಡಿದ್ದರಿಂದ ಆಗಲೇ ಅವಳು ಯಾವುದೋ ದೇವರಿಗೆ ತನ್ನ ಸ್ವರ ಸರಿಯಾದರೆ ಹತ್ತು ಗ್ರಾಂ ಚಿನ್ನ ಹಾಕುತ್ತೇನೆ ಎಂದು ಹರಕೆ ಹೊತ್ತಿದ್ದಳಂತೆ."

"ಹತ್ತು ಗ್ರಾಂ ಚಿನ್ನ!"

"ಚಿನ್ನ ಹಾಕೋದೇನೂ ಸಮಸ್ಯೆ ಅಲ್ಲ. ಆದರೆ ಈಗ ನನಗೆ ಸಮಸ್ಯೆ ಆಗಿರೋದು ವೈದ್ಯರೆಲ್ಲ ಕೈ ಚೆಲ್ಲಿದ ಮೇಲೂ ಈ ಬದಲಾವಣೆ ಹೇಗೆ ನಡೆಯಿತು? ಈ ಬದಲಾವಣೆಗೆ ಏನು ಕಾರಣ ಎನ್ನುವುದು. ಹಲವಾರು ಖಾಸಗೀ ಪತ್ತೇದಾರರುಗಳನ್ನೂ ಈ ನಿಮಿತ್ತ ಸಂಪರ್ಕಿಸಿದೆ. ಅವರೆಲ್ಲರ ಹೇಳಿಕೆಯ ಪ್ರಕಾರ ಇದು ಕೇವಲ ತರ್ಕಕ್ಕೆ ಸಂಬಂಧಿಸಿದ ಪ್ರಶ್ನೆ; ಶೋಧಿಸಲಿಕ್ಕೇನೂ ಇಲ್ಲ. ಮುಖ್ಯ ಕೆಲಸದ ನಿಮಿತ್ತ ಹೋಮ್ಸ್ ಹುಬ್ಬಳ್ಳಿಗೆ ಬಂದಿದ್ದಾರೆಂದು ಪತ್ರಿಕೆಗಳಲ್ಲಿ ಓದಿ ನನ್ನ ಸಮಸ್ಯೆಯನ್ನು ಅವರು ಪರಿಹರಿಸಬಹುದು ಎನ್ನುವ ಆಸೆಯಿಂದ ಅವರನ್ನು ಕಾಣಲು ಇಲ್ಲಿಗೆ ಬಂದೆ."

ಅಪರಾಧ ಇಲ್ಲ, ಹಾಗಾಗಿ ಶೋಧದ ಕಾರ್ಯವಿಲ್ಲ. ಆದರೂ ಗಂಭೀರ ಸಮಸ್ಯೆಯೊಂದಿದೆ! ನನಗೆ ವಿಚಿತ್ರವಾಗಿ ಕಂಡರೂ ಕುತೂಹಲವಾಗಿ ಕಾಣತೊಡಗಿತು. "ಹೋಮ್ಸ್ ಇನ್ನೆರಡು ದಿನ ನಿಮಗೆ ಸಿಗಲಾರರು. ನೀವು ನಿಮ್ಮ ದೂರವಾಣಿ ಸಂಖ್ಯೆಯನ್ನು ಕೊಟ್ಟು ಹೋಗಿ. ಹೋಮ್ಸ್ ಬರುತ್ತಿದ್ದಂತೆ ನಿಮಗೆ ಫೋನಾಯಿಸುತ್ತೇನೆ," ಎಂದು ಹೇಳಿ ಮಿ. ಶಂಕರ್ ಅವರನ್ನು ಕಳುಹಿಸಿದೆ.

★ ★ ★

ಸಮಸ್ಯೆಯನ್ನು ವಿವರವಾಗಿ ಕೇಳಿದ ಹೋಮ್ಸ್ ಬಹಳ ಹೊತ್ತು ಮೌನವಾಗಿದ್ದ. ಆ ದಿನ ರಾತ್ರಿ ತುಂಬ ಹೊತ್ತು ಪಿಟೀಲು ಕುಯ್ಯುತ್ತ ಕಳೆದದ್ದನ್ನು ಗಮನಿಸಿ ಸರೂಳ ಸ್ವರದ ಸಮಸ್ಯೆ ಆತನ ತಲೆ ತಿನ್ನುತ್ತಿದೆ ಎಂದು ತಿಳಿದೆ. ಮರುದಿನ ಬೆಳಿಗ್ಗೆ ಹೋಮ್ಸ್ ಹೇಳಿದ, "ಮಿ. ಶಂಕರ್ ಅವರಿಗೆ ಫೋನಾಯಿಸು. ನಾನು ಅವರೊಡನೆ ನಾಲ್ಕು ದಿನ ಕಳೆಯಬೇಕೆಂದಿದ್ದೇನೆ."

ಅದೇ ದಿನ ಹೋಮ್ಸ್ ಬೆಂಗಳೂರಿಗೆ ಹೊರಟು ಹೋದ. ಆದರೆ ಎರಡನೆಯ ದಿನವೇ ಹಿಂತಿರುಗಿದ. ಯಾವುದೋ ಹಳೆಯ ಹಾಡೊಂದನ್ನು ಗುನುಗುನಿಸುತ್ತ ಒಳಬಂದ ಹೋಮ್ಸ್



ತುಂಬ ಖುಷಿಯಲ್ಲಿದ್ದ.

"ಏನಯ್ಯಾ ಮಿತ್ರ, ಇಷ್ಟು ಬೇಗ ನಿನ್ನ ಕಾರ್ಯ ನಿರ್ವಹಿಸಿ ಬಂದುಬಿಟ್ಟೆಯಾ?" ಎಂದು ಕೇಳಿದೆ.

"ಹೌದು, ಅಲ್ಲಿ ತನಿಖೆಗೆ ಏನೂ ಇರಲಿಲ್ಲ. ಒಂದೇ ದಿನದಲ್ಲಿ ಕಾರಣ ತಿಳಿದದ್ದರಿಂದ ಸಮಸ್ಯೆ ಬಗೆಹರಿಸಿ ಹಿಂತಿರುಗಿದೆ." ಅಂದ ಹೋಮ್ಸ್.

"ಸರೂಳ ಸ್ವರ ಸರಿಯಾಗಲು ಕಾರಣ ಯಾರೆಂದು ಪತ್ತೆ ಮಾಡಿದೆ? ವೈದ್ಯರೋ, ದೇವರೋ?"

"ಸರೂಳ ಸ್ವರ ಸರಿಯಾಗಿದ್ದಕ್ಕೆ ಕಾರಣ ಯಾರು ಗೊತ್ತೇ ವ್ಯಾಟ್ಸನ್? ಅವಳ ಇಬ್ಬರು ತುಂಟ ಮಕ್ಕಳು ಹಾಗು ಅವಳ ಸೋಮಾರಿ ಗಂಡ!"

"ಅವಳ ಸ್ವರಕ್ಕೂ ಕುಟುಂಬಕ್ಕೂ ಸಂಬಂಧ?"

"ಹೌದು, ಮದುವೆಯಾದ ಪ್ರಾರಂಭದಲ್ಲಿ ಅವಳ ಸ್ವರ ಸರಿಯಿಲ್ಲದ್ದು ಸತ್ಯವೆ. ಆದರೆ ಕ್ರಮೇಣ ಒಂದೂವರೆ ವರ್ಷದಲ್ಲಿ ಒಂದು ಗಂಡು ಮಗು

ವಿಗೂ ಅನಂತರ ಎರಡು ವರ್ಷದಲ್ಲಿ ಒಂದು ಹೆಣ್ಣು ಮಗುವಿಗೂ ಅವಳು ಜನ್ಮ ನೀಡಿದಳು."

"ಆದರೆ ಮಗು ಹುಟ್ಟೋದು ಗಂಟ್ಲಲ್ಲಿ ಅಲ್ವಲ್ಲಾ: ಅವಳ ಸ್ವರ ಸರಿಯಾಗಿದ್ದಕ್ಕೂ ಅವಳ ಹೆರಿಗೆಗೂ ಏನು ಸಂಬಂಧ?"

ಹೋಮ್ಸ್ ಎದ್ದು ಕಿಟಕಿಯ ಬಳಿ ನಡೆದು ಹೊರಗೆ ದೃಷ್ಟಿಸುತ್ತ ಮಾತು ಮುಂದುವರಿಸಿದ. "ಮಕ್ಕಳಿಗೆ ಒಂದೆರಡು ವರ್ಷವಾಗುವವರೆಗೆ ತೊಂದರೆ ಇರುವುದಿಲ್ಲ ವ್ಯಾಟ್ಸನ್; ನಂತರ ಅವುಗಳಿಗೆ ಎಷ್ಟು ಸಲ ಗಂಟಲು ಒಡೆದುಕೊಂಡು ಕೂಗಬೇಕು ಗೊತ್ತಾ? ಒಂದೆರಡು ಸಲ ಕೂಗಿ ಹೇಳಿದರೆ ಅವುಗಳ ಕಿವಿಗೆ ಬೀಳುವುದೇ ಇಲ್ಲ. ಬೆಳಿಗ್ಗೆ 'ಏಳೋ ಏಳೋ' ಅಂತ ಏಳೇಳು ಸಲ ಕೂಗಿದ ಮೇಲೆಯೇ ಮಕ್ಕಳು ಏಳುವುದು. ನಂತರ ಕಾಫಿ ಕುಡಿಯಲು ಆರು ಸಲ, ಸ್ನಾನಕ್ಕೆ ಎಂಟುಸಲ ಕೂಗಿ ಕೂಗಿ ಇಡಬೇಕು.

"ಜೊತೆಗೆ ಇಬ್ಬರು ಮಕ್ಕಳಾದ ಮೇಲೆ ಯಾವ ಹೆಂಡತಿ ತನ್ನ ಗಂಡನನ್ನು, ಗಂಡ ಅಂತ ನೋಡ್ತಾಳೆ ಮಿತ್ರಾ? ಗಂಡನನ್ನು ಮೂರನೆಯ ಮಗುವಾಗಿ ದತ್ತು ತೆಗೆದುಕೊಂಡು ಬಿಡುತ್ತಾಳೆ! ಸರಸ್ವತಿಯ ವಿಷಯದಲ್ಲಿಯೂ ಹೀಗೆ ಆಯ್ತು. ಮೊದಲ ಮಗುವನ್ನು ದಿನಕ್ಕೆ ಹತ್ತಿಪ್ಪತ್ತು ಸಲ ಕೂಗುತ್ತಿದ್ದವಳು, ಎರಡನೆಯ ಮಗುವಾದ ನಂತರ ಕೂಗುವಿಕೆ ದುಪ್ಪಟ್ಟಾಯಿತು. ಜೊತೆಗೆ 'ಮೂರನೇ ಮಗು'ವಿಗೂ ಕೂಗಿ ಹೇಳುವ ಅಭ್ಯಾಸ ಬೆಳೆಯಿತು. ಅಲ್ಲಿಗೆ ಒಂದು ದಿನಕ್ಕೆ ಅವಳು ಎಷ್ಟು ಸಲ ಕೂಗಬೇಕು? ಮೊದಲೇ ಅವಳ ಸ್ವರ ಸರಿಯಾಗಿದ್ದರೆ ಇಷ್ಟು ಹೊತ್ತಿಗೆ ಕೂಗಿ ಕೂಗಿ ಹಾಳಾಗ್ತಾಯಿತ್ತು. ಆದರೆ ಅವಳು ಅದೃಷ್ಟವಂತೆ. ಮೊದಲೇ ಅವಳ ಸ್ವರ ಸರಿಯಾಗಿ ಇರಲಿಲ್ಲವಾದ್ದರಿಂದ ದಿನವೂ ಕೂಗಿ ಕೂಗಿ ಈಗ ಕ್ರಮೇಣ ಸರಿಯಾಗಿದೆ."

"ಮತ್ತೆ ಮಿತ್ರಾ, ನಿನ್ನ ಫೀಸ್ ವಿಷಯ?"

"ಪಡೆದುಕೊಂಡು ಬಂದೆ ಗೆಳೆಯಾ."

"ಎಷ್ಟು?"

ಹೋಮ್ಸ್ ತನ್ನ ಸೂಟ್‌ಕೇಸ್ ತೆರೆಯುತ್ತ ಹೇಳಿದ:

"ಹತ್ತು ಗ್ರಾಂ ಚಿನ್ನ!" ●

# ಸಂದೇಹ.... ಸಮಾಧಾನ....

ಜನವರಿ ೧೯೯೫ರ ಪುಸ್ತಕ ವಿಭಾಗದ 'ಅನ್ವೇಷಣೆಯ ಹಾದಿಯಲ್ಲಿ' ಓದಿದ ನಂತರ ನನ್ನ ಸಂದೇಹಗಳು ಈ ಕೆಳಗಿನವು:

೧) ಮೊದಲ ತಂಡ ಇಜಿಪ್ತಿನ ಅಲೆಗ್ಸಾಂಡ್ರಿಯ ಬಂದರನ್ನು ತಲುಪಿ ಕೈರೋ ಪಟ್ಟಣದ ಮೂಲಕ ದಕ್ಷಿಣಾಭಿಮುಖವಾಗಿ ಪ್ರಯಾಣ ಮಾಡಿ ನೈಜರ್ ನದಿಯ ಸಮೀಪ ಹೋಗಿತ್ತು. ಇದು ಹೇಗೆ ಸಾಧ್ಯ? ನೈಜರ್ ನದಿಯು ಪಶ್ಚಿಮ ಆಫ್ರಿಕದಲ್ಲಿದೆ. ಕೈರೋ ಪೂರ್ವದಲ್ಲಿದೆ.

೨) ಎರಡನೆ ಪ್ರಯತ್ನದಲ್ಲಿ ಮುಂಗೋಪಾರ್ಕ್ ಗ್ಯಾಂಬಿಯ ನದಿಯ ಮುಖಜದಿಂದ ಹೊರಟು ಸೆನೆಗಲ್ ನದಿಯ ದಾರಿಯನ್ನು ತೋರಿಸುವ ಪ್ರಯತ್ನವನ್ನು ಏತಕ್ಕೆ ಮಾಡಬೇಕಾಯಿತು? ಅದರ ಬದಲು ನೈಜರ್ ನದಿಯ ಮುಖಜದಿಂದ ಹೊರಟು ನದಿಯ ಉಗಮಸ್ಥಾನವನ್ನು ಕಂಡು ಹುಡುಕುವ ಪ್ರಯತ್ನವನ್ನು ಏತಕ್ಕೆ ಮಾಡಲಿಲ್ಲ?

೩) ಈ ಕಥೆಯಲ್ಲಿ "ನೀಗ್ರೋಗಳು ಇಸ್ಲಾಂ ಧರ್ಮದವರಾಗಿದ್ದರು. ಹಂದಿಯನ್ನು ಕಡಿದು ಮಾಂಸದ ವ್ಯಾಪಾರ ಮಾಡುತ್ತಿದ್ದರು" ಎಂದು ಹೇಳಿದೆ. ಇದು ತಪ್ಪಲ್ಲವೆ?

● ಗೋಪಾಲ ಕಾರ್ಕಳ, ಪುಣೆ

೧) ಈ ಲೇಖನ ಬರೆಯುವ ಮೊದಲು ಆಫ್ರಿಕಾ ಖಂಡದ ಭೂಪಟವನ್ನು ನೋಡಲಾಗಿದೆ.

೨) ಈ ಲೇಖನಕ್ಕೆ ಇಂಗ್ಲೀಷ್ ಮೂಲ ಗ್ರಂಥ Pages for pleasure ಎಂಬ ಪುಸ್ತಕದ ಮುಂಗೋಪಾರ್ಕ್‌ನ ಬಗೆಗಿನ ಅಧ್ಯಾಯದ ಸಂಗ್ರಹ.

೩. ಮೂಲ ಕಥೆಯನ್ನು ಸ್ವಲ್ಪ ವಿಸ್ತರಿಸಿ ಬರೆಯಲಾಗಿದೆ.

ಕ್ರಸಂ.೧: ಮೊದಲ ತಂಡದವರು ಈಜಿಪ್ತಿನ ಕೈರೋದಿಂದ ದಕ್ಷಿಣಕ್ಕೆ ಪ್ರಯಾಣಿಸಿ, ಲಿಬಿಯ ಮರುಭೂಮಿಯನ್ನು ಹಾಯ್ದು ಪಶ್ಚಿಮಕ್ಕೆ ಪ್ರಯಾಣಿಸಿದ್ದಾರೆ. ಇದಕ್ಕೆ Greek historian Herodotus told that some youngmen crossed the desert from Libia and travelled southwards ಎಂದು ಇಂಗ್ಲೀಷ್ ಮೂಲದಲ್ಲಿದೆ (ಪುಟ ೯೩.) ನೈಜರ್ ನದಿಯು ಆಫ್ರಿಕದ ಪಶ್ಚಿಮದಲ್ಲಿ ಹರಿಯುತ್ತಿದೆ. ಆರಂಭದಲ್ಲಿಯೇ ಲೇಖನದಲ್ಲೂ ಹೇಳಿದೆ.

ಕ್ರ. ಸಂ: ೨: ಮುಂಗೋಪಾರ್ಕನಿಗೆ ನೈಜರ್ ನದಿ ಮತ್ತು ಅದರ ಮುಖಜ ಭೂಮಿಯೂ ತಿಳಿದಿರಲಿಲ್ಲ. ಈ ನದಿಯ ಮುಖಜ ಭೂಮಿಯನ್ನು ಯಾರೂ ಕಂಡುಹಿಡಿದಿರಲಿಲ್ಲ. ಹೀಗಾಗಿ ತನಗೆ ಅಪರಿಚಿತವಾದ ನೈಜರ್ ಮುಖಜ ಭೂಮಿಯಿಂದ ಅನ್ವೇಷಣೆ ಆರಂಭಿಸುವುದು ಅಸಾಧ್ಯವಾಗಿತ್ತು. ಬದಲಾಗಿ ಇದನ್ನೇ ಕಂಡು ಹಿಡಿಯಲು ಅವನು ಹೊರಟಿದ್ದ. ಯುರೋಪಿನ ವ್ಯಾಪಾರಿಗಳು ಗ್ಯಾಂಬಿಯ ನದಿಯ ಮುಖಜ ಭೂಮಿಯಲ್ಲಿಳಿದು ಸೆನೆಗಲ್ ನದಿಯನ್ನು ದಾಟಿ ನೈಜರ್ ನದಿಯ ದಡದ ಟಿಂಬಕ್ಟುವಿಗೆ ಹೋಗುತ್ತಿದ್ದರು. ಇದು ಪರಿಚಿತ ಮಾರ್ಗವಾಗಿತ್ತು.

ಕ್ರಸಂ. ೩: ಡಾ. ಕಾರ್ಕಳರ ಅಭಿಪ್ರಾಯ ಸರಿ. ಇಂಗ್ಲೀಷ್ ಮೂಲವನ್ನು ಅರ್ಥೈಸಿಕೊಳ್ಳುವಾಗ ಪ್ರಮಾದವಾಗಿದೆ. ಅದಕ್ಕಾಗಿ ವಿಷಾದಿಸುತ್ತೇನೆ.

● ಬಿ.ಎಸ್. ರಾಮಭಟ್ಟ, ಶಿವಮೊಗ್ಗ

ಫೆಬ್ರುವರಿ ೯೫ರ ಸಂಚಿಕೆಯಲ್ಲಿ ಪ್ರಕಟವಾದ 'ಅಧಿಕಮಾಸ ಏಕೆ ಬರುತ್ತದೆ?' ಲೇಖನದಲ್ಲಿ 'ಒಮ್ಮೆ ಅಧಿಕವಾಗಿ ಬಂದ ಮಾಸ ಪುನಃ ೧೯ ವರ್ಷಗಳವರೆಗೂ ಅಧಿಕವಾಗಿ ಬರುವುದಿಲ್ಲ' ಎಂದಿರುವುದು ತಪ್ಪು. ಕ್ರಿ.ಶ. ೧೯೨೦ರಲ್ಲಿ ಶ್ರಾವಣ ಅಧಿಕ ಬಂದು

ಪುನಃ ೮ ವರ್ಷಕ್ಕೇ ೧೯೨೮ರಲ್ಲಿ ಅಧಿಕ ಬಂದಿರುವುದನ್ನು ಗಮನಿಸಬಹುದು. ೧೯೩೯ರಲ್ಲಿ, ೧೯೫೮ರಲ್ಲಿ ಶ್ರಾವಣ ಅಧಿಕವಾಗಿ ಬಂದು ೮ ವರ್ಷಕ್ಕೇ ಅಂದರೆ ೧೯೪೭ ಮತ್ತು ೧೯೬೬ರಲ್ಲಿ ಶ್ರಾವಣ ಅಧಿಕವಾಗಿ ಬಂದಿರುವುದನ್ನು ನೋಡಬಹುದು. ೧೯೮೦ರಲ್ಲಿ ಜ್ಯೇಷ್ಠ ಮಾಸವು ಅಧಿಕವಾಗಿದ್ದು ೧೯೮೮ರಲ್ಲೂ ಜ್ಯೇಷ್ಠ ಮಾಸ ಅಧಿಕ ಬಂದಿದೆ. ಮುಂದೆ ೧೯೯೯ರಲ್ಲೂ ಜ್ಯೇಷ್ಠ ಮಾಸವೇ ಬರಲಿದೆ.

ಕಳೆದ ವರ್ಷ ಭಾದ್ರಪದ ಅಧಿಕ ಬಂದ ಸಂದರ್ಭದಲ್ಲಿ ನಾನು ಕಂಪ್ಯೂಟರ್‌ನಲ್ಲಿ ಲೆಕ್ಕ ಹಾಕಿದಾಗ ೧೯೯೬ರಲ್ಲಿ ಆಷಾಢ ಮಾಸವೂ, ೧೯೯೯ರಲ್ಲಿ ಜ್ಯೇಷ್ಠ ಮಾಸವೂ ೨೦೦೧ರಲ್ಲಿ ಆಶ್ವಯುಜಮಾಸವೂ, ೨೦೦೪ರಲ್ಲಿ ಶ್ರಾವಣ ಮಾಸವೂ, ೨೦೦೭ರಲ್ಲಿ ಪುನಃ ಜ್ಯೇಷ್ಠ ಮಾಸವೂ, ೨೦೧೦ರಲ್ಲಿ ವೈಶಾಖ ಮಾಸವೂ ಹಾಗೂ ೧೯ ವರ್ಷಗಳ ಬಳಿಕ ೧೯೯೩+೧೯ ಅಂದರೆ ೨೦೧೨ನೆಯ ಇಸವಿಯಲ್ಲೂ ಭಾದ್ರಪದ ಅಧಿಕ ಬರುತ್ತದೆ. ೨೦೧೮ರಲ್ಲಿ ಜ್ಯೇಷ್ಠ ಮಾಸ ಅಧಿಕ ಬಂದ ಬಳಿಕ ೨೦೨೬ರಲ್ಲೂ ಜ್ಯೇಷ್ಠ ಮಾಸ ಅಧಿಕ ಬರುತ್ತದೆ.

ಪುಟ ೫೮ರಲ್ಲಿ ಚಂದ್ರನು ಕ್ರಾಂತಿವೃತ್ತದಲ್ಲಿ ಭೂಮಿಯನ್ನು ಪ್ರದಕ್ಷಿಣೆ ಹಾಕುತ್ತಿರುವಂತೆ ಚಿತ್ರದಲ್ಲಿ ತೋರಿಸಿದ್ದಾರೆ. ಚಂದ್ರನ ಕಕ್ಷೆಗೆ ಕ್ರಾಂತಿವೃತ್ತ ಎಂಬ ಹೆಸರಿಲ್ಲ ಹಾಗೂ ಅದು 'ವಿಕ್ಷೇಪ ವೃತ್ತ' ಎಂದಾಗಬೇಕು. ಚಂದ್ರ ಬಲದಿಂದ ಎಡಕ್ಕೆ ಭೂಮಿಯನ್ನು (ನಮ್ಮ ದೃಷ್ಟಿಗೆ ಗೋಚರವಾಗುವಂತೆ) ಪ್ರದಕ್ಷಿಣೆ ಮಾಡುತ್ತಾನೆ.

• ವಿಜಯಾ ಎಸ್. ಮೂರ್ತಿ, ಶಿರಾ

ತಾವು ನಮೂದಿಸಿರುವ ಇಸವಿಗಳನ್ನು ಪುನಃ ಅಧ್ಯಯನ ಮಾಡಿದರೆ ಒಂದು ವಿಷಯ ಗೋಚರಿಸುತ್ತದೆ. ಇಲ್ಲಿ ಅಧಿಕಮಾಸಗಳ ೨ ಆವರ್ತಚಕ್ರಗಳಿವೆ; ಅಧಿಕ ಶ್ರಾವಣವು ೧೯೨೦-೧೯೩೯-೧೯೫೮-೧೯೭೭ ಹೀಗೆ ಪ್ರತಿ ೧೯ ವರ್ಷಗಳ ಒಂದು ಆವರ್ತದಲ್ಲೂ, ಮತ್ತೆ ೧೯೨೮-೧೯೪೭-೧೯೬೬-೧೯೮೫-೨೦೦೪... ಹೀಗೆ ೧೯ ವರ್ಷಗಳ ಅಂತರದ ಎರಡನೇ ಆವರ್ತದಲ್ಲೂ ಬೇರೆ ಬೇರೆಯಾಗಿ ಆವರ್ತಿಸಿದೆ. ಹಾಗೆಯೇ ಜ್ಯೇಷ್ಠವು ೧೯೮೦-೧೯೯೯-೨೦೧೮ ಈ ೧೯ ವರ್ಷಗಳ ಅಂತರದ ಮೊದಲ ಚಕ್ರದಲ್ಲೂ ಮತ್ತೆ ೧೯೮೮- ೨೦೦೭-೨೦೨೬-೨೦೪೮ ಈ ೧೯ ವರ್ಷಗಳ ಅಂತರದ ಎರಡನೇ ಚಕ್ರದಲ್ಲೂ ಆವರ್ತಿಸಿದೆ. ಈ ಎರಡೂ ಆವರ್ತಗಳಿಗೆ ೮ ವರ್ಷಗಳ ಅಂತರವಿದ್ದು ಒಂದು ಆವರ್ತದ ಅವಧಿಯ ಮಧ್ಯೆಯೇ ಮತ್ತೊಂದು ಆವರ್ತದಲ್ಲಿ ಅದೇ ಮಾಸವು ಅಧಿಕವಾಗಿ ಬರುವುದು ಗೊಂದಲಕ್ಕೆ ಕಾರಣವಾಗುತ್ತದೆ.

ಪ್ರಸ್ತುತ ಲೇಖನದಲ್ಲಿ ಅತ್ಯಂತ ಗಹನವಾದ ವಿಷಯಗಳನ್ನು ತುಂಬಾ ಸರಳವಾಗಿಯೂ, ಹಾಗೂ ಲೇಖನದ ಗಾತ್ರವನ್ನು ಸೀಮಿತಗೊಳಿಸಿ ಹೇಳುವುದಕ್ಕೂ ಮಾಡುವ ಪ್ರಯತ್ನಗಳಲ್ಲಿ ತುಂಬಾ ಕ್ಲಿಷ್ಟವಾದ ಹಾಗೂ ಅತಿಸೂಕ್ಷ್ಮವಾದ ವಿಷಯಗಳನ್ನು ಕೈ ಬಿಡಬೇಕಾಗುತ್ತದೆ. ಆದರೂ "೧೯ ವರ್ಷಗಳವರೆಗೆ ಒಂದು ಮಾಸವು ಪುನಃ ಅಧಿಕವಾಗುವುದೇ ಇಲ್ಲ" ಎಂದು ಸ್ಪಷ್ಟವಾಗಿ ಹೇಳಿ ಗೊಂದಲಕ್ಕೆ ಕಾರಣನಾದುದಕ್ಕೆ ನನ್ನ ಅಚಾತುರ್ಯವೇ ಕಾರಣ ಎಂದು ಪ್ರಾಂಜಲವಾಗಿ ಒಪ್ಪಿಕೊಳ್ಳುತ್ತೇನೆ.

ಪತ್ರದ ೨ನೇ ಅಂಶದ ಬಗ್ಗೆ- ಚಂದ್ರನು ಭೂಮಿಯನ್ನು ಸುತ್ತಿಬರುವ ವಾಸ್ತವ ಕಕ್ಷೆಯು ಕ್ರಾಂತಿವೃತ್ತವಲ್ಲ, ಅದು ಚಂದ್ರನದೇ ಪ್ರತ್ಯೇಕ ಕಕ್ಷೆ ಎಂಬುದು ನಿಜ. ಹಾಗೆ ನೋಡಿದರೆ ಕ್ರಾಂತಿವೃತ್ತದಲ್ಲಿ ಚಂದ್ರನಾಗಲಿ ಸೂರ್ಯನಾಗಲಿ ಚಲಿಸುವುದಿಲ್ಲ, ಆದರೆ ಸೂರ್ಯ, ಚಂದ್ರ ಮತ್ತು ಇತರ ಗ್ರಹಗಳು ಚಲಿಸಿದಂತೆ ಕಾಣುವ ಪಥವೇ ಕ್ರಾಂತಿವೃತ್ತ (ಕಾಂತಿ ವೃತ್ತ). ಅಶ್ವಿನಿ, ಭರಣಿ ಇತ್ಯಾದಿ ನಕ್ಷತ್ರಗಳೂ ಚೈತ್ರ, ವೈಶಾಖ ಇತ್ಯಾದಿ ಮಾಸಗಳ, ಸೂರ್ಯ, ಚಂದ್ರರ ಅಂತರದ, ಹುಣ್ಣಿಮೆ ಗ್ರಹಣ ಮುಂತಾದ ಪ್ರಮುಖ ಘಟನೆಗಳ ಅಧ್ಯಯನಕ್ಕೆ ಕ್ರಾಂತಿವೃತ್ತದ ಹಿನ್ನೆಲೆಯಲ್ಲಿ ಚಂದ್ರನ ಸ್ಥಾನವು ಬಹಳ ಮುಖ್ಯ. ಇಲ್ಲಿ ಬದಲಾಗುವ ಚಂದ್ರನ ಸ್ಥಾನವನ್ನು ಪರ್ಯಾಯವಾಗಿ ಕ್ರಾಂತಿವೃತ್ತದಲ್ಲಿ ಚಂದ್ರನ ಚಲನೆ ಎಂದು ಕರೆಯಲಾಗುತ್ತದೆ. ಆದ್ದರಿಂದ ಸೂರ್ಯನಾಗಲಿ ಚಂದ್ರನಾಗಲಿ ಕ್ರಾಂತಿವೃತ್ತದಲ್ಲಿ ಚಲಿಸದಿದ್ದರೂ ಚಲಿಸಿದಂತೆ ಕಾಣುತ್ತಾರೆಂಬ ಅಂಶವೇ ಕಾಲಗಣನೆಯ ಜೀವಾಳ; ಆದ್ದರಿಂದ ಹಾಗೆ ಹೇಳಲೇಬೇಕಾಗುತ್ತದೆ.

• ಶ್ರೀವತ್ಸ ಎಸ್. ವಟಿ, ಬೇಲೂರು

ಬಿಕ್ಕ ತಲೆಯವ ಸತ್ತ ಪ್ರಕರಣದ ನಂತರ ಒಂದು ಬೆಳಗಿನ ಜಾವ. ಎಂದಿನಂತೆ ರಾತ್ರಿ ಎರಡರ ನಂತರ ಮಲಗಿದ್ದ ಪೀಟರ್‌ಗೆ ಮುಂದೆ ಎರಡು ತಾಸಿನ ಮೇಲೆ ಫೋನಿನ ಕರೆಗಂಟೆಯಿಂದ ಎಚ್ಚರವಾಯಿತು.

"ಕೂಡಲೇ ಪ್ಯಾಲೇಸ್ ಡಿ' ಜಸ್ಟಿಸ್‌ಗೆ ಬನ್ನಿ ಮಿ. ಪೀಟರ್. ಕಾಯುತ್ತಿರುತ್ತೇವೆ. ತಪ್ಪಿಸಬೇಡಿ." ಎಂದಷ್ಟೇ ಹೇಳಿ ಫೋನು ಕುಕ್ಕಲ್ಪಟ್ಟಿತು.

ಪೊಲೀಸರಿಗೆ ಮತ್ತೊಂದು ಪ್ರಕರಣವನ್ನು ಬಿಡಿಸುವಲ್ಲಿ ತನ್ನ ನೆರವಿನ ಅಗತ್ಯವಿದೆಯೆಂಬುದನ್ನು ಅರಿತುಕೊಳ್ಳಲು ಆತನಿಗೇನೂ ಕಷ್ಟವಾಗಲಿಲ್ಲ.

ಟ್ಯಾಕ್ಸಿ ಪ್ಯಾಲೇಸ್ ಡಿ' ಜಸ್ಟಿಸ್ ಎದುರು ನಿಂತಾಗ ಇನ್ನೂ ಕೋಳಿ ಮೈಮುರಿದೇಳುವ ಹೊತ್ತೂ ಆಗಿರಲಿಲ್ಲ. ಹತ್ತಾರು ಜನ ಅಧಿಕಾರಿಗಳು ಪೀಟರ್‌ನನ್ನು ಆಫೀಸು ಕೋಣೆಯೊಂದಕ್ಕೆ ಕರೆದೊಯ್ದರು. ಐವತ್ತು ಫೋಟೋಗಳ ಒಂದು ಪ್ಯಾಕೆಟ್ಟನ್ನು ಕೈಗಿತ್ತು, "ವಜ್ರಗಳ್ಳತನದ ಕೇಸು. ಇವರಲ್ಲಿ ಯಾರ್‍ಯಾರ ಕೈವಾಡ ಇದರಲ್ಲಿದೆ ಅಂತ ಹೇಳಿ ಪೀಟರ್." ಎಂದು ವಿನಂತಿಸಿಕೊಂಡ ಅಧಿಕಾರಿ.

"ಇನ್ನೆರಡು ಫೋಟೋಗಳಿದ್ದರೆ ಇವನ್ನೇ ಇಸ್ಪೀಟೆಲೆಯಾಗಿಟ್ಟುಕೊಂಡು ಆಡಬಹುದಿತ್ತು." ಪೀಟರ್ ಹುಬ್ಬು ಹಾರಿಸಿ ನಕ್ಕು ಆ ಫೋಟೋಗಳನ್ನೆಲ್ಲ ಇಸ್ಪೀಟೆಲೆಗಳಂತೆಯೇ ಟಿಪಾಯಿಸಿದ. ಆಮೇಲೆ ಎದುರಿನ ಟೇಬಲ್ಲಿನ ಮೇಲೆ ಅವನ್ನೆಲ್ಲ ಬೆನ್ನು ಮೇಲಾಗಿಸಿ ಇಡತೊಡಗಿದ.

ಕೆಲವೇ ದಿನಗಳ ಹಿಂದೆ ಶ್ರೀಮಂತ ಲೆಬನಾನಿಯೊಬ್ಬನ ಮನೆಯಿಂದ ಎರಡೂವರೆ ಕೋಟಿ ಫ್ರಾಂಕುಗಳಿಗೂ ಹೆಚ್ಚು ಬೆಲೆಯ ವಜ್ರಗಳನ್ನು ಕದ್ದ ಪ್ರಕರಣ ಕಥೆಯಾಗಿ ಹಬ್ಬಿತ್ತು. ಕದ್ದವರು ನಾಪತ್ತೆಯಾಗಿದ್ದರು. ಸಂಶಯದ ಮೇಲೆ ಬಂಧಿಸಲ್ಪಟ್ಟಿದ್ದವರು ಮೂವರು. ಆದರೆ ಅವರ ಬಳಿ ವಜ್ರಗಳಿದ್ದರಲ್ಲವೆ?

ಬೆನ್ನು ಮೇಲಾಗಿಡಲ್ಪಟ್ಟಿದ್ದ ಫೋಟೋಗಳ ಮೇಲೆ ಕೈ ಆಡಿಸಿದ ಪೀಟರ್ ಮೂರು ಫೋಟೋಗಳನ್ನೆತ್ತಿ ಹೇಳಿದ- "ಇವರೇ ಅಲ್ಲವೆ ನೀವು ಈಗಾಗಲೇ ಬಂಧಿಸಿದಂಥವರು?"

"ಹೌದು." ಅಧಿಕಾರಿ ತಲೆಯಾಡಿಸಿದ.

೮



# ಎಕ್ಸ್-ರೇ ಕಣ್ಣಿನ ಮನುಷ್ಯ !

● ಗೋವಾ

# ವಜ್ರಗಳ್ಳರು....

# ಚಿನ್ನಗಳ್ಳರು....

ಆತ ಮತ್ತೆ ಫೋಟೋಗಳನ್ನು ಮುಟ್ಟಿದ.

"ಈ ಪ್ರಕರಣದಲ್ಲಿ ಒಟ್ಟು ಐವರಿದ್ದಾರೆ. ನಾಲ್ವರು ಗಂಡಸರು; ಒಬ್ಬ ಹೆಂಗಸು...."

"ಹಾಗಾದರೆ ಆ ಇಬ್ಬರು ಗಂಡಸರು ಎಲ್ಲಿ ಎಂದು ನೋಡಿ ಹೇಳಿರಲ್ಲ ಪೀಟರ್," ಅಧಿಕಾರಿ ಆತುರ ವ್ಯಕ್ತಪಡಿಸಿದ.

"ಹಾಂ.... ಹಾಂ.... ಇವರೇ ಆ ಇಬ್ಬರು," ಎಂದೆನ್ನುತ್ತ ಮತ್ತೆರಡು ಫೋಟೋಗಳನ್ನೆತ್ತಿದ ಪೀಟರ್, "ಆದರೆ ಈಗಿವರು ಪ್ಯಾರಿಸ್ಸಿನಲ್ಲಿಲ್ಲ.... ಮಾರ್ಸೆಲ್ಲಿಸ್‌ನಲ್ಲಿದ್ದಾರೆ. ಮೀನು ಹಿಡಿಯುವ ಹವ್ಯಾಸದ ಈ ಕುಳ್ಳ ವಜ್ರಗಳ್ಳ ಟ್ರೇನು ಹತ್ತಿ ಆ ಊರಿಗೆ ಹೋಗಿದ್ದಾನೆ. ವಜ್ರಗಳೊಂದಿಗೆ ದಕ್ಷಿಣ ಅಮೆರಿಕಕ್ಕೆ ಓಡಿ ಹೋಗಬೇಕೆಂದುಕೊಂಡಿದ್ದಾನೆ. ಮಾರ್ಸೆಲ್ಲಿಸ್‌ನ 'ದ. ಅಮೆರಿಕ ರಾಯಭಾರ ಕಚೇರಿ'ಗೆ ವಿಸಾಗಾಗಿ ಅಡ್ಡಾಡುತ್ತಿದ್ದಾನೆ. ಅವನೊಬ್ಬ ಕರಿಯ ಕುಳ್ಳ...."

ವಜ್ರಗಳನ್ನು ಕಳಕೊಂಡ ಆ ಶ್ರೀಮಂತ ಲೆಬನಾನಿ ಹತ್ತು ವರ್ಷಗಳಿಂದಲೂ ಪ್ಯಾರಿಸ್ಸಿನಲ್ಲೇ ವಾಸಿಸಿದ್ದ. ಆದರೆ ಅದ್ಯಾಕೋ ಇದ್ದಕಿದ್ದ ಹಾಗೆಯೇ ಸ್ವದೇಶಕ್ಕೆ ಹಿಂದಿರುಗುವ ನಿರ್ಧಾರಕ್ಕೆ ಬಂದ. ಇಲ್ಲೇ ಶುರುವಾಯಿತು ಆತನ ಸಂಕಷ್ಟ. ಮೂರು ವರ್ಷಗಳಿಂದ ಆತ ಒಬ್ಬ ಫ್ರೆಂಚ್ ಯುವತಿಯನ್ನು ಮನೆಯಲ್ಲಿಟ್ಟುಕೊಂಡು ಹೆಂಡತಿಯಂತೆ ನಡೆಸಿಕೊಂಡಿದ್ದ. ಮದುವೆಯಾಗಿಲ್ಲವೆಂಬುದೊಂದನ್ನು ಬಿಟ್ಟರೆ ಉಳಿದೆಲ್ಲ ರೀತಿಯಲ್ಲೂ ಅವರಿಬ್ಬರೂ ಸತಿ-ಪತಿಯೆ. ಇದ್ದಕಿದ್ದ ಹಾಗೆಯೆ ಲೆಬನಾನಿಗೆ ಮರಳುವ ಆತನ ನಿರ್ಧಾರ ಆ ಹುಡುಗಿಯನ್ನು ಕೆರಳಿಸಿತ್ತು. ಜತೆಗೆ ತನ್ನನ್ನೂ ಕರೆದೊಯ್ಯುವಂತೆ ದುಂಬಾಲು ಬಿದ್ದಳು. ಆತ ಹಿಂದೇಟು ಹಾಕಿದ್ದ. ತನ್ನಲ್ಲಿರುವ ವಜ್ರಗಳ ಮಾರಾಟದ ಯತ್ನದಲ್ಲಿರುವುದಾಗಿ ಹೇಳಿದ್ದ ಆತ ಅದರಿಂದ ಬರುವ ಹಣದಲ್ಲಿ ಹತ್ತು ಲಕ್ಷ ಫ್ರಾಂಕು ಗಳನ್ನು ಆಕೆಗೆ ಕೊಡುವುದಾಗಿ ವಚನವಿತ್ತಿದ್ದ.

ಘಟನೆಯ ದಿನ ಆ ಲೆಬನಾನಿ ಮುಂಜಾವಿನಲ್ಲೇ ವಜ್ರಗಳು ಇದ್ದ ಬ್ರೀಫ್‌ಕೇಸಿನೊಂದಿಗೆ ಮನೆಯಿಂದ ಹೊರಟಿದ್ದ. ದಾರಿಯಲ್ಲಿಬ್ಬರು ಪೊಲೀಸು ಪೇದೆಗಳು ತಡವಿಕೊಂಡರು. ಆತನನ್ನು "ನಡೆ, ಪ್ಯಾಲೇಸ್ ಡಿ' ಜಸ್ಟಿಸ್"ಗೆ ಎಂದು ಕರೆದೊಯ್ದರು. ಬ್ರೀಫ್‌ಕೇಸನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡು, "ನಾವಿದನ್ನು ಪರೀಕ್ಷಿಸಬೇಕು. ಇಲ್ಲೇ ಕೂತಿರು, ಈಗ ಬರುತ್ತೇವೆ," ಎಂದು ಆತನನ್ನು ಆ ಹೊರಕೋಣೆಯಲ್ಲೇ ಕುಳ್ಳಿರಲು ಹೇಳಿ ಒಳಗೆ ಹೋದರು.

ಲೆಬನಾನಿ ಈಗ ಬಂದಾರು ಆಗ ಬಂದಾರು ಎಂದು ಕಾದೇ ಕಾದ. ಗಂಟೆ ಹೊತ್ತು ದಾಟಿದರೂ ಅವರಿಬ್ಬರ ಪತ್ತೆಯಿಲ್ಲ. ಸಂಶಯ ಶುರುವಾಯಿತು. ಒಂದು ತಿಂಗಳಿನ ಹಿಂದಷ್ಟೇ ಹೊಟ್ಟೆಯ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡಿದ್ದರಿಂದ ಲೆಬನಾನಿ ಇನ್ನೂ ಅಶಕ್ತನಾಗೇ ಇದ್ದ. ಅಲ್ಲಿಂದ ಬೇಗ ಹೊರಡಬೇಕೆಂದುಕೊಂಡ. ಆ ಇಬ್ಬರು ಪೇದೆಗಳನ್ನು ಹುಡುಕಿಕೊಂಡು ಪ್ಯಾಲೇಸ್ ಡಿ' ಜಸ್ಟಿಸ್‌ನ ಪ್ರತಿ ಕೋಣೆಯಲ್ಲೂ ಇಣುಕಿ ನೋಡಿದ.

ಆದರೆ ಅಂಥ ಪೇದೆಗಳು ತಮ್ಮಲ್ಲಿ ಇಲ್ಲವೇ ಇಲ್ಲವೆಂದು ಅಲ್ಲಿನ ಅಧಿಕಾರಿಗಳು ಹೇಳಿದಾಗ ಆ ಲೆಬನಾನಿ ಅರೆಜೀವವಾದ. ಹಾಗಾದರೆ ವಜ್ರಗಳಿದ್ದ ತನ್ನ ಬ್ರೀಫ್‌ಕೇಸು? ತನ್ನ ಕೈ ಬಿಟ್ಟಿತೆ? ಬಹುಮೂಲ್ಯದ ವಜ್ರಗಳನ್ನವರು ಹಾರಿಸಿಕೊಂಡು ಹೋದರೇ?

ಅವನಿಗೆ ಮನದಟ್ಟಾಗಿ ಹೋಯಿತು- ತನ್ನನ್ನು ತಡವಿಕೊಂಡವರು, ಹಿಡಿದು ಬ್ರೀಫ್‌ಕೇಸನ್ನು ಪಡೆದುಕೊಂಡವರು ಪೊಲೀಸು ವೇಷದ ಪಕ್ಕಾ ಕಳ್ಳರೆಂದು.

"ಅಯ್ಯೋ, ನನ್ನ ಎರಡೂವರೆ ಕೋಟಿ ಫ್ರಾಂಕುಗಳ ವಜ್ರಗಳು... ವ್ಯರ್ಥವಾಯಿತಲ್ಲ. ನಾನಿಷ್ಟು ದಿನ ಅವುಗಳನ್ನು ಜೋಪಾನದಿಂದಿರಿಸಿಕೊಂಡದ್ದು... ಆ ಕಳ್ಳರಿಗೆ ಹ್ಯಾಗೆ ಗೊತ್ತಾಯಿತೋ...." ಎಂದೆಲ್ಲ ಗೋಳಾಡಿಕೊಳ್ಳುತ್ತಲೇ ಪೊಲೀಸು ಅಧಿಕಾರಿಗಳಿಗೆ ದೂರು ಸಲ್ಲಿಸಿದ್ದ.

ಅವರು ಮೊಟ್ಟಮೊದಲು ಬಂಧಿಸಿದ್ದೇ ಆ ಫ್ರೆಂಚ್ ಯುವತಿಯನ್ನು. ಯಾಕೆಂದರೆ ಆಕೆಯೇ ಆ ಲೆಬನಾನಿಯ ಶ್ರೀಮಂತಿಕೆಯ ಬಗೆಗಿನ ಎಲ್ಲ ಗುಟ್ಟೂ ಗೊತ್ತಿದ್ದವಳು. ವಜ್ರಗಳವಿನ ಪ್ರಕರಣದಲ್ಲಿ ತನ್ನ ಕೈವಾಡವಿದೆ ಎಂದಾಕೆ ತಡಮಾಡದೇ ಒಪ್ಪಿಕೊಂಡಳು. ಆ ಇಬ್ಬರು 'ಪೊಲೀಸು ಪೇದೆ' ಗಳ ಕುರಿತು ಹೇಳಿದವಳೂ ಆಕೆಯೇ. ಆದರೆ

ಬಂಧಿಸಲ್ಪಟ್ಟಿದ್ದವರು ಬೇರೆಯೆ. ಅವರಿಬ್ಬರೂ ಈ ಪ್ರಕರಣಕ್ಕೆ ನೇರವಾಗಿ ಸಂಬಂಧಿಸಿರಲಿಲ್ಲವಾದರೂ ವಜ್ರಗಳ್ಳತನದ ಕಾರ್ಯದಲ್ಲಿ ಸಹಕರಿಸಿದ್ದರು.

ಪೀಟರ್ ಹೇಳಿದಂತೆ ಪೊಲೀಸು ಅಧಿಕಾರಿಯೊಬ್ಬ ಮಾರ್ಸೆಲ್ಲಿಸ್‌ಗೆ ಹೋದ. ವಜ್ರಗಳ್ಳತನದ ಮುಖ್ಯ ಪಾತ್ರಧಾರಿಗಾಗಿ ಹುಡುಕಾಡಿದ. ಆದರೆ ಆತನ ಅಜಾಗರೂಕತೆಯಿಂದಾಗಿ ಹಕ್ಕಿ ಹಾರಿ ಹೋಗಿತ್ತು. ಪೀಟರ್ ಹೇಳಿದ್ದಂತೆ 'ದ. ಅಮೆರಿಕದ ರಾಯಭಾರ ಕಚೇರಿ'ಗೆ ಹೋಗಿ ವಿಚಾರಿಸಿದಾಗ ತಿಳಿದು ಬಂದ ಸಂಗತಿಯೆಂದರೆ ಆ ಕರಿಯ ಕುಳ್ಳ ಆದಾಗಲೇ ವಿಸಾ ಪಡೆದುಕೊಂಡಿದ್ದಾನೆ ಎಂದು. ಪೊಲೀಸು ಅಧಿಕಾರಿ ಮೀನು ಹಿಡಿಯುವ ಹವ್ಯಾಸದವರನ್ನು ಹುಡುಕಿಕೊಂಡು ಹೊರಟ. ಅಸಂಖ್ಯಾತ ಮೀನುಗಾರ ದೋಣಿಗಳು... ಅವುಗಳಲ್ಲಿ ಆ ಕುಳ್ಳ ಕಂಡುಬಂದಾನೆಯೆ..... ಊಹುಂ. ವಿಚಾರಿಸಿದಾಗ ತಿಳಿದು ಬಂತು- ಒಂದು ಮೀನುಗಾರ ದೋಣಿಯನ್ನು, ಕೇಳಿದ್ದಕ್ಕಿಂತ ಹೆಚ್ಚು ಹಣ ಕೊಟ್ಟು, ಬಾಡಿಗೆಗೆ ತೆಗೆದುಕೊಂಡು ಬ್ರೀಫ್‌ಕೇಸಿನ ಕರಿಯ ಕುಳ್ಳನೊಬ್ಬ ಹಿಂದಿನ ರಾತ್ರಿಯೇ ಹೊರಟು ಹೋದ ಎಂದು.

ಜಾಲ ಬೀಸಲೇಬೇಕಾದ್ದು ಅನಿವಾರ್ಯವಾಗಿತ್ತು. ಆದರೆ ಆ ಜಾಲದ ಕಿಂಡಿಗಿಂತಲೂ ಕಿರಿದಾದ ಮೀನು ಅದರಲ್ಲಿ ಸಿಕ್ಕಿಕೊಳ್ಳುವುದು ಸಾಧ್ಯವೆ?

ವಜ್ರಗಳ ಪತ್ತೆ ಆಗಲಿಲ್ಲ. ಅದೇ ಹೊಟ್ಟೆಬೇನೆ ಹಚ್ಚಿಕೊಂಡ ಲೆಬನಾನಿ ಹಿಡಿದ ಹಾಸಿಗೆ ಬಿಟ್ಟು ಏಳಲಿಲ್ಲ.

★ ★ ★

'ಸ್ಕೋನ್ ವಜ್ರ'ದ ಕಳವು ಪ್ರಕರಣ ೧೯೫೦ರ ಆಸುಪಾಸಿನಲ್ಲಿ ಬಲು ಕುತೂಹಲಕಾರಿ-ಕಳವಳಕಾರಿ-ಕ್ಷೋಭಕಾರಿ ಎನಿಸಿತು. ಇಂಗ್ಲೆಂಡಿನ ಸಿಂಹಾಸನಕ್ಕೆ ರಾಜ ಇಲ್ಲವೆ ರಾಣಿ ಮೊದಲ ಬಾರಿಗೆ ಏರುವ ಸಂದರ್ಭದಲ್ಲಿ ಅತಿ ಮಹತ್ವದ ಪಾತ್ರ ಇದರದು. ಅಂತೆಯೆ ಇದಕ್ಕೆ 'ವಜ್ರ ಸಮ್ರಾಟ'ನೆಂಬ ಗೌರವ. ಸದಾಕಾಲವೂ ರಾಜ ಪೀಠದ ಅಡಿಯಲ್ಲಿ ಅಜ್ಞಾತವಾಗಿ ಇಡಲ್ಪಡುವ ಸೌಭಾಗ್ಯದ ಸಂಕೇತ ಈ ವಜ್ರ.

"ಸ್ಕಾಟ್‌ಲೆಂಡ್ ಮೂಲದ್ದಂತೆ. ಬಹು ಹಿಂದೆ ಇಂಗ್ಲೀಷರು ಈ ವಜ್ರವನ್ನು ಹಾರಿಸಿಕೊಂಡು ಬಂದರಂತೆ--" ಇದು ಸ್ಕಾಟಿಶ್ಶರಲ್ಲಿ ಪ್ರಚಲಿತವಿರುವ ಕಥೆ. ಇದನ್ನು ಅಪಹರಿಸಿದ ಪ್ರಸಂಗಗಳು ಅನೇಕ. ಅಪಹರಣ ಯತ್ನಗಳು ನಡೆದದ್ದೂ ಹತ್ತಾರು ಬಾರಿ. ೧೯೫೦ರಲ್ಲಿ 'ಸ್ಕೋನ್ ವಜ್ರ' ವೆಸ್ಟ್‌ಮಿನಿಸ್ಟರ್ ಅಬೆಯಿಂದ ಹಾರಿಸಲ್ಪಟ್ಟಿತು. ಅದರೊಂದಿಗಿದ್ದ ಫಲಕ ಆ ಮುಂಜಾನೆ ಟಫ್ಟನ್ ಸ್ಟ್ರೀಟ್‌ನಲ್ಲಿ ಎಸೆಯಲ್ಪಟ್ಟುದನ್ನು ನೋಡಿದ ಯಾರೋ, "ಸ್ಕೋನ್ ವಜ್ರ ಕಳುವಾಗಿದೆಯಪ್ಪೋ ಕಳುವಾಗಿದೆ," ಎಂದು ಕೂಗಿದ್ದೇ ಕಾರಣವಾಗಿ ದೊಡ್ಡ ಧಾಂದಲೆಯೇ ಎದ್ದಿತು.

ಸರಿ, ಶುರುವಾಯಿತು ಶೋಧನೆ. ದಾರಿಯಲ್ಲಿ ಹೋಗಿ-ಬರುವ ಪ್ರತಿಯೊಬ್ಬನ ಮೇಲೂ ಸ್ಕಾಟ್‌ಲಂಡ್ ಯಾರ್ಡಿನವರ ಕಣ್ಣು. ಎಲ್ಲ ಸಂಶಯಿತ ಸ್ಥಳಗಳಲ್ಲೂ ಪೊಲೀಸು ನಾಯಿಗಳು ಮೂಸಿದ್ದೇ ಮೂಸಿದ್ದು. ಸಂಭಾವ್ಯ ಪ್ರದೇಶಗಳಲ್ಲಿನ ಮನೆಗಳ ಮೇಲೆ ಪೊಲೀಸು ರೇಡುಗಳು.

ಊಹುಂ. 'ವಜ್ರ ಸಮ್ರಾಟ' ತಾನಡಗಿ ಕುಳಿತ ಜಾಗದ ಸುಳಿವು ಕೊಡಲೇ ಇಲ್ಲ. ದಿನದಿನಕ್ಕೆ ಜನ ಮನದಲ್ಲಿ ಕಳ್ಳರ ವಿರುದ್ಧ, ಅವರನ್ನು ಕಂಡು ಹಿಡಿದು ಹೆಡಮುರಿಗೆ ಕಟ್ಟಿ ಎಳೆದು ತರಲಾಗದ ಆರಕ್ಷಕರ ವಿರುದ್ಧದ ಸಿಟ್ಟು ಬೆಟ್ಟದೆತ್ತರ ಬೆಳೆಯತೊಡಗಿತು.

ಪತ್ರಿಕೆಗಳಿಗೆ ಇದೊಂದು ಪರಮಾನ್ನದಂಥ ಸುದ್ದಿ. ಪ್ರತಿದಿನವೂ ಅದನ್ನು ಬೇರೆ ಬೇರೆ ರೀತಿಯಲ್ಲಿ ಓದುಗರಿಗೆ ಬಡಿಸುತ್ತಲೇ ನಡೆದವು. ಅಲ್ಲಿಂದ ಸುತ್ತಲಿನ ರಾಷ್ಟ್ರಗಳ ಪತ್ರಿಕೆಗಳೂ ಪ್ರೇರಣೆ ಪಡೆದವು. ತಮತಮಗೆ ತಿಳಿದ ಹಾಗೆ 'ವಜ್ರಗಳ್ಳತನದ ಕಥೆ' ಹೇಳುತ್ತಲೇ ತಮ್ಮ ಪ್ರಸಾರ ಸಂಖ್ಯೆ ಹೆಚ್ಚಿಸಿಕೊಳ್ಳಲು ಹೊಂಚು ಹಾಕಿದವು.

**ಆಳ**

ಗೆಳೆಯಾ,
ಸಮುದ್ರದಾಳದಂತೆ
ನಿನ್ನ ಹೃದಯದಾಳ
ಹುಡುಕಿದಷ್ಟು
ನಿಗೂಢ!

● ಸಹನಾ ಕಾಂತಬೈಲು

ಗೆಳೆಯನೊಬ್ಬ ಈ ಪ್ರಕರಣದತ್ತ ಪೀಟರನ ಗಮನ ಸೆಳೆದ. "ನೋಡು, ನಿನ್ನಿಂದೇನಾದರೂ ಆ ವಜ್ರವನ್ನು ಪತ್ತೆಹಚ್ಚಲಿಕ್ಕಾಗುವುದೇನೋ..." ಎಂದ. "ಒಮ್ಮೆ ಹೋಗಿ ಪ್ರಯತ್ನಿಸುವುದರಲ್ಲಿ ತಪ್ಪೇನಿದೆ?" ಎಂದು ಪತ್ನಿ ಮಾರಿಯಾ ದುಂಬಾಲು ಬಿದ್ದಳು.

ಪೀಟರ್ ಹೆಂಡತಿಯೊಂದಿಗೆ ಇಂಗ್ಲೆಂಡಿಗೆ ಹೊರಟ.

ಸ್ಕಾಟ್‌ಲಂಡ್‌ಯಾರ್ಡಿನವರು ಪೀಟರ್‌ನನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ವೆಸ್ಟ್‌ಮಿನಿಸ್ಟರ್ ಅಬೆಗೆ ಪ್ರವೇಶಿಸಲು ಅನುಮತಿ ನಿರಾಕರಿಸಿದರು. ಅವರ ಮನವೊಲಿಸಲು ಪೀಟರ್ ಪರದಾಡಬೇಕಾಯಿತು.

"ಆಯಿತು, ನಿನಗೆ ನಿನ್ನ ಶಕ್ತಿಯ ಮೇಲೆ ಅಷ್ಟು ನಂಬಿಕೆಯಿದ್ದರೆ ಪ್ರಯತ್ನಿಸಿನೋಡು. ನಾವು ಯಾವ ಸುಳಿವೂ ಕೊಡುವುದಿಲ್ಲ. ಹಾಗೆ ಮಾಡಲು, ಹೇಳಬಾರದಂಥ ಕೆಲವು ಕಾರಣಗಳಿವೆ. ವೆಸ್ಟ್ ಮಿನಿಸ್ಟರ್ ಅಬೆಯ ಪ್ರವೇಶದ್ವಾರದವರೆಗೆ ಮಾತ್ರ ನೀನು ಹೋಗಬಹುದು."

ಈ ಮಾತಿನಿಂದ ಪೀಟರ್ ಸ್ವಲ್ಪ ಗೆಲುವಾದ. ಆತನಿಗೆ ನೀಡಲ್ಪಟ್ಟ ಒಂದೇ ಒಂದು ಸುಳಿವು- ಆ ವಜ್ರದೊಂದಿಗಿದ್ದ, ಟಫ್ಟನ್ ಸ್ಟ್ರೀಟ್ ಮೇಲೆ ಎಸೆಯಲ್ಪಟ್ಟಿದ್ದ, ಆ ಫಲಕ. ಅದು ದೊರೆತ ಜಾಗಕ್ಕೆ ಹೋಗಿ ನಿಂತ ಪೀಟರ್‌ನ ಕಣ್ಣೆದುರು ವೇಗದಿಂದ ಓಡಿದ ವಾಹನವೊಂದರಿಂದ ಆ ಫಲಕ ಬೀಸಿ ಎಸೆಯಲ್ಪಟ್ಟುದು 'ಗೋಚರಿಸಿತು.'

"ಅಂದರೆ ವಜ್ರವನ್ನು ನಾಲ್ಕು ಗಾಲಿಗಳ ವಾಹನದಲ್ಲಿ ಸಾಗಿಸಲಾಗಿದೆ ಎಂದಾಯಿತು."

ಪೀಟರ್‌ನ ಈ ಮಾತಿನಿಂದ ಸ್ಕಾಟ್‌ಲಂಡ್‌ಯಾರ್ಡಿನ ಅಧಿಕಾರಿ ಚಕಿತನಾದ.

"ಏನಂದಿ? ಹೂಂ.... ಮತ್ತೇನೇನು ಕಂಡಿ- ಹೇಳು, ಹೇಳು...." ಆತ ಆತುರ ತೋರಿದ.

"ಹಾಗೆಲ್ಲ ಅವಸರಿಸಿದರೆ ಆಗದು. ಅನುಸರಿಸಿಕೊಂಡು ಹೋಗುವ ಯತ್ನ ಮಾಡುತ್ತಿದ್ದೇನೆ. ಸ್ವಲ್ಪ ಉಸಿರು ಬಿಗಿ ಹಿಡಿದುಕೊಳ್ಳಿ...." ಎಂದು ಉತ್ತರಿಸಿದ ಪೀಟರ್.

ಆ ಅಧಿಕಾರಿ ತೆಪ್ಪಗೆ ಇದ್ದುಬಿಡುವುದೇ ಜಾಣತನ ಎಂದುಕೊಂಡ.

ವೆಸ್ಟ್ ಮಿನಿಸ್ಟರ್ ಅಬೆಯ ಬಾಗಿಲಿನ ಮೇಲೆ ಯಾವುದೋ ಲೋಹದಿಂದ ಜಜ್ಜಿದ ಗುರುತುಗಳು ಕಂಡವು. ಬಾಗಿಲು ಮುರಿಯಲ್ಪಟ್ಟಿತ್ತು. ಆ ಭಾಗದಲ್ಲಿ ಕೈ ಆಡಿಸಿದ ಪೀಟರ್‌ಗೆ ಕಬ್ಬಿಣದ ಹಾರೆ 'ಕಾಣಿಸಿತು'. ಹಾಗೇ ಗಮನ ಕೇಂದ್ರೀಕರಿಸಿದ. ಲೋವರ್‌ಥೇಮ್ಸ್ ಸ್ಟ್ರೀಟಿನ ಅಂಗಡಿ 'ಕಂಡಿತು.' ಅಲ್ಲಿ ಅಂಥ ನೂರಾರು ಹಾರೆಗಳು ಇರುವುದನ್ನೂ 'ನೋಡಿದ.'

"ನಾಲ್ಕು ಗಾಲಿಗಳು. ಹತ್ತು ಕೈಗಳು.... ಗ್ಲಾಸ್ಗೋ.... ಹಾಂ. ಹೌದು. ವಜ್ರ ಗ್ಲಾಸ್ಗೋಗೆ ಸಾಗಿಸಲ್ಪಟ್ಟಿದೆ... ಕಾರಿನಲ್ಲಿ.... ಐದು ಮಂದಿ ಅದನ್ನು ಅಲ್ಲಿಗೆ ಒಯ್ದಿದ್ದಾರೆ...."

ಸ್ಕಾಟ್‌ಲಂಡ್ ಯಾರ್ಡಿನ ಅಧಿಕಾರಿ ಅವಾಕ್ಕಾದ. ಕೂಡಲೇ ತನ್ನ ಮೇಲಿನವರಿಗೆ "ಹೀಗೆ ಹೀಗೆ" ಎಂದು ಹೇಳಿದ. ಅವರೆಲ್ಲ ತುರ್ತು ಸಭೆ ಸೇರಿದರು. ಪೀಟರ್‌ನೂ ಆಹ್ವಾನಿಸಲ್ಪಟ್ಟ.

"ಈ ಘಟನೆಯ ಆದ್ಯಂತದ ವರ್ಣನೆ ಮಾಡಲು ಸಾಧ್ಯವೆ? ಶಕ್ಯವಿದ್ದ ಮಟ್ಟಿಗೆ ಅದು ಹಾಳೆಯ ಮೇಲೆ ಮೂಡಿದರೆ ಇನ್ನೂ ಒಳ್ಳೆಯದು." ಉಚ್ಚಾಧಿಕಾರಿ ಕೇಳಿಕೊಂಡ.

ದೊಡ್ಡದೊಂದು ಹಾಳೆ ಹಾಸಲ್ಪಟ್ಟಿತು. ಪೀಟರ್ ಅದರ ಮೇಲೊಂದು ಗೆರೆ ಎಳೆದ. ಆ ಗೆರೆ ಹಾಗೆಯೇ ಮುಂದುವರಿಯಿತು. ಹಾವು ಏಣಿಯಾಟದ ಪಟದಂತೆ ಆಕೃತಿ ಮೂಡಿ ಬಂತು. ಈಗ ಪೀಟರ್ ಗೆರೆ ಪ್ರಾರಂಭಿಸಿದ ಬಿಂದುವಿನ ಮೇಲೊಂದು ಕಾರಿನ ಚಿತ್ರ ಬಿಡಿಸಿದ. ಕೆಲವೆಡೆ ಪಟಪಟನೆ ಇಂಗ್ಲೀಷ್ ಅಕ್ಷರಗಳನ್ನು ಬರೆದ. ಹಾಗೆ ಬರೆಯುತ್ತಲೇ ಸಾಗಿ ಕೆಲವೆಡೆ ಕಟ್ಟಡಗಳ ಗುರುತು, ಕೆಲವೆಡೆ ನದಿ ಇನ್ನು ಕೆಲವೆಡೆ ಸೇತುವೆಗಳನ್ನೂ ಸೂಚಿಸಿದ. ಕೊನೆಗೆ ಆ ನಕ್ಷೆಗೆ ದಿಕ್ಕು ಬರೆದ. ಆ ಮೇಲೆ ಅದನ್ನು ಕರಿಹಲಗೆಗೆ ಅಂಟಿಸಿ, "ಲಂಡನ್ನಿನ ನಕ್ಷೆಯನ್ನು ಇದರ ಪಕ್ಕದಲ್ಲಿ ತೂಗು ಹಾಕಿ ಹೋಲಿಸಿ ನೋಡಿ." ಎಂದ.

ಅಧಿಕಾರಿಗಳು ಅದಾವುದೋ ಮೋಡಿಗೊಳಗಾದವರಂತೆ ನಿಂತು ಬಿಟ್ಟರು. ವಜ್ರಗಳುವಿನ ಇಡೀ ಚಿತ್ರವನ್ನು ಪೀಟರ್ ಬಿಡಿಸಿಟ್ಟಿದ್ದ. ಲಂಡನ್ನಿನ ನಕ್ಷೆಯೊಂದಿಗೆ ಪೀಟರ್ ಬಿಡಿಸಿದ್ದ ನಕ್ಷೆಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದರು. ಕೆನಿಂಗ್ಸ್

ಟನ್ ಗಾರ್ಡನ್ನಿನ ದಕ್ಷಿಣಕ್ಕಿರುವ ಕಂಪೌಂಡಿನ ದಂಡೆಯಿಂದ ಹೊರಟ ಕಾರು ನೈಟ್ಸ್ ಬ್ರಿಜ್ ಮೂಲಕ ಕಾನ್‌ಸ್ಟಿಟ್ಯೂಶನ್ ಹಿಲ್ ಮತ್ತು ಬರ್ಡ್‌ಕೇಜ್ ವಾಕ್ ಮೂಲಕ ವೆಸ್ಟ್‌ಮಿನಿಸ್ಟರ್ ಅಬೆ ತಲುಪಿತ್ತು. ವಜ್ರವನ್ನು ಹಾರಿಸಿಕೊಂಡಾದ ಮೇಲೆ ಆ ಐವರು ಅದೇ ಕಾರಿನಲ್ಲಿ ವೆಸ್ಟ್ ಮಿನಿಸ್ಟರ್ ಬ್ರಿಜ್ ದಾಟಿ ಲೋವರ್ ಥೇಮ್ಸ್ ಸ್ಟ್ರೀಟ್‌ನಲ್ಲಿ ಸಾಗಿ ಟಾವರ್ ಬ್ರಿಜ್ ಸೇರಿ ಅಲ್ಲಿಂದ ರಾದರ್‌ಹೈದ್ ತಲುಪಿದ್ದರು. ಉತ್ತರ ಲಂಡನ್ನಿನ ಹೈಬರಿ ಪ್ರದೇಶದಲ್ಲಿ ಕೆಲವು ದಿನ ವಜ್ರವನ್ನು ಅಡ ಗಿಸಿಟ್ಟ ಆ ಐವರು ನಂತರ ಅದನ್ನು ಗ್ಲಾಸ್ಗೋಗೆ ಸ್ಥಳಾಂತರಿಸಿದ್ದರು.

"ಯಾರು ಆ ಐವರು?"

"ಪಾಪದ ಹುಡುಗರು. ಇನ್ನೂ ಕಾಲೇಜು ಓದು ತ್ತಿರುವ ಹೈದರು. ಇದೊಂದು ಕುಚೇಷ್ಟೆ ಅಷ್ಟೆ. ಅವರೇನೂ ಕಸುಬಿನಿಂದ ಕಳ್ಳರಲ್ಲ. ಏನೋ ಯಾವುದರಿಂದಲೋ ಪ್ರೇರಿತರಾಗಿ ಅದರಲ್ಲಿ ತಮಗೆ ಯಶ ಸಿಕ್ಕೀತೇ ಎಂದು ಪ್ರಯತ್ನಕ್ಕಿಳಿ ದವರು. ಹೀಗಾಗಿ ನಿಮಗೆ ಅವರ ಬೆರಳು ಮುದ್ರೆ ಗಳನ್ನು ಗುರುತಿಸಲು ಸಾಧ್ಯವಾಗಲಿಲ್ಲ. ಯಾಕೆಂ ದರೆ ನಿಮಗೆ ದೊರೆತ ಬೆರಳು ಮುದ್ರೆಗಳು ನಿಮ್ಮ ದಾಖಲೆಗಳಲ್ಲಿ ಈ ಮೊದಲೆಂದೂ ಕಾಣಸ ಲ್ಪಟ್ಟಿಲ್ಲ. ತಿಂಗಳೊಪ್ಪತ್ತಿನಲ್ಲಿ 'ಸ್ಕೋನ್ ವಜ್ರ' ಸ್ವಸ್ಥಾನ ಸೇರುತ್ತದೆ." ಎಂದು ಹೇಳಿದ ಪೀಟರ್.

"ಸಾಕು. ಇಷ್ಟಾದರೆ ಸಾಕು. ಮುಂದಿನದನ್ನೆಲ್ಲ ನಾವು ನೋಡಿಕೊಳ್ಳುತ್ತೇವೆ ಬಿಡಿ." ಎಂದು ಸ್ಕಾಟ್‌ಲಂಡ್ ಯಾರ್ಡಿನ ಉಚ್ಚಾಧಿಕಾರಿ ಪೀಟರ್‌ನ ಕೈ ಕುಲುಕಿದ.

ಅಲ್ಲಿಂದ ಹಾಲಂಡಿಗೆ ಮರಳಿದ ಪೀಟರ್‌ಗೆ ಪತ್ರಿಕೆಗಳ ಮೂಲಕ 'ಸ್ಕೋನ್ ವಜ್ರ' ಸ್ವಸ್ಥಾನ ಸೇರಿದುದರ ಸುದ್ದಿ ಗೊತ್ತಾಯಿತೆ ಹೊರತು ಸ್ಕಾಟ್ ಲಂಡ್ ಯಾರ್ಡಿನವರು ಅದನ್ನು ತಿಳಿಸುವ ಸೌಜನ್ಯ ವನ್ನೂ ಮರೆತಿದ್ದರು.

★ ★ ★

ಕ್ರೊಯಿಕ್ಸ್. ಫ್ರಾನ್ಸಿನ ಒಂದು ಹಳ್ಳಿ. ಡೆಲ್‌ಬೆಕ್-ಡ್ಯುಪಾ ಆ ಹಳ್ಳಿಯ ಅತ್ಯಂತ ಶ್ರೀಮಂತ ಕುಟುಂಬ. ಸುಪ್ರಸಿದ್ಧ ಬಟ್ಟೆಗಳ ತಯಾರಿಕೆ ಆ ಕುಟುಂಬದ ವೃತ್ತಿ. ಸುತ್ತಮುತ್ತ ಕೆಲವು ಫ್ಯಾಕ್ಟರಿಗಳು. ಕ್ರೊಯಿಕ್ಸ್‌ನಲ್ಲೊಂದು ದೊಡ್ಡ ಎಸ್ಟೇಟು. ಜತೆಗೆ ತೂಗಲಾರದಷ್ಟು ಚಿನ್ನ ಆ ಮನೆತನದ ಆಸ್ತಿ. ೧೯೩೯ರಲ್ಲಿ ಯುದ್ಧ ಘೋಷಿಸಲ್ಪಟ್ಟು, ಫ್ರಾನ್ಸ್ ಮೇಲೆ ಶತ್ರುಗಳು ಹಿಡಿತ ಸಾಧಿಸುವ ಮೊದಲು ಉಳಿದೆಲ್ಲ ಫ್ರೆಂಚ್ ಶ್ರೀಮಂತರಂತೆ ಡೆಲ್‌ಬೆಕ್-ಡ್ಯುಪಾ ಕುಟುಂಬ ದವರೂ ತಮ್ಮಲ್ಲಿದ್ದ ಚಿನ್ನವನ್ನೆಲ್ಲ ಸ್ವಂತದ ಎಸ್ಟೇಟಿ ನಲ್ಲಿ ಹೂತಿಟ್ಟುಬಿಟ್ಟರು. ಹಾಗೆ ಮಾಡದಿದ್ದರೆ ಜರ್ಮನರು ಅದನ್ನೂ ವಶಪಡಿಸಿಕೊಂಡು ಬಿಟ್ಟರೆ ಯುದ್ಧಾನಂತರದ ನಿರ್ಗತಿಕ ಸ್ಥಿತಿಯಲ್ಲಿ ಅನ್ನಾನ್ನ ಗತಿಕರಾಗಬೇಕಾದೀತೆಂಬ ಮುಂದಾಲೋಚನೆ ಅವರದು.

ಆತ ಬದುಕು ಮತ್ತು
ರೊಕ್ಕದ ಬಗ್ಗೆ ಗಂಭೀರ
ಚಿಂತನೆಯಲ್ಲಿದ್ದಾನೆ.
ಯಾಕೆಂದರೆ ಅವೆರಡೂ
ಮುಗಿಯುತ್ತ ಬಂದಿವೆ.

● ಮಾರಪ್ಪನ್

ಅಲ್ಲದೆ ೧೯೩೬ರಿಂದ ೧೯೪೮ರವರೆಗಿನ ಅವಧಿಯಲ್ಲಿ ಚಿನ್ನವನ್ನಿಟ್ಟುಕೊಳ್ಳುವುದೊಂದು ಶಿಕ್ಷಾರ್ಹ ಅಪರಾಧವೆಂದೂ ಸಾರಲ್ಪಟ್ಟಿತು. ಹಾಗೆ ಯಾರಾದರೂ ಚಿನ್ನವನ್ನು ಮನೆಯಲ್ಲಿ ಬಚ್ಚಿಟ್ಟು ಕೊಂಡದ್ದು ಸಾಬೀತಾದರೆ ಆ ಚಿನ್ನವನ್ನು ಸರಕಾರ ಮುಟ್ಟುಗೋಲು ಹಾಕಿಕೊಳ್ಳುವುದರೊಂದಿಗೆ ಆ ಕುಟುಂಬ ಕೋರ್ಟು-ಪೊಲೀಸು ಎಂದು ಅಲೆಯ ಬೇಕಾಗಿತ್ತು. ೧೯೫೯ರಲ್ಲಿ ಅಂದಿನ ಹಣಕಾಸು ಮಂತ್ರಿ ಆ್ಯಂಟೊಯಿನೆ ಪಿನೇಯವರು ಚಿನ್ನ ಹೂತಿಟ್ಟವರ ಪಾಲಿನ ದೇವತೆಯೆನಿಸಿದರು. ಅವರು ತಂದ ಸುಧಾರಣೆಯಿಂದಾಗಿ ಹೊಲ-ಮನೆ- ತೋಟಗಳಲ್ಲಿ ಬಂಗಾರ ಬಚ್ಚಿಟ್ಟುಕೊಂಡವರು ನಿರಾತಂಕವಾಗಿ ಅಲ್ಲಿಂದೆತ್ತಿ ತಮ್ಮ ಬಳಿ ಇಟ್ಟು ಕೊಳ್ಳಲು ಅನುಕೂಲವಾಯಿತು.

ಈ ನಡುವೆ ಡೆಲ್‌ಬೆಕ್-ಡ್ಯುಪಾ ಕುಟುಂಬದ ಯಜಮಾನ ಕಣ್ಣು ಮುಚ್ಚಿದ್ದ. ಆತನ ಪತ್ನಿಗೆ ತಾವೆಲ್ಲಿ ಚಿನ್ನ ಮುಚ್ಚಿಟ್ಟದ್ದೆವೆಂಬುದು ಗೊತ್ತಿತ್ತು. ಆಕೆ ಏಕಾಂಗಿಯಾಗಿ ಹಾರೆಯೊಂದಿಗೆ ಎಸ್ಟೇಟಿನಲ್ಲಿ

ಹೋದಳು. ಆ ಜಾಗದಲ್ಲಿ ಅಗೆದು ಪೆಟ್ಟಿಗೆಗಳನ್ನು ಹೊರಗೆ ತೆಗೆಯಲು ಮುಂದಾದಳು. ನೆಲದ ಆಳದಲ್ಲಿ ಎರಡು ಮೀಟರ್ ಅಗೆಯಬೇಕು.

ಅಗೆದು ನೋಡಿದರೆ ಅಲ್ಲೇನಿದೆ? ಬಹುಶಃ ತಪ್ಪು ಜಾಗದಲ್ಲಿ ತಗ್ಗು ತೋಡಿರಬೇಕೆಂದುಕೊಂಡು ಬೇರೊಂದೆಡೆ ನೆಲ ಅಗೆದಳು. ಅಲ್ಲಿಯೂ ಬರಿ ಮಣ್ಣು! ಮತ್ತೊಂದು ಕಡೆಯೂ ಇದೇ ರೀತಿ ಆದಾಗ ಶ್ರೀಮತಿ ಡ್ಯುಪಾ ತನ್ನ ಮಕ್ಕಳನ್ನು ಕರೆದಳು. ಅಪ್ಪ-ಅಮ್ಮ ಇಬ್ಬರೂ ಸೇರಿ ೧೩ ವರ್ಷದ ಹಿಂದೆ ಚಿನ್ನ ತುಂಬಿದ ಪೆಟ್ಟಿಗೆಗಳನ್ನು ನೆಲದಡಿ ಬಚ್ಚಿಟ್ಟ ಸಂದರ್ಭದಲ್ಲಿ ಅವರೆಲ್ಲ ಅಲ್ಲಿ ಹಾಜರಿದ್ದರು.

ಮಕ್ಕಳೂ ಅಗೆದರು, ಮಣ್ಣು-ಕಲ್ಲುಗಳನ್ನು ತೆಗೆದರು. ಆದರೆ ಚಿನ್ನದ ಪೆಟ್ಟಿಗೆಗಳು ಮಾತ್ರ ಕೈ ಹತ್ತಲಿಲ್ಲ. ಅಲ್ಲಲ್ಲಿ ತೆಂಗಿನ ಸಸಿ ನೆಡಲು ತಗ್ಗು ತೋಡಿದ್ದಾರೇನೋ ಎಂಬ ಭಾಸ ಹುಟ್ಟಿಸುವ ಹಾಗೆ ಹತ್ತಾರು ಕಡೆ ಗುದ್ದುಗಳು.... ಶ್ರೀಮತಿ ಡ್ಯುಪಾ ಕಂಗಾಲಾಗಿ ಕುಸಿದಳು. "ಅಯ್ಯೋ.. ನನ್ನ ಜೀವವನ್ನು ಆದಾರೋ ಇಲ್ಲಿಂದ ಅಪಹರಿಸಿದ್ದಾರೆ... ಇಲ್ಲಿ ನಮಗೆ ಸಿಕ್ಕ ಮಣ್ಣು ಅಂಥವರ ಬಾಯಿಗೆ ಬೀಳಾ...." ಎಂದೆಲ್ಲ ಶಪಿಸುತ್ತ ಎದೆ ಎದೆ ಬಡಿದುಕೊಂಡಳು.

ಮನೆಯ ಮಂದಿಯೆಲ್ಲ ಒಂದೆಡೆ ಕಲೆತರು. ಇದನ್ನು ಬೊಬ್ಬಾಟ ಮಾಡಿದಷ್ಟೂ ತಮಗೇ ತೊಂದರೆ. ಪೊಲೀಸರಿಗೂ ದೂರು ಕೊಡುವಂತಿಲ್ಲ. ಹಾಗೆ ಮಾಡುವುದು ಹಾದಿಯ ದೆವ್ವವನ್ನು ಮನೆಯೊಳಗೆ ಬಾ ಎಂದಂತೆ. ಚಿನ್ನಗಳ್ಳರನ್ನು ಹುಡುಕಲೇಬೇಕು. ಆದರೆ ಅದನ್ನು ಸುಲಭವೆ?

ಆ ಕುಟುಂಬಕ್ಕೆ ಪೀಟರ್ ಹುರ್‌ಕೋಸ್ ನೆನಪಿಗೆ ಬಂದ. ಆತನ ಅದ್ಭುತ ಶಕ್ತಿಯ ಕುರಿತು ಅದಾಗಲೇ ಓದಿ ತಿಳಿದಿದ್ದರಲ್ಲ. ಆತನನ್ನು ಕಾಣಲು ತಾಯಿ-ಮಕ್ಕಳು ಪ್ಯಾರಿಸ್ಸಿಗೆ ಬಂದರು. ಎಲ್ಲ ವಿವರಿಸಿದರು.

"ತವರದ ಎರಡು ಪೆಟ್ಟಿಗೆಗಳಲ್ಲಿ ಒಟ್ಟು ೧೭ ಚಿನ್ನದ ಬಿಸ್ಕತ್ತುಗಳು ಹಾಗೂ ನಾಣ್ಯಗಳನ್ನು ಎಲ್ಲರ ಸಮಕ್ಷಮ ಇಟ್ಟು ಸೀಲ್‌ಮಾಡಿ ಹೂತಿಟ್ಟೆವು. ಆದೆಲ್ಲದರ ಅಂದಿನ ಬೆಲೆ ಒಂದು ಕೋಟಿ ಹತ್ತು ಲಕ್ಷ ಫ್ರಾಂಕ್‌ಗಳಷ್ಟು. ಈಗಿನ ಬೆಲೆ ಅದರ ನಾಲ್ಕು ಪಟ್ಟು ಹೆಚ್ಚಾಗಿದೆ ಎಂಬುದು ಗೊತ್ತಲ್ಲ. ದಯವಿಟ್ಟು ಕ್ರೊಯಿಕ್ಸ್‌ಗೆ ಬನ್ನಿ. ನಿಮ್ಮ ಎಲ್ಲ ವೆಚ್ಚವನ್ನೂ ಭರಿಸುತ್ತೇವೆ. ಜತೆಗೆ ಪೆಟ್ಟಿಗೆಗಳನ್ನು ಪತ್ತೆ ಹಚ್ಚಿಕೊಟ್ಟರೆ ಅದರ ಮೌಲ್ಯದ ಶೇಕಡಾ ೧೫ರಷ್ಟನ್ನು ನಿಮಗೆ ಬಕ್ಷೀಸಾಗಿ ಕೊಡುತ್ತೇವೆ." ಶ್ರೀಮತಿ ಡ್ಯುಪಾ ವಿನಂತಿಸಿಕೊಂಡಳು.

"ಹದಿನೈದು ಪರ್ಸೆಂಟ್! ನಿಜಕ್ಕೂ?" ಪೀಟರ್ ಹುಬ್ಬೇರಿಸಿದ.

"ಹೌದು. ಈ ಶಿಲುಬೆಯಾಣೆ." ಎಂದು ಮುದುಕಿ ಕೊರಳಲ್ಲಿನ ಕ್ರಾಸು ಮುಟ್ಟಿಕೊಂಡಳು.

ಪೀಟರ್ ಕೇಸು ಕೈಗೆತ್ತಿಕೊಂಡ.

ಪ್ಯಾರಿಸ್‌ನಿಂದ ೩೦೦ ಮೈಲು ದೂರದ ಕ್ರೊಯಿಕ್ಸ್‌ಗೆ ಮಾರಿಯಾಳೊಂದಿಗೆ ಬಂದಿಳಿದ ಪೀಟರ್. ಎಸ್ಟೇಟಿನಲ್ಲಿ ಕಾಲಿರಿಸುತ್ತಿದ್ದ ಹಾಗೆಯೇ ಬೇಲಿಯೇ ಹೊಲ ಮೇದದ್ದು ಅವನ ಗಮನಕ್ಕೆ ಬಂತು.

"ನನ್ನ ಹದಿನೈದು ಪರ್ಸೆಂಟ್ ಬಕ್ಷೀಸು ಗ್ಯಾರಂಟಿ!"

ಪೀಟರ್‌ನ ಮಾತು ಕೇಳಿ ಶ್ರೀಮತಿ ಡ್ಯುಪಾಳ ಮುಖ ಎಷ್ಟೋ ದಿನಗಳ ನಂತರ ಮೊದಲ ಬಾರಿಗೆ ಗೆಲುವಾಯಿತು.

ಇಂಥ ಪ್ರಕರಣಗಳಲ್ಲಿ ಗೊತ್ತುಬಲ್ಲವರೇ ಹೊತ್ತು ಕಾದು ಕತ್ತು ಕುಯ್ಯುವ ಕೆಲಸ ಮಾಡಿರುತ್ತಾರೆಂಬುದು ಯಾರು ಬೇಕಾದರೂ ಹೇಳಿಬಿಡಬಹುದೆಂಬುದು ಪೀಟರ್ ಕಂಡುಕೊಂಡ ಸತ್ಯ. ತನ್ನ ಸ್ಪರ್ಶ ಪರೀಕ್ಷೆಯಿಂದಾಗಿ ಆತ ಈ ಪ್ರಕರಣದಲ್ಲಿ ಕಳ್ಳರನ್ನು 'ಕಂಡುಕೊಂಡ.'

"ನಿಮ್ಮ ಎಸ್ಟೇಟಿನ ಮಾಲಿ ಎಲ್ಲಿ?"

"ಆತ ಕೆಲಸ ಬಿಟ್ಟು ಬೇರೆಡೆ ಹೋಗಿದ್ದಾನೆ."

"ಆತ ಎಲ್ಲಿದ್ದಾನೆಂಬುದು ಗೊತ್ತೆ?"

"ಗೊತ್ತು. ತುಂಬ ನಂಬಿಗಸ್ಥ. ನನ್ನೆಜಮಾನರು ಕಣ್ಣುಮುಚ್ಚಿದ ಮೇಲೆ 'ಅವರಿರದ ಜಾಗದಲ್ಲಿ ಕೆಲಸ ಮಾಡಲು ಮನಸ್ಸೊಪ್ಪುತ್ತಿಲ್ಲ,' ಎಂದು ಹೇಳಿ ಕೆಲಸಬಿಟ್ಟ. ಇಲ್ಲಿಂದ ಹತ್ತು ಮೈಲಿನಾಚೆಯ ಹಳ್ಳಿಯಲ್ಲಿ ಸ್ವಂತ ತೋಟ ಮಾಡಿಕೊಂಡಿದ್ದಾನೆ. ಆತನ ಮಗ ಲ್ಯುಸಿಯೆನ್ ನನ್ನ ಇನ್ನೊಬ್ಬ ಮಗನಂತೆಯೆ ಇಲ್ಲಿಯೇ ಬೆಳೆದವ."

"ಉಂಡ ಮನೆಗೆ ದ್ರೋಹ ಬಗೆದಿದ್ದಾರೆ ಈ ತಂದೆ-ಮಗ. ಕಾಳಜಿ ಮಾಡಬೇಡಿ. ನಿಮ್ಮ ಸಂಪತ್ತನ್ನು ನಿಮಗೆ ದೊರಕಿಸಿಕೊಡುತ್ತೇನೆ," ಎಂದ ಪೀಟರ್.

ಶ್ರೀಮತಿ ಡ್ಯುಪಾಳದು ಈ ಮಾತನ್ನು ನಂಬಬೇಕೋ ಬಿಡಬೇಕೋ ಎಂಬ ಸ್ಥಿತಿ. ಆಕೆ ಮತ್ತೆ ಕ್ಷೋಭೆಗೀಡಾದಳು.

ಜೆರಾರ್ಡ್ ಡರ್ನೆಜ್‌ನ ತೋಟ-ಮನೆಯನ್ನು ದೂರದಿಂದಲೇ ನೋಡಿ ಬಂದ ಪೀಟರ್ ಆತನನ್ನು ಬಲೆಗೆ ಕೆಡವುವುದು ಹೇಗೆಂದು ಯೋಚಿಸತೊಡಗಿದ. ಹಿಂದೆ ತಾನು ತೋಟಗಾರಿಕೆಯಲ್ಲಿಯೂ ದುಡಿದ ಅನುಭವ ಆತನ ನೆರವಿಗೆ ಬಂತು.

"ನಾನೊಬ್ಬ ಮಣ್ಣು ಪರೀಕ್ಷಕ. ಯಾವ ನೆಲದಲ್ಲಿ ಎಂಥ ಬೆಳೆ ಬೆಳೆದರೆ ಲಾಭದಾಯಕ ಎಂಬುದನ್ನೂ ಹೇಳಬಲ್ಲೆ. ಪ್ಯಾರಿಸ್ಸಿನಿಂದ ಬಂದಿದ್ದೇನೆ. ಹೀಗೆ ಹಳ್ಳಿ ಹಳ್ಳಿ ತಿರುಗಿ ನಿಮ್ಮಂಥವರಿಗೆ ನೆರವಾಗುವುದೇ ನನ್ನ ಕಸಬು."

"ಹೌದಾ! ತುಂಬ ಸಂತೋಷ. ಬನ್ನಿ. ಮಗಾ... ಲ್ಯುಸಿಯೆನ್. ಸಾಹೇಬರಿಗೆ ಮೊದಲು ಸ್ವಲ್ಪ ಟೀ-ಗೀ ವ್ಯವಸ್ಥೆ ಮಾಡಪ್ಪಾ," ಜೆರಾರ್ಡ್ ತುಂಬ ಸಂಭ್ರಮಪಟ್ಟುಕೊಂಡ.

ಒಂದಷ್ಟು ಹೊತ್ತಿನ ಮಾತುಕತೆ-ಚಹಾಪಾನದ ನಂತರ ಪೀಟರ್, "ಇನ್ನು ನಿಮ್ಮ ತೋಟದಲ್ಲಿ ತಿರುಗಾಡೋಣವೆ?" ಎಂದು ಕೇಳಿದ.

ಡರ್ನೆಜ್ ತೋಟದಲ್ಲೆಲ್ಲ ಪೀಟರ್‌ನೊಂದಿಗೆ ಹೆಜ್ಜೆ ಹಾಕಿದ. ಆತನ ಪ್ರಶ್ನೆಗಳಿಗೆಲ್ಲ ಉತ್ತರಿಸಿದ. ಒಂದೆಡೆಯ ಮಣ್ಣು ಪರೀಕ್ಷೆಗೆ ಪೀಟರ್ ಮುಂದಾದಾಗ ಮಾತ್ರ ಮುದುಕ ತತ್ತರಿಸಿದ, ಆದರೆ ಅದನ್ನು ತೋರಗೊಡದಿರಲು ಯತ್ನಿಸಿದ.

"ಈ ಜಾಗದ ಮಣ್ಣು ತುಂಬ ಫಲವತ್ತಾಗಿದೆ. ಇಲ್ಲಿ ನೀವು ಅರ್ಧ ಎಕರೆ ಟ್ಯುಲಿಪ್ ಬೆಳೆಯುವುದು ಒಳ್ಳೆಯದು."

ಪೀಟರ್‌ನ ಸಲಹೆ ಆ ಮುದುಕನ ಕಿವಿಯನ್ನು ಹೋಗಲೇ ಇಲ್ಲ. ಆತನ ಲಕ್ಷ್ಯ ಬೇರೆಡೆಯೇ ಇತ್ತು. ಆದರೆ ಪೀಟರ್‌ಗೆ ಅದೇ ಜಾಗದಲ್ಲಿ ಮೂರು ಅಡಿ ಆಳಕ್ಕೆ ಚಿನ್ನದ ಪೆಟ್ಟಿಗೆಗಳು ಹೂತಿಡಲ್ಪಟ್ಟಿವೆಯೆಂಬುದು ತಿಳಿದು ಹೋಗಿತ್ತು.

"ಮತ್ತೆ ಬರುತ್ತೇನೆ" ಎಂದು ಮುದುಕನಿಂದ ಬೀಳ್ಕೊಂಡು ಹೊರಟ ಪೀಟರ್ ಶ್ರೀಮತಿ ಡ್ಯುಪಾಗೆ ಸಂಗತಿಯನ್ನು ತಿಳಿಸಿದ. ಪೊಲೀಸರ ನೆರವು ಕೋರಲಾಯಿತು. ಡರ್ನೆಜ್‌ನ ತೋಟದ ಮೇಲೆ ದಾಳಿ ಮಾಡಿದ ಪೊಲೀಸರು ಆತನನ್ನು ಚಿನ್ನ ಕದ್ದು ಅಡಗಿಸಿಟ್ಟ ಮತ್ತು ನಂಬಿಕೆದ್ರೋಹದ ಆಪಾದನೆಯ ಮೇಲೆ ಬಂಧಿಸಿದರಲ್ಲದೆ ಮುದ್ದೆ ಮಾಲು ಸಮೇತ ಆತನನ್ನೂ ಆತನ ಮಗನನ್ನೂ ಠಾಣ್ಯಕ್ಕೆ ಎಳೆದೊಯ್ದರು.

ಆದರೆ ಶ್ರೀಮತಿ ಡ್ಯುಪಾ ಮಾತು ಉಳಿಸಿಕೊಳ್ಳಲಿಲ್ಲ. ೧೫ ಪರ್ಸೆಂಟ್ ಎಂದರೆಷ್ಟೆಂದು ಲೆಕ್ಕ ಹಾಕಿದ ಆಕೆಯಲ್ಲಿ, ಅಷ್ಟೊಂದು ದೊಡ್ಡ ಮೊತ್ತವನ್ನು ಸುಮ್ಮನೇ ಈ ಜುಜುಬಿ ಜಾದೂಗಾರನ ಕೈಗೆ ಹಾಕುವುದ್ಯಾಕೆ ಎಂಬ ಸ್ವಾರ್ಥ ತಲೆಯೆತ್ತಿತು. ಆಕೆಯ ಮನದ ಇಂಗಿತವನ್ನು ಅರಿತ ಪೀಟರ್ "ದೇವರು ಒಳ್ಳೆಯದು ಮಾಡಲಿ" ಎಂದು ಪ್ಯಾರಿಸ್ಸಿನ ಹಾದಿ ಹಿಡಿದ.

ಮುಂದೊಂದು ದಿನ ಪತ್ರಿಕೆಗಳಲ್ಲಿ ಫ್ರೆಂಚ್ ಸರಕಾರ ಡೆಲ್‌ಬೆಕ್ ಡ್ಯುಪಾ ಕುಟುಂಬದ ಆಸ್ತಿಯು ಮಿತಿಗಿಂತ ಹೆಚ್ಚಿಗಿದೆಯೆಂದೂ, ಸುಳ್ಳು ಲೆಕ್ಕ ತೋರಿಸಿದ ಕಾರಣ ಆ ಕುಟುಂಬ ನ್ಯಾಯಾಲಯಕ್ಕೆ ಎಡತಾಕುತ್ತಿದೆಯೆಂದೂ, ಆ ಚಿನ್ನದಲ್ಲಿ ಅರ್ಧದಷ್ಟನ್ನು ಮುಟ್ಟುಗೋಲು ಹಾಕಿಕೊಂಡಿರುವುದಾಗಿಯೂ ಸುದ್ದಿ ಓದಿ ಪೀಟರ್, "ಪಾಪ." ಎಂದಷ್ಟೇ ಉದ್ಗರಿಸಿದ.

(ಮುಂದಿನ ಸಂಚಿಕೆ ನೋಡಿ)

## ಕೇಶಾಯಣ

ತಲೆಗೂದಲಾಗಲಿ ಮುಖದ ಮೇಲಿನ ಕೂದಲಾಗಲಿ ಒಂದೇ ಸಮನಾಗಿ ಬೆಳೆಯುತ್ತದೆಂದು ನೀವು ಭಾವಿಸಿದ್ದರೆ ಅದು ತಪ್ಪು. ರಾತ್ರಿಗಿಂತ ಹಗಲಲ್ಲಿ ಅದರ ಬೆಳವಣಿಗೆ ಹೆಚ್ಚು. ಹಾಗೆಯೆ ಬೇಸಿಗೆಯಲ್ಲಿ ಬೆಳೆಯುವಷ್ಟು ತೀವ್ರವಾಗಿ ಅದು ಚಳಿಗಾಲದಲ್ಲಿ ಬೆಳೆಯುವುದಿಲ್ಲ. ಅತಿ ಹೆಚ್ಚೆಂದರೆ ಅದು ಒಂದು ವರ್ಷದಲ್ಲಿ ಒಂಬತ್ತು ಇಂಚಿನಷ್ಟು ಬೆಳೆದೀತು ಅಷ್ಟೆ.

# ಮಾತು ಮಾಣಿಕ್ಯ

೧೬

# ಉದರ ನಿಮಿತ್ತಂ.... !

ಹೂವಿನ ಚೆಲ್ವಿಕೆಗೆ ಮನಸೋಲದವರಾರು ? ಕವಿವರ ಕರ್ಕಿ ಅವರ ರಸಿಕ ಹೃದಯದ ಅನಿಸಿಕೆ; "ಒಂದರೊಲು ಒಂದಿಲ್ಲ; ಒಂದರೊಳು ಕುಂದಿಲ್ಲ" ಎಂಬುದು ಮುತ್ತಿನಂತಹ ಮಾತು. ನಮ್ಮ ವಿಶಾಲ ವಿಶ್ವದಲ್ಲಿನ ಒಂದೊಂದು ಸಚೇತನ-ಅಚೇತನಕ್ಕೂ ಇದು ಅನ್ವಯ. ಆ ಕರ್ತಾರನ ಚಿಂತನಪೂರ್ವಕ ಸೃಜನವೆನಿಸಿದ ಇಲ್ಲಿನ ಎಲ್ಲದರಲ್ಲಿಯೂ ಒಂದು ಬಗೆಯ ಸೊಬಗು, ಒಂದು ಪರಿಯ ಸ್ವಾರಸ್ಯ. ಎಂದಮೇಲೆ ಮೇಲು ಕೀಳು ಎಂಬುದಕ್ಕೆ ಎಡೆ ಎಲ್ಲಿ ? ಇಂಥ ಸೃಷ್ಟಿಯನ್ನು ಸರಿಯಾಗಿ, ಸಮಗ್ರವಾಗಿ ಸಮೀಕ್ಷಿಸಿ ಅರಿತುಕೊಳ್ಳುವ ಸಮ್ಯಗ್ ದೃಷ್ಟಿ ಬೇಕು ಅಷ್ಟೇ. ಮಧುರ ಸ್ವರಕ್ಕೆ ಕೋಗಿಲೆ, ಗಾಂಭೀರ್ಯಕ್ಕೆ ಸಿಂಹ, ಬೆಡಗಿನ ನಡಿಗೆಗೆ ಹಂಸಪಕ್ಷಿ, ಚಂಚಲ ಚಕ್ಷುವಿಗೆ ಚಿಗರೆ ಪ್ರತೀಕವಾಗಿರುವಂತೆ, ಹಸಿವೆಗಾಗಿ ತೋಳವು ಪ್ರಸಿದ್ಧ. ಭೀಮಸೇನನಿಗೆ ಇನ್ನೊಂದು ಹೆಸರು ವೃಕೋದರ. ಎಂದರೆ ತೋಳದ ಹೊಟ್ಟೆಯವನೆಂದೇ ಪ್ರಖ್ಯಾತ. ಆಂಗ್ಲರ ಹಾಗೂ ಭಾರತೀಯರ ನಡವಳಿಕೆಗಳಲ್ಲಿ ಸಾಕಷ್ಟು ಭಿನ್ನತೆ ಕಂಡರೂ ತೋಳದ ವಿಷಯದಲ್ಲಿ ಮಾತ್ರ ಉಭಯತರರದೂ ಏಕಾಭಿಪ್ರಾಯ. "ತೋಳವನ್ನು ಬಾಗಿಲಿನಿಂದಾಚೆಗೆ ದೂರವಿಡು" ಎಂಬ ಪಡೆನುಡಿಯ ಅರ್ಥ ಹಸಿವೆಯ ಬಾಧೆಯಿಂದ ದೂರವಿರು ಎಂಬುದೇ ಆಗಿದೆ.

ಜಠರಾಗ್ನಿಯನ್ನು ತೃಪ್ತಿಗೊಳಿಸಲು ಹೊಟ್ಟೆಹೊರೆದುಕೊಳ್ಳುವ ಒಂದಿಲ್ಲೊಂದು ಹಂಚಿಕೆ ಅತ್ಯಗತ್ಯ. ಮೈಮುರಿದು ಮನಮುಟ್ಟಿ ಕೈಕಾಲುಗಳಿಗೆ ಕೆಲಸ ಒದಗಿಸಿ ಹೊಟ್ಟೆತುಂಬಿಕೊಳ್ಳುವುದು ಸಾದಾಸೀದಾ ವಿಧಾನ. ಆದರೆ ಇದು ಎಲ್ಲರಿಗೂ ಹೇಳಿದುದಲ್ಲ. ಮೈಗಳ್ಳರು ಹೂಡುವ ಆಟವೇ ಬೇರೆ. ತಿರುಪೆಗೆ ಶರಣು ಹೋಗುವವರು ಕೆಲವರು, ಕಳುವಿನ ದಾರಿಗಿಳಿಯುವವರು ಇತರರು; ಕೊಲೆ ಸುಲಿಗೆಗೆ ಹೇಸದವರು ಬೇರೆಯವರು; ದೇಹ ವಿಕ್ರಯದಂತಹ ಹೀನವೃತ್ತಿಗೆ ಮೊರೆಹೋಗುವವರು ಇನ್ನು ಹಲವರು. ಇವೆಲ್ಲ ಒಂದು ಬಗೆಯಾದರೆ, ಕರಡಿ ಕುಣಿಸುವವ, ಮಂಗನಾಟ ನಡೆಸುವವ, ಹಾವಾಡಿಗ ಎಂದು ಮೊದಲಾದ ಕಸಬು ಕೈಕೊಳ್ಳುವುದು ಕೂಡ ಹೊಟ್ಟೆಗಾಗಿಯೇ !

ಸಮಾಜ ಸೇವೆಯ ಸೋಗು ತಳೆಯುವುದು, ಸಂನ್ಯಾಸ ಸ್ವೀಕರಿಸಿದರೂ ತಲೆಗೆ ಕಿರೀಟ ತೊಡಿಸಿ; ಸಿಂಹಾಸನದಲ್ಲಿ ಅಟ್ಟಹಾಸದಿಂದ ಮೆರೆಯುವುದು- ಇಂಥವು ಕೂಡ "ಉದರ ನಿಮಿತ್ತಂ ಬಹುಕೃತಃ ವೇಷಃ" ಎಂಬ ಉಕ್ತಿಯನ್ನೇ ಪುಷ್ಟೀಕರಿಸುವಂಥವು. ತೀರ್ಥ ಕ್ಷೇತ್ರಗಳಲ್ಲಿ ಸ್ನಾನಾದಿ ಕರ್ಮಾಚಾರ, ಬಾಯಿತುಂಬ ಮಂತ್ರೋಚ್ಚಾರ, ಕಂಚಿನ ಪ್ರತಿಮೆಗಳಿಗೆ ಸಲ್ಲಿಸುವ ಪೂಜಾದಿಗಳ ಆಡಂಬರ- ಇವು ಕೂಡ "ಪದುಮನಾಭನಲಿ ಲೇಶಭಕುತಿ ಇಲ್ಲ"ದವರು ಮೆರೆಯುವ "ಉದರ ವೈರಾಗ್ಯ" ಎಂಬ ದಾಸರ ಮೂದಲಿಕೆ ಅತ್ಯಂತ ಮರ್ಮಭೇದಿ.

ಜಠರಾಗ್ನಿ ಅಷ್ಟೊಂದು ಜಾಗೃತವಿರದೆ ಅಗ್ನಿಮಾಂದ್ಯದಿಂದ ಬಳಲುವವರು ಕೆಲವರು. "ಹಸಿವೆ ಯಾಗಲೆಂದು ಬೆಳಿಗ್ಗೆ ಒಂದು ಗುಳಿಗೆ, ಉಂಡದ್ದು ಅರಗಲೆಂದು ನಡುಹಗಲಿನಲ್ಲಿ ಇನ್ನೊಂದು ಗುಳಿಗೆ, ತುಂಬಿದ ಹೊಟ್ಟೆ ಬೆಳಗಾಗುತ್ತಲೆ ಸಲೀಸಾಗಿ ತೆರವಾಗಲೆಂದು ಮಲಗುವ ಮುನ್ನ ಮತ್ತೊಂದು ಗುಳಿಗೆ" ಸೇವಿಸುವ ಗುಳಿಗೆಯ ನಂಟರು ಈ ಬಂಟರು ! ಮಾತ್ರೆಗಳ ಬಲದಿಂದಲೆ ಇವರು ಬದುಕಲು ಪಾತ್ರರು !! ಮಾತ್ರೆ ನಿಲ್ಲಿಸಿದ ಮರುಚಣವೆ ಇಂಥವರಿಗೆ ಕೈಲಾಸ ಯಾತ್ರೆ !!!

## ● ಪ್ರೊ. ಶ್ರೀನಿವಾಸ ತೋಫಖಾನೆ

ಕಮ್ಮಾರನ ಕುಲುಮೆಯಲ್ಲಿ ಕಬ್ಬಿಣ ಕಾಯುವಂತ ಉಂಡ ಅನ್ನ ಹೊಟ್ಟೆಯೊಳಗಣ ಬೆಂಕಿಯಲ್ಲಿ ಕಾದು ಕಾದು ರಕ್ತವಾಗುತ್ತದೆ. ಉರಿಯುವುದು ಬೆಂಕಿಯ ಗುಣ. ಒಮ್ಮೊಮ್ಮೆ ಆಹಾರದ ಬದಲು ಹೆರವರ ಉತ್ಕರ್ಷವನ್ನು ಕಂಡು ಅದು ಉರಿಯತೊಡಗುತ್ತದೆ. ಇದುವೆ ಹೊಟ್ಟೆಕಿಚ್ಚು. ವೀರಾಧಿವೀರರಾದ ಭೀಮಾರ್ಜುನರು ಇತರ ರಾಜರನ್ನು ಜಯಿಸಿ ಸಂಪಾದಿಸಿ, ಸಂಗ್ರಹಿಸಿದ ಹೇರಳವಾದ ಐಸಿರಿಯನ್ನು ರಾಜಸೂಯ ಯಾಗದ ಪ್ರಸಂಗದಲ್ಲಿ ಕಣ್ಣಾರೆ ಕಂಡ ಕೌರವನ ಹೊಟ್ಟೆಯುರಿ ಧಗಧಗನೆ ಉರಿಯತೊಡಗಿತು. ತನ್ನ ಹೊಟ್ಟೆಯಲ್ಲಿ ಭುಗಿಲೆದ್ದ ಇಂಥ ಕಿಚ್ಚನ್ನು ಆತ ತನ್ನ ಉಡಿಯಲ್ಲಿ ತಾನಾಗಿಯೇ ತನ್ನ ಕೈಯಿಂದ ಹಾಕಿಕೊಂಡ. ಅಂಥ ಕಿಚ್ಚು ಪಾಂಡವರನ್ನು ಸುಡುವ ಬದಲು ಪರಿವಾರ ಸಮೇತ ಆತನನ್ನೇ ಸುಟ್ಟು ಬೂದಿ ಮಾಡಿತು. ಹೊಟ್ಟೆಕಿಚ್ಚು ತರುವ ಅನರ್ಥವನ್ನು ಎತ್ತಿ ತೋರಿಸಲು ಈ ಘಟನೆ ಸಾಕಲ್ಲವೆ?

ಇಪ್ಪತ್ತೊಂದು ಮೋದಕ ಸೇವಿಸುವಲ್ಲಿ ಕೀರ್ತಿವೆತ್ತ ಗಣಪತಿ ಲಂಬೋದರ ಎಂದು ಪ್ರಖ್ಯಾತನಾಗಿದ್ದಾನೆ. ನಗಾರಿಯಂಥ ಹೊಟ್ಟೆಯವರು, ಡೊಳ್ಳು ಹೊಟ್ಟೆಯವರು, ಕುಂಭೋದರರು ಅನೇಕರು. ಮೇಲುಪ್ಪರಿಗೆ ಮನೆಯಲ್ಲಿ, ಸುಪ್ಪತ್ತಿಗೆಯ ಮೇಲೆಯೇ ಮೂರೊಪ್ಪತ್ತು ಮಲಗಿ, ಹಿಂದಿನ ತಲೆಮಾರಿನವರು ಕೂಡಿಟ್ಟ ಕೊಪ್ಪರಿಗೆ ಹೊನ್ನನ್ನು ಕರಗಿಸಲು ಹೊರಟವರು ಇವರು. ಇದಕ್ಕೆ ವಿರುದ್ಧವಾದುದು ಪುರುಷಸಿಂಹರೆನಿಸುವವರ ಆಕಾರ. ಶೌರ್ಯ- ಗಾಂಭೀರ್ಯಗಳಿಗೆ, ಓಜಸ್ಸು ಸಾಹಸಗಳಿಗೆ ಹೆಸರಾದ ವನರಾಜ ಸಿಂಹನಂತೆ ಇವರದು ಹರವಾದ ಎದೆ, ತೆಳ್ಳನೆಯ ಸೊಂಟ. ಭಗವಂತನ ಅವತಾರವಾದ ನರಸಿಂಹ ಆಕೃತಿಯಲ್ಲಿ ಅರ್ಧನರ, ಅರ್ಧಸಿಂಹವಾಗಿದ್ದು ಆತನು ಕೂಡ ದುರುಳ ರಕ್ಕಸನ ಹೊಟ್ಟೆಯನ್ನು ಕರುಳ ಮಾಲೆಯನ್ನು ತನ್ನ ಕೊರಳಗಿರಿಸಿ, ಸಿಂಹವಿಕ್ರಮವನ್ನು ಮೆರೆದುದು ಎಲ್ಲರಿಗೂ ಸುಪರಿಚಿತ.

ವಿಶ್ವಸುಂದರಿ-ಭಾರತ ಸುಂದರಿ ಮೊದಲಾದ ಸೌಂದರ್ಯ ಸ್ಪರ್ಧೆಗಳಲ್ಲಿಯ ಚೆಲುವೆಯರೆಲ್ಲ ಕೃಶೋದರಿಯರು, ತಲೋದರಿಯರು. ಎಂದರೆ ತೆಳ್ಳನೆಯ ಹೊಟ್ಟೆಯವರು. ಸೊಂಟದ ಅಳತೆಯ ದೃಷ್ಟಿಯಿಂದ ಇವರೆಲ್ಲ "ಪಾಣಿಮಿತ"ರು. ಒಂದು ಕೈಯ ಹೆಬ್ಬೆರಳನ್ನು ಇನ್ನೊಂದು ಕೈಯ ಹೆಬ್ಬೆರಳಿಗೆ ಸೇರಿಸಿ, ನಡುಬೆರಳುಗಳನ್ನು ಒಂದಕ್ಕೊಂದು ಕೂಡಿಸಿ ಹಿಗ್ಗಿಸಿದರೆ ಉಂಟಾಗುವ ವರ್ತುಳದ ಗಾತ್ರ ಇಂಥವರ ಸೊಂಟದ್ದು ಎಂದು ಇದರ ಅರ್ಥ. ಇವರೆಲ್ಲ ಮಿತಾಹಾರ ನಿಯಮಕ್ಕೆ ಅಂಟಿಕೊಂಡವರಿರಬೇಕು. ಸಾಮ್ಯವಾದಿಗಳ ದೃಷ್ಟಿಯಲ್ಲಿ ಬಂಡವಾಳಶಾಹಿಗಳೆಲ್ಲ ದೊಡ್ಡ ಹೊಟ್ಟೆಯವರು ಎಂದರೆ ಅತಿಲಾಭಕೋರರು. ಇದಕ್ಕೆ ವಿಪರೀತವಾಗಿ ದೀನದಲಿತರ ಹೊಟ್ಟೆ ಬೆನ್ನಿಗೆ ತಗುಲಿ ಒಂದನ್ನು ಇನ್ನೊಂದರಿಂದ ವಿಂಗಡಿಸಲು ಬಾರದಂಥದು.

ಆಕಾರ ಮತ್ತು ಹಿರಿಮೆಯಲ್ಲಿ ವಿಸ್ತಾರವಾಗಿರುವಂತೆ, ಅರ್ಥದಲ್ಲಿಯೂ ಹೊಟ್ಟೆ ಅಷ್ಟೇ ವ್ಯಾಪಕ. ಹಸಿವೆಯಾದಾಗ ಹೊಟ್ಟೆ ಕರೆಯುತ್ತದೆ, ಡೊಂಬರಾಟ ಆರಂಭವಾಗುತ್ತದೆ, ಕಾಗೆ ಓಡಾಡುತ್ತವೆ ಎಂದು ಮೊದಲಾಗಿ ಬಣ್ಣಿಸುವ ರೂಢಿ. ಒಂದಗುಳ ಕಂಡರೆ ಬಳಗವನ್ನೆಲ್ಲ ಕರೆದು ಕೂಡಿಸುವ ಕಾಗೆ ಹಸಿವೆಯ ದ್ಯೋತಕ. ಅನ್ನದ ಪಿಂಡವನ್ನು, ಕೊಳೆತ ಮಾಂಸವನ್ನು, ಹಣ್ಣುಹಂಪಲನ್ನು ಸೇವಿಸಿ ಹಸಿವೆಯನ್ನು ಹಿಂಗಿಸಿಕೊಳ್ಳುವುದು ಅದರ ಹವ್ಯಾಸ. ಬಸುರಿ ಎಂಬುದರ ಬದಲು 'ಹೊಟ್ಟೇಲಿ ಇದ್ದವಳು' ಎನ್ನುತ್ತಾರೆ. ಸ್ತನಪಾನ ಎನ್ನುವ ಬದಲು 'ಹೊಟ್ಟೆಗೆ ಕೊಡು' ಎಂಬ ಪದಪ್ರಯೋಗ, ಉಪಕಾರ ಮಾಡಿದವರಿಗೆ ಒಳ್ಳೆಯದಾಗಲಿ ಎಂಬರ್ಥದಲ್ಲಿ 'ಹೊಟ್ಟೆ ತಣ್ಣಗಿರಲಿ' ಎಂಬ ಮಾತು, ಜೀವನೋಪಾಯದ ಅರ್ಥದಲ್ಲಿ "ಬೆನ್ನಿಗೆ ಹೊಡೆಯಿರಿ, ಹೊಟ್ಟೆಯ ಮೇಲೆ ಹೊಡೆಯಬೇಡಿರಿ" ಎನ್ನುವ ಪ್ರಾರ್ಥನೆ, ಕ್ಷಮೆಯನ್ನು ಯಾಚಿಸುವಲ್ಲಿ "ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಿ" ಎನ್ನುವ ಬಿನ್ನಹ- ಇಂಥ ಎಲ್ಲ ಉಕ್ತಿಗಳಲ್ಲಿ ಹೊಟ್ಟೆಯ ವೈವಿಧ್ಯಪೂರ್ಣ ಅರ್ಥ ಸುವ್ಯಕ್ತ. ●

# ಗೂಗ್ಲಿ

ಲಲಿತ ಪ್ರಬಂಧ

• ಕೆ. ರಾಮಮೋಹನ

ಘನವಾದ ಸಂಗೀತ ಕಛೇರಿ ಎಂದು ನಿರೀಕ್ಷೆ ಮಾಡಿ ಹೋಗಿದ್ದೆ. ವಿದ್ವಾಂಸರೇನೋ ಹೌದು. ಆದರೆ ಸಂಗೀತ ಮಾತ್ರ ಏಕೋ ನೀರಸವಾಗಿತ್ತು. ಅವರು ಹೇಗೆ ಹಾಡಿದರೇನು, ಮನಸ್ಸಿನ ಒಳತಂತಿ ಅದಕ್ಕೆ ಶ್ರುತಿಯಾಗಿ ಸ್ಪಂದಿಸದಿದ್ದರೆ ರುಚಿಸುವುದು ಉಂಟೆ? ಹೀಗಾಗಿ ಆಕಳಿಕೆಗಳ ಸರಮಾಲೆ, ಬೇಸರದ ತಾಂಡವ ನಡೆದಿತ್ತು. ಮಾಡುವುದೇನು, ಆ ಕಡೆ ನೋಡುವುದು ಪರಿಚಿತ ಮುಖಗಳನ್ನು ಹುಡುಕುವುದು, ಬಂದವರು ಎಷ್ಟು ಎಂದು ಎಣಿಸುವುದು, ಯುವಕರು, ವೃದ್ಧರು, ಮಹಿಳೆಯರ ಸಂಖ್ಯೆ- ಹೀಗೆ ಎಂಥದೋ ಒಂದು. ಆಗೆಲ್ಲ ಮನ ಸ್ವೊಂದು ಚೆಕ್ಕಿನ ಮರಿ ಅಥವಾ ಮಂಗನ ಮರಿ. ಅದರೊಡನೆ ಚೆಲ್ಲಾಟ! ಕೆಲಸವಿಲ್ಲದಾಗ ಮನವೆಂಬುದು ಮರ್ಕಟ.

ಒಮ್ಮೆ ತಿರುಗಿ ನೋಡಿದರೆ ಸಭಾಂಗಣದಲ್ಲಿಯ ಒಂದು ಮುಖ ಗಮನಸೆಳೆಯಿತು. ಸುಮಾರು ಮೂವತ್ತು ವರ್ಷ, ಏಕೆ ಮೂವತ್ತೈದು ಎಂದೇ ಹೇಳಬಹುದು. ಅಷ್ಟು ದೂರದಿಂದ ಆ ಮುಖ ತೇಲಿ ಬಂದಂತಾಯಿತು. ಹೀಗೆ ಬಂದದ್ದು ಒಮ್ಮೆಲೇ ಬೇಸರವನ್ನು ದೂರ ಮಾಡಿತು. ಮನಸ್ಸಿನ ವ್ಯಾಪಾರ ಚುರುಕಾಯಿತು. ಮೊದಲು ಮಸುಕುಮಸುಕಾದ, ಧೂಳಿನಿಂದ ಮುಚ್ಚಿದ ನೆನಪನ್ನು ಕೆದಕಿ ತೀವ್ರವಾದ ಶೋಧನೆ ಈ ಮುಖ ಯಾರದು ಎಂದು ಹುಡುಕುವಲ್ಲಿ; ಅನಂತರ, ಈ ನೆನಪು ಮಿಂಚಿನಂತೆ ಹೊಳೆದ ಕೂಡಲೇ ಇಪ್ಪೊಂದು ವರ್ಷಗಳನ್ನು ಹಾರಿ ಹಿಂದಕ್ಕೆ ನೆಗೆವ ಹುಚ್ಚು ನಾಗಾಲೋಟ- ಆ ಹಿಂದಿನ, ಯಾವ ಲಂಗುಲಗಾಮಿಲ್ಲದ, ಜವಾಬ್ದಾರಿ ಚಿಂತೆಗಳ ಹೊರೆಭಾರವಿಲ್ಲದ ಸ್ವೇಚ್ಛಾ ಪ್ರಪಂಚಕ್ಕೆ, ವಿದ್ಯಾರ್ಥಿ ಜೀವನದ ಸಿಹಿ ದಿನಗಳ ಸೊಗಸಿನೆಡೆಗೆ. ಇಂತಹ ಮಾಧುರ್ಯಪೂರ್ಣ ದಿನಗಳಲ್ಲೂ ಎಲ್ಲಾದರೂ ಒಮ್ಮೊಮ್ಮೆ ಚುಚ್ಚಿ, ಹ್ಹಾಹ್ಹೂಂ ಎನಿಸುವ ನೋವಿನ ಒಂದು ಸೆಳಕು ಇತ್ತಲ್ಲವೆ, ಅಂದಮೇಲೆ ಅದರ ಒಂದಂಶವನ್ನು ಮೂಡಿಸಿದ ಈ ಮುಖ ಮನಸ್ಸಿನ ಪಟಲದಿಂದ ಅಳಿಸಿ ಹೋಗುವುದು ಹೇಗೆ?

ಬರಬರುತ್ತ ನೆನಪಿನ ಚಿತ್ರಣ ಹೆಚ್ಚು ಸ್ಪಷ್ಟವಾಗತೊಡಗಿತು.- ಓಹೋ, ಹೆಚ್ಚೇನೂ ಬದಲಾವಣೆ ಕಾಣದಲ್ಲವೆ? ಮುಖದ ಚರ್ಮ ಸ್ವಲ್ಪ ನೆರಿಗಟ್ಟಿದೆ, ಅಲ್ಲಲ್ಲಿ ಒಂದೊಂದು ಬೆಳ್ಳಿಯ ಕೂದಲು ಹೊಳೆಯುತ್ತಿವೆ. ಅಷ್ಟು ಬಿಟ್ಟರೆ ಮಿಕ್ಕೆಲ್ಲ ಹಾಗೇ ಇದೆ. ಸಮಯ ಬಂದಾಗ ಅಗಲವಾಗಿ ತೆರೆದು ಹೇಳಲಾಗದ ಅಚ್ಚರಿಯನ್ನು ಸೂಸುವಂತಹ ಅದೇ ಹಳೆಯ ಕಿರುಗಂಗಳ ಜೋಡಿ; ಮನಸ್ಸಿನಲ್ಲಿ ಹಾಗಿತ್ತೋ ಹೇಗಿತ್ತೋ ಯಾರು ಬಲ್ಲರು- ಆದರೆ ಬಿರಿದ ಕಣ್ಣುಗಳು ತೋರುವ ತಿರಸ್ಕಾರವೇ ಒಂದು ಸುತ್ತಿಗೆಯ ಏಟಿನಂತೆ. ಅದೇ ಸುಕ್ಕುಗಟ್ಟಿದ ನಸು ಸೊಟ್ಟ ಮೂತಿ, ಆದರೆ ಈಗ ತುಟಿಗಳು ಹೆಚ್ಚು ಕಪ್ಪಾಗಿವೆ. ಅಂದರೆ ಸಾಕಷ್ಟು ಸಿಗರೇಟು ಹೊಗೆ ಹಿಡಿದಿರಬೇಕು.

ಅಬ್ಬಾ, ಅವನೇ, ಸಂದೇಹವಿಲ್ಲ. ವಾಮನ ಕುಮಾರ್. ಮನಸ್ಸು ಬಂದಾಗ ಉದ್ದೇಶಪೂರ್ವಕವಲ್ಲದಿದ್ದರೂ ನಮ್ಮನ್ನು ಅಳ್ಳಾಡಿಸಿ ಗೋಳು ಗುಟ್ಟಿಸುವಲ್ಲಿ ಗಟ್ಟಿಗ. ನನ್ನಂತಹ ಬಲಿಪಶುವನ್ನು ಪಾತಾಳಕ್ಕೆ ತುಳಿಯಬಲ್ಲ ವಾಮನ! ಕಾಲೇಜಿನಲ್ಲಿ ನಮಗಿಂತ ಕಿರಿಯ. ನಾವು ಆಗಲೇ ಪದವಿ ತರಗತಿಯಲ್ಲಿರುವಾಗ ಅವನು ಆಗತಾನೇ ಶಾಲೆಯನ್ನು ದಾಟಿ ಬಂದವನಿರಬೇಕು ಅಥವಾ ಎರಡನೆಯ ವರ್ಷದಲ್ಲಿದ್ದ ಎಂದು ಕಾಣುತ್ತೆ. ಅವನಿಗೂ ನನಗೂ ಕೊಂಡಿ ಎಂದರೆ ನಮ್ಮ ಸ್ನೇಹಿತ,

ಕುಮಾರ್‌ನನ್ನು ಚೆನ್ನಾಗಿ ಬಲ್ಲವೆ.

ಹೀಗಾಗಿ, ಕುಮಾರ್ ಆಗಾಗ ನಮ್ಮಲ್ಲಿ ಬರುವನು. ನಮ್ಮ ಆಸಕ್ತಿಗಳು, ಅಭಿರುಚಿಗಳು ಎರಡೂ ಭಿನ್ನವೇ. ಅವನಿಗೆ ಪುಸ್ತಕಗಳೆಂದರೆ ಪ್ರೀತಿ ಇತ್ತೇನೋ. ನನಗಂತೂ ಆಟ-ಹರಟೆಯಲ್ಲೇ ಹೆಚ್ಚು ಆಸಕ್ತಿ. ಅವನು ಸ್ವಲ್ಪ ಗಂಭೀರ ತರ ದವನು. ಕಷ್ಟಪಡುವವನು; ನಾನಾದರೋ ಸುಲಭ ಜೀವಿ. ನಕ್ಕು ಉದಾಸೀನವಾಗಿರುವುದೇ ಸ್ವಭಾವ.

ಈ ನನ್ನ ಧೋರಣೆಯೇ ಎಡವಿದಾಗ ನನ್ನನ್ನು ಹಿಡಿಯಲು ಅವನಿಗೆ ದೊಡ್ಡ ಅವಕಾಶವಾಯಿತು. ಹೀಗೆ ಸಿಕ್ಕಿಬಿದ್ದಾಗ ಯಾವ ರಕ್ಷಣೆಯೇ ಇಲ್ಲದೆ ಗೋಡೆಗೆ ಆನಿಸಿ ನಿಲ್ಲುವಂತಹ ಪರಿಸ್ಥಿತಿಯೇ ಹೆಚ್ಚು. ನನ್ನ ದೌರ್ಬಲ್ಯದ ಲಕ್ಷಣಗಳನ್ನು,



ತಾಣಗಳನ್ನು ಅವನು ಗುರುತಿಸಿರಬೇಕು. ಅಲ್ಲೇ ಹಿಡಿದು ನನ್ನನ್ನು ಜಿಗುಟುವನು. "ಏನ್ರೀ ಬರೀ ಪದವಿ ತರಗತಿಗೆ ಏಕೆ ಬಂದಿರಿ, ಇಂಜಿನಿಯರಿಂಗ್ ಸೇರುಕ್ಕಿಲಿಲ್ಲವೆ?" (ಏನೋ ನಾನು ಕೇಳಿದೊಡನೆ ಸೀಟು ಸಿಗುತ್ತಿತ್ತು, ನನಗಾಗಿ ಕಾದಿದ್ದರು ಎನ್ನುವಂತೆ) "ಅದರಲ್ಲೇನು ನನಗೆ ಆಸಕ್ತಿ ಇರಲಿಲ್ಲ," ಎಂದು ನಾನು ಜಾರಿಕೊಳ್ಳಲೆತ್ನಿಸಿ

ದರೆ. "ಅಯ್ಯೋ ಹುಚ್ಚಪ್ಪ, ಈಗ ಅದೇ ಬಹುಜನ ಘೂಯಿಷ್ಟವಲ್ಲವೆ? ಹೋಗಲಪ್ಪ, ವೈಗ್ಯಕೀಯ ತಗೋಳ್ಳಬಾರದಿತ್ತೆ?"- ಅವನು ಕೇಳುತ್ತಿದ್ದ ರೀತಿಯಲ್ಲಿ, ಸರಿಯಾದ ಶಿಕ್ಷಣ ಮಾರ್ಗ ಹಿಡಿಯದೆ ಗುರಿ ಇಲ್ಲದೆ ತಿರುಗುವ ಕಡು ಮೂರ್ಖ ಎನ್ನುವುದೊಂದೇ ಬಾಕಿ. ಪರೀಕ್ಷೆಯಲ್ಲಿ ನನಗೆ ಬಂದ ಅಂಕಗಳೆಷ್ಟು, ನನ್ನ ತಂದೆಯವರ ಆರ್ಥಿಕ ಸ್ಥಿತಿ ಏನು, ನನ್ನ ಭವಿಷ್ಯದ ಯೋಜನೆ ಏನು (ಅದನ್ನು ನಾನು ಯೋಚಿಸಿದ್ದರಲ್ಲವೆ!)- ಹೀಗೆ ಇಂತಹುದೇ ಹಲವು ಹತ್ತು, ನೂರು ಪ್ರಶ್ನೆಗಳು. ಅನೇಕವು ನನ್ನನ್ನು ಉತ್ತರ ಕೊಡಲಾಗದ ಭಯಂಕರ ಪೇಚಿನೊಳಗೆ ತಳ್ಳುತ್ತಿದ್ದವು. ಇದೂ ಒಂದು ತರಹ ಕ್ರಿಕೆಟ್‌ನ 'ಗೂಗ್ಲಿ'ಯ ಹಾಗೆ. ಈ ಗೂಗ್ಲಿಗೆ ಶಾಲೆಯಲ್ಲಿ ಸ್ನೇಹಿತ ಅರ್ಥ ಹೇಳಿದ್ದ- ನಾವು ಏನನ್ನು ನಿರೀಕ್ಷಿಸಿ ಆಟಕ್ಕೆ ತಯಾರೋ ಆ ಕೊನೆಗಳಿಗೆಯಲ್ಲಿ ಅದಕ್ಕೆ ವಿರುದ್ಧವಾಗಿ ತಿರುಗಿ ಆಡಲಾರದೆ ತಬ್ಬಿಬ್ಬು ಮಾಡುವ ಬೌಲ್! ಹೇಗಾದರೂ ಹಾರಿಕೆಯ ಉತ್ತರ ಕೊಟ್ಟರೆ, ಬಿಡದಂತೆ ಮತ್ತೆ ಮತ್ತೆ ಬಳಸಿಯಾದರೂ ಅದನ್ನೇ ಜಗ್ಗಿಸಿ ತಟ್ಟುವನು. ಅವನಿಗೆ ಖುಷಿ ಬಂದಾಗ, "ಬರೀ ಪದವೀಧರನಿಗೆ ಏನಿದೆಯಪ್ಪಾ ಭವಿಷ್ಯ- ಮುಂದಿನ ಓದೇ, ಒಳ್ಳೆಯ ಕೆಲಸವೇ- ಏನೋ ಸಣ್ಣ ಕೆಲಸ, ಕಡಿಮೆ ಸಂಬಳ, ಗೌರವವೂ ಅಷ್ಟರಷ್ಟೆ." ಎಂದು ಭಾಷಣ ಬಿಗಿಯುವನು. ಆಯ್ತು. ನನ್ನ ಇಡೀ ಭವಿಷ್ಯತ್ತನ್ನು ಕರಾಳವನ್ನಾಗಿ ಚಿತ್ರಿಸಿಯಾನು.

ಇದು ಒಂದು ತೆರ: ನಿಜವಾದ ಬಡಿದಾಟವೆಂದರೆ ಪುಸ್ತಕಗಳ ವಿಚಾರ. ದಿನವೂ ಒಂದು ಪುಸ್ತಕದ ವಿಷಯ ಕೇಳುವನು- "ಮುದುಕ ಮತ್ತು ಸಮುದ್ರ (ಓಲ್ಡ್ ಮ್ಯಾನ್ ಆ್ಯಂಡ್ ದಿ ಸೀ) ಓದಿದೆಯಾ?"- ಹೀಗೆ ಪ್ರಾರಂಭ. ಇದೆಲ್ಲಿ ಪೇಚು ಎಂದುಕೊಂಡು, ಏನೋ ತಪ್ಪಿದರೆ ಸಾಕು ಅಂತ ಒಮ್ಮೊಮ್ಮೆ ಬುರುಡೆ ಬಿಟ್ಟರೂ ನಡೆಯದು. "ಎಂತಾ ಆಭಾಸ ನೋಡು, ಪಾಪ, ಮುದುಕ ಸಮುದ್ರದಲ್ಲಿ ಬಿದ್ದ. ಆದರೆ ನಿಜವಾಗಿ ಅವನು ಮುಳುಗಿದನೋ ಅಥವಾ ಯಾರಾದರೂ ಮೇಲೆತ್ತಿದರೋ, ಅಂತೂ ಪೇಪರಿನಲ್ಲಿ ಆ ವಿವರ ಇರಲಿಲ್ಲ." ಎಂದೆ. ಗೊತ್ತಿಲ್ಲ ಅನ್ನುವುದಕ್ಕೆ ನಾಚಿಕೆ, ಅಭಿಮಾನಕ್ಕೆ ಮುಕ್ಕು. "ಅಯ್ಯೋ ದೇವರೆ, ಈಗ ಮುಳುಗುತ್ತಿರುವವನು ನೀನು. ಅದೊಂದು ಕಾದಂಬರಿನಯ್ಯಾ. ಅರ್ನೆಸ್ಟ್ ಹೆಮಿಂಗ್‌ವೇ ಅನ್ನೋನು ಬರೆದದ್ದು. ಅದಕ್ಕೆ ನೊಬೆಲ್ ಪಾರಿತೋಷಕ ಬಂತು, ಗೊತ್ತಿಲ್ಲವೆ? ನೀನೇನು ಪೇಪರ್ ಸಹಿತ ಓದೋಲ್ಲ ಅಂತ ಕಾಣುತ್ತೆ" ಎನ್ನುವನು. ಎದ್ದು ಕಪಾಳಕ್ಕೆ ಹೊಡೆದ ಹಾಗಾಯಿತು. ಬಿದ್ದ ಏಟು ಸವರುವಂತಿಲ್ಲ, ತಡೆಯುವಂತಿಲ್ಲ; ತಲೆ ಎತ್ತುವಂತಿಲ್ಲ, ತಗ್ಗಿಸುವಂತಿಲ್ಲ.

ಪ್ರಾಂಜಲವಾಗಿ 'ನನಗೆ ತಿಳಿಯದು ನೀ ಹೇಳು ನಾ ಕೇಳ್ತೇನೆ' ಎಂದಿದ್ದರೆ ಅವನೂ ಹೆಮ್ಮೆಯಿಂದ ವಿವರಿಸುತ್ತಿದ್ದನೇನೋ, ಬಾಂಧವ್ಯವೂ ಹುಳಿಯಾಗುತ್ತಿರಲಿಲ್ಲ. ಆದರೆ ಅಭಿಮಾನ ಕುರುಡು. ಸೊಂಟಕ್ಕೆ ಕಟ್ಟಿದ ಕಲ್ಲುಗುಂಡಿನಂತೆ. ಅವನು ಬಿಡಬೇಕಲ್ಲ, ಕನಿಕರದಿಂದ ಅದರ ಸಂಕ್ಷಿಪ್ತ ಕಥೆ, ಅಷ್ಟೇ ಚಿಕ್ಕದಾಗಿ ಅದರ ಮೇಲಿನ ಟೀಕೆ, ವಿಮರ್ಶೆಯನ್ನೂ ಹೇಳುವನು. ಹೊಡೆತದ ನೋವಿಗಿಂತ ಕನಿಕರದ ಗುದ್ದು ಸಹಿಸುವುದು ಕಷ್ಟ. ಮೈಯೆಲ್ಲ ಹರಡಿಕೊಂಡು ಉರಿ ಎಬ್ಬಿಸುತ್ತೆ. ಸಾಲದ್ದಕ್ಕೆ ಭುಗಿಲೆದ್ದ ಸಿಟ್ಟನ್ನು ಒಳಗೇ ಕೊರೆಯುವ ಅಸೂಯೆಯ ಕೀಟವನ್ನು ತೋರಲಾಗದು. ಅದು ನಾನು ಬೆಳೆದ ವಾತಾವರಣಕ್ಕೆ, ಮನೆಯ ಸಂಸ್ಕೃತಿಗೆ ಹೊಂದದು. ಅದೇಕೋ? ಮುಖ್ಯ ಎಂದರೆ ಹೀಗೆ ಎದುರು ನಿಲ್ಲುವ ಧೈರ್ಯವೇ ಇರದವನು. ಕಷ್ಟವಾದರೂ ಹೇಗೋ ಸಹಿಸಬೇಕು, ಅನ್ಯ ಮಾರ್ಗವಿರಲಿಲ್ಲ. ಅದುಮಿಟ್ಟ ದುರ್ಬಲ ಮನಸ್ಸಿನ ಕೋಟಲೆ ಸಿಡಿದೆದ್ದು ಸುಡದಂತೆ ಆಗಾಗ ಸೋರಿಹೋಗುವಂತೆ ಕಿಂಡಿಯನ್ನು ಒದಗಿಸಿದ್ದು ಆಟ ಕಲಿಸಿದ ಪಾಠ- ಸೋಲನ್ನೂ ನಗುಮುಖದಿಂದ ತೆಗೆದುಕೊಳ್ಳುವ ಪ್ರವೃತ್ತಿ.

ನಿಜ, ಓದುವುದೆಂದರೆ ನನಗೆ ಆಸಕ್ತಿ ಇಲ್ಲವೆ? ಆದರೆ ಅದೆಲ್ಲ ವರ್ತಮಾನ ಪತ್ರಿಕೆಯ ಕೊನೇ ಪುಟಕ್ಕೇ ಮೀಸಲು. ಹೌದಪ್ಪಾ, ಬೇರೆ ಏನು ಓದುವುದಕ್ಕೂ ನನಗೆ ಪುರುಸೊತ್ತಾದರೂ ಎಲ್ಲಿ? ದಿನವಿಡೀ ತರಗತಿಯಲ್ಲಿ ಪಾಠಗಳು, ಮಧ್ಯಾಹ್ನ ಇಳಿಯಿತೇ, ನಾಲ್ಕು ಗಂಟೆ ಆಯಿತೇ ಎಂದು ಚಡಪಡಿಸಿ ಮೈದಾನಕ್ಕೆ ಓಡಿ ಕತ್ತಲಾಗುವವರೆಗು ಏನಾದರೂ ಆಟದಲ್ಲಿ ಮೈಮರೆತು ಸುಸ್ತಾಗಿ ಬಂದ

ಜೀವಕ್ಕೆ ಸ್ವಲ್ಪ ತಣಿವು, ಚೇತನ ಬೇಡವೇ- ಅದನ್ನ ರಸಿ ಚಿಕ್ಕಪೇಟೆ, ಅವೆನ್ಯೂ ರೋಡಿನಲ್ಲಿ ಒಂದು ಸುತ್ತು ಅಲೆತ. ಸ್ನೇಹಿತ ಸಿಕ್ಕರೆ, 'ಒನ್-ಬೈ-ಟೂ-ಇಂಡಿಯಾ'. ಈ ಅರ್ಧ ಕಾಫಿಯೇ ನಮ್ಮ ಚೇತನ, ಸ್ಫೂರ್ತಿ. ಸರಿ, ಬಂದ ಕೂಡಲೆ ಹಾಸ್ಟೆಲ್‌ನಲ್ಲಿ ಊಟದ ಸಮಯ. ಊಟವಾಯಿತೇ, ಸ್ವಲ್ಪ ಹರಟೆ, ಒತ್ತರಿಸಿ ಬರುವ ನಿದ್ರೆ, ದಣಿದ ದೇಹಕ್ಕೆ ಆಸರೆ ಮತ್ತಷ್ಟು ನಿದ್ರೆ. ಹೀಗಾಗಿ ನಾನು ಓದಲು ಹಾಕಿದ ಕಾರ್ಯಕ್ರಮ ರೂಪುರೇಷೆಗಳೆಲ್ಲ ಬಹಳ ಚೆನ್ನಾಗಿ ಸಿದ್ಧವಾದವೇ. ಆದರೆ ಅದೆಲ್ಲ ಎಂದೆಂದೂ ನಾಳೆಗೆ, ಇವತ್ತಿಗಲ್ಲ. ಇಂತಹವನ್ನು ಇಕ್ಕಳದಲ್ಲಿ ಹಿಡಿದು ಕೊಡವಿದಾಗ, ತಪ್ಪಿಸಿಕೊಳ್ಳ ಬೇಕಾದರೆ ಸಾಕು ಸಾಕೆನಿಸಬೇಕು.

ಹೀಗೆ ವರ್ಷಕ್ಕೂ ಹೆಚ್ಚು ಕಾಲ ನಾನು ಕೋಲಿನ ಈ ತುದಿಯಲ್ಲೇ; ಅವನಿಗೆ ಚೆಲ್ಲಾಟ, ನನಗೆ ಸಂಕಟ. ಅವನನ್ನು ಕಂಡರೆ ಪೇಚು, ಹೆದರಿಕೆ ಎರಡೂ- ಇವೆರಡರ ಮುಂದೆ ಅಸೂಯೆ, ದ್ವೇಷ ಯಾವುದಕ್ಕೂ ಸ್ಥಾನವೇ ಇಲ್ಲ. ಕಂಡ ಕೂಡಲೇ ತಿರುಗಿ ಓಡಿಬಿಡಲೇ ಎನಿಸುವುದು. ಎಲ್ಲಿ ದಾರಿ ಯಿದೆ ಪಕ್ಕದಲ್ಲಿ ಜಾರಿ ತಪ್ಪಿಸಿಕೊಳ್ಳೋಣ ಎಂದು ಒಳ ಆಸೆ. ಮೊದಲಿನಂತೆ ಅವನನ್ನು ನಕ್ಕು ನಿಭಾಯಿಸಲು ಸಾಧ್ಯವೇ ಇರಲಿಲ್ಲ- ಅವನನ್ನು ಕಂಡು ಓಡಲು ಆಗದಿದ್ದರೂ, ನಗು ಮಾತ್ರ ಹೇಳದೆ ಕೇಳದೆ ಹಾರಿ ಹೋಗುತ್ತಿತ್ತು. ಹೀಗೆ ಪ್ರಯತ್ನ ಮಾಡಿದಷ್ಟೂ ಗೋಡೆಗೆ ಹೆಚ್ಚು ಹೆಚ್ಚಾಗಿ ಒತ್ತಿ ಜುಗಿಸಿದ ಅನುಭವ. ಅಂದರೆ ಎಂದಾದರೂ ಹಿಂತಿರುಗಿ ಪುಟಿಯುವುದೂ ಅನಿವಾರ್ಯವೇ- ಪ್ರಕೃತಿ ನಿಯಮವಲ್ಲವೆ? ಅದೂ ಆಯಿತು.

ಸ್ನೇಹಿತನೊಬ್ಬನನ್ನು ನೋಡಿ ಹರಟೆ ಹೊಡೆದು, ನಲಿದು ಹಿಂದಿರುಗಿ ಬರುವಾಗ ನಾಲ್ಕು ಮೈಲಿಯ ದಾರಿ- ಇವನೇ ಸಹ ಪಥಿಕ. ದೇವರೇ, ಎಂತಹ ಕಠಿಣ ಮೈಲಿಗಳು, ಸವೆಯಲಾರದ ಪೇಚಿನ ಮಾರ್ಗ! ಬಿಟ್ಟಾನೇ, ಒಂದು ಎಡಗೈ ಹೊಡೆತ, ಬಲಗೈ ತಿವಿತ, ಹಿಂದಿನಿಂದ ಒದೆತ, ಮುಂದಿನಿಂದ ಹಾಯುವನು. ಇದನ್ನು ನೆನಪಿಸಿಕೊಂಡೇ ಮೈ ಬೆವರು ಸುರಿಯ ಲಾರಂಭಿಸಿತು. ನಾನು ಹೆದರಿದವನೆಂದು ಕಂಡರೆ ಮೇಲೆ ಕಪ್ಪೆ ಎಸೆದಾನು! ಉಪಾಯ ಏನು? ಅವನಿಗೆ ಮಾತಾಡಲು ಬಿಡದಂತೆ ನಾನೇ ಪ್ರಶ್ನೆಗಳ ಸುರಿಮಳೆಗರೆದರೆ ಆಯಿತು. ಅದೇ ತಿರುಗುಬಾಣ ಎಂದು ಹೊಳೆಯಿತು; ಅದರಲ್ಲೂ ತೀರ ವೈಯಕ್ತಿಕ ವಾದದ್ದನ್ನು ಅಸಭ್ಯವೆನಿಸಿದರೂ ಸರಿ, ಕೇಳೇ ಬಿಡು ವುದು ಎಂದು ನಿರ್ಧರಿಸಿದೆ.

"ಏನಯ್ಯಾ, ನೀನೇನು ಐ.ಎ.ಎಸ್. ಮಾಡು ವೆಯೋ, ಸಾಹಿತ್ಯಕ್ಕೆ ಮೀಸಲೋ ಅಥವಾ ಸಿನಿಮಾ ಧೀರನಾಗುವವನೋ?" ಎಂದು ಶುರು ಮಾಡಿದೆ. ಆ ಬಾರಿ ಅವನು ಪರೀಕ್ಷೆಯಲ್ಲಿ ಎಡವಿದ್ದ ಎಂದು ತಿಳಿದಿತ್ತು. ಯಾವಾಗಲೂ ಅಂತಹ ಸೂಕ್ಷ್ಮವನ್ನು ಕೆದಕದವನು ಅಂದು ಪರೀಕ್ಷೆಯಲ್ಲಿ ಒಟ್ಟು ಅಂಕಗಳು, ಪ್ರತಿ ವಿಷಯದ ಅಂಕಗಳು, ಕಡಿಮೆ ಬಂದಿದ್ದರೆ ಏಕೆ; ಅವನಿಗೆ ಕ್ರಿಕೆಟ್‌ನ ಗಂಧ ಅಷ್ಟೇ- ಬ್ರೆರೆಕ್, ಸ್ಪಿನ್ ಕಟ್ಟರ್ ಎಂದರೆ ವ್ಯತ್ಯಾಸ ತಿಳಿಯ ದವನು- ಹೀಗೆ ಅವನಿಗೆ ತಿಳಿಯದ್ದನ್ನೆ ಆರಿಸಿ ದಾರಿ ಯುದ್ದಕ್ಕೂ ಅವನ ತಲೆ ತುಂಬಿದೆ. ಅವನಿಗಾಗು ತ್ತಿದ್ದ ಮುಜುಗರ, ಅತಿ ಪ್ರಯಾಸದ ಅರಿವಿತ್ತು. ಆದರೇನು ಮಾಡಲಿ, ಪಾಪ ಎಂದುಕೊಂಡು ಸ್ವಲ್ಪ ಸಡಿಲಬಿಟ್ಟರೆ, ನಾನೇ ಅವನ ಮುಷ್ಟಿಯಲ್ಲಿ ಸಿಕ್ಕೇನು. ಹಾಸ್ಟೆಲ್‌ನೊಳಗೆ ಬಂದಾಗ "ಬಾರೋ ರೂಮಿಗೆ," ಎಂದೆ. "ಇಲ್ಲಪ್ಪಾ, ತುಂಬ ಹಸಿವು," ಎಂದವನೇ ತಿರುಗಿ ನೋಡದಂತೆ ಓಡಿದ. ಆಗ ತಾನೆ ಮೂಡುತ್ತಿದ್ದ ಕುಡಿಮೀಸೆಯಂಚಿನಲ್ಲಿ ಮೊದಲ ಬಾರಿಗೆ ನಗು ಚಿಮ್ಮಿತು ನನಗೆ.

ಒಂದು ಸಲ ಇಂತಹ ಜಯ ಸಾಧಿಸಿದರೂ, ಇಂತಹ ರೀತಿ ನನಗೆ ಹಿಡಿಸುವುದಿಲ್ಲ. ಹೀಗಾಗಿ ಅವನನ್ನು ಕಂಡೊಡನೆ ಪ್ರೈಮರಿ ಶಾಲೆಯ ಹುಡುಗ ನಂತೆ ಓಡಿಹೋಗುವ ಒಳಮನಸ್ಸು ಮೂವತ್ತೈದು ವರ್ಷಗಳನ್ನೂ ಮೀರಿ ಹಸಿಯಾಗೇ ನಿಂತಿದೆ. ಈಗ ಲಾದರೂ ಅಷ್ಟೇ, ಅವನನ್ನು ಎಷ್ಟು ವರ್ಷಗಳ ಮೇಲೆ ಕಂಡೆ, ಮಾತನಾಡೋಣ, ಯೋಗಕ್ಷೇಮ ವಿಚಾರಿಸೋಣ ಎನ್ನುವುದು ಸ್ವಭಾವ ಜನ್ಯ ಆಸೆ. ಅರಿಯದ್ದನ್ನು ಬಾಲಕನಿಂದಾದರೂ ಕೇಳಿ ತಿಳಿದು ಕೊಳ್ಳುವ ಮನೋಭಾವದ ಮೊದಲ ಪಾಠ ಕಲಿಸಿ ದವನು ಈತ; ಆ ಬಗ್ಗೆ ಕೃತಜ್ಞತೆಯ ಒಂದು ಎಳೆ ಉಳಿದಿದೆ. ಅವನ ಮೇಲಿನ ಮಾತ್ಸರ್ಯ, ಕಹಿ ಓದುವಾಗಲೆ ತೊಳೆದಿತ್ತು. ಆದರೂ ಹೊಸತರನ ಅಳುಕು- ಅವನು ಮರೆತಿದ್ದರೆ. ಅಥವಾ ಅವ ನಲ್ಲಿ

ಏನು ಬದಲಾವಣೆಯಾಗಿದೆಯೋ ಮುಖ ತಿರುಗಿಸಿ ಹೊರಟರೆ! ಲೋಕದ ನಾಟಕ, ಕಪಟ ನೋಡಿ ಬೇಸತ್ತು ಬೆಳೆದ ಈಚಿನ ಉದಾಸೀನ, ನಿರಾಸಕ್ತಿ ಯದೇ ಮೇಲುಗೈ ಆಯಿತು. ಇದನ್ನೇ ಜಗ್ಗಿಕೊಂಡು ನಿಧಾನವಾಗಿ ಹೊರಟಿದ್ದೆ, ಕಛೇರಿಯ ನಂತರ. ಅಂದಿನ ಸಂಗೀತವೂ ಈ ಎಲ್ಲ ನೆನಪುಗಳ ಮಾಲೆಯಲ್ಲಿ ಮೂಲೆಗುಂಪಾಗಿತ್ತು. ಏನೋ ಒಂದು ಮಂಪರು ಆವರಿಸಿತ್ತು. ಹೆಗಲ ಮೇಲೆ ಬಿದ್ದ ಕೈ ನನ್ನನ್ನು ಎಚ್ಚರಕ್ಕೆ ತಂದಿತು. ಎಲಾ, ಕುಮಾರನೂ ನನ್ನನ್ನು ಅಷ್ಟು ಬೇಗ ಗುರುತಿಸಿದ್ದಾನೆ ಎಂದು ಆಶ್ಚರ್ಯವಾಯಿತು; ಮತ್ತೊಮ್ಮೆ ನಾನು ಸೋತಿದ್ದೆ!

ಕ್ಷೇಮ ಸಮಾಚಾರ ಕೇಳಿದೆವು. ಈಗ ಪುನಃ ಒಳಮನಸ್ಸನ್ನು ಪೂರ್ಣ ತೊಳೆದಂತಾಯಿತು. ಅಳುಕು, ಹಿಂಜರಿಕೆ ಆ ಸ್ಪರ್ಶದಿಂದ, ಮುಗುಳ್ನಗೆಯಿಂದ ಮಾಯವಾಯಿತು. ನಗಬಲ್ಲೆ, ಹಗುರಾಗಿ ಗೆಲುವಾಗಿ ಮಾತನಾಡಬಲ್ಲೆ ಎನಿಸಿತು. ಅವನೇ ಕೇಳಿದ, "ನಿನಗೆ ಸಂಗೀತ ಇಷ್ಟ ಎಂದು ನನಗೆ ಗೊತ್ತಿರಲಿಲ್ಲ." ಹಿಂದಾದರೆ ಒಂದು ಸಣ್ಣ ಬಿರುಗಾಳಿ ಮನಸ್ಸಿನಲ್ಲಿ ಏಳುತ್ತಿತ್ತು. ಈಗಲೂ ನೀನು ಅವನ ಸಂಗೀತ ಕೇಳಿದೆಯಾ, ಆಕೆ ಹಾಡುವುದು ನಿನಗೆ ಹಿಡಿಸಿತೇ, ಇಂತಹ ಪ್ರಶ್ನೆಗಳ ಸುರುಳಿ, ಘನ ವಿದ್ವಾಂಸರ ಸಂಗೀತ ಅದರ ವಿಮರ್ಶೆಗಳ ಪಟ್ಟಿ ಬಿಚ್ಚುತ್ತಾನೆ ಎನಿಸಿತು. ಆದರೆ, ಆಯಿತು, ಪುನಃ ಸಿಕ್ಕಿಕೊಂಡೆ ಎಂದುಕೊಂಡರೂ- ಈಗ ಚರ್ಚೆಗೆ ಹೆಚ್ಚು ಆಸಕ್ತಿ ಇರಲಿಲ್ಲ- ಕಳವಳವಿರಲಿಲ್ಲ. ಇಲ್ಲ ಹಾಗೇನಿಲ್ಲ, ತನ್ನಷ್ಟಕ್ಕೆ ತಾನು ಬರುತ್ತಿದ್ದಾನೆ, ಮೆತ್ತಗಾಗಿದ್ದಾನೆ, ಏಕೋ ದೂರವಾಗಿರುವಂತೆ ಮಾತು,ಸಣ್ಣ ವಿಷಾದದ ಛಾಯೆ ಹರಡಿದೆ. ಮನಸ್ಸಿಗೆ ಕಿರಿಕಿರಿಯಾಯಿತು. ಛೀ, ಇದೇಕೆ ಹೀಗೆ ಎನಿಸಿತು, ಏನು ನೋವು ಅನುಭವಿಸಿದನೋ ಎಂದು ಮನನೊಂದಿತು. ನಾನೇ ಮಾತು ಶುರು ಮಾಡಿದೆ. ಹಳೆಯ ಕಾಲದ ಸವಿನೆನಪುಗಳು, ಮುದಗೊಳಿಸುವಂತಹ ಘಟನೆಗಳನ್ನು ಮಾತನಾಡಿದೆವು. ಸ್ವಲ್ಪ ಗೆಲುವಾದ. ನಾನೂ ನಿರಾಳವಾಗಿ ಉಸಿರಾಡುವಂತಾಯಿತು.

ಇದ್ದಕ್ಕಿದ್ದಂತೆ ನಾನು ಕೇಳಿದೆ, "ಈಗಲೂ ತುಂಬ ಓದುತ್ತೀಯಾ?" ಆತ "ನಾನೆಲ್ಲಿ ಓದುತ್ತಿದ್ದೆ?" ಎಂದು ನಿಟ್ಟುಸಿರುಬಿಟ್ಟ. ನಾನು ದಂಗಾದೆ. "ಅರೆ, ಇದೇನು ಹೀಗೆ ಹೇಳುತ್ತೀ. ಕಥೆ, ಕಾದಂಬರಿ, ಸಾಹಿತ್ಯ, ಸಾಹಿತಿಗಳ ವಿಷಯ ಎಷ್ಟೊಂದು ನೀನು ಹೇಳುತ್ತಿದ್ದೆಯಲ್ಲ," ಎಂದು ನಂಬಲಾರದೆ ಕೇಳಿದೆ. "ಓ, ಅದಾ, ಬಿಡು, ನಿನಗೆ ಗೊತ್ತಿರಬೇಕಲ್ಲವಾ, ನಾನು ಕಾಲೇಜಿಗೆ ಬರುತ್ತಿದ್ದಾಗ ನನ್ನ ಅಕ್ಕ ಇಂಗ್ಲಿಷ್ ಆನರ್ಸ್ ತರಗತಿಯಲ್ಲಿದ್ದಳು. ಅವಳಿಗೆ ಓದೆಂದರೆ ಅಸಾಧಾರಣ ಪ್ರೀತಿ. ಎಷ್ಟು ಪುಸ್ತಕಗಳು, ಅವುಗಳ ಸುಂದರ ವಿನ್ಯಾಸವೇನು, ರಕ್ಷಾಕವಚವೇನು- ಅತ್ಯಂತ ಆಕರ್ಷಕ. ಆದರೆ ಅದನ್ನೆಲ್ಲ ಓದಿ ತಿಳಿಯುವ ಹದವಾದ ಮನಸ್ಸಾಗಲೀ, ತಾಳ್ಮೆಯಾಗಲೀ ನನಗಿರಲಿಲ್ಲ. ನಿಷ್ಫಲ ಕುತೂಹಲ ತಡೆಯದೆ, ಆಸೆ ಬಿಡಲಾರದೆ, ಹಿಂದಿನ ರಕ್ಷಾಪುಟದಲ್ಲಿ ಪುಸ್ತಕ, ಕಾದಂಬರಿಕಾರನ ಬಗ್ಗೆ ಸಂಕ್ಷೇಪ ವಿವರ ಓದಿ ಅದರಲ್ಲೇ ತೃಪ್ತನಾಗುತ್ತಿದ್ದೆ. ತನಗೆ ತುಂಬ ಮೆಚ್ಚುಗೆಯಾದ ಪುಸ್ತಕವಾದರೆ, ಅಕ್ಕನೇ ಅದರ ವಿಷಯ ಉತ್ಸಾಹದಿಂದ ಹೇಳುವಳು, ಅವಳ ಸ್ನೇಹಿತೆಯೊಡನೆ ಚರ್ಚೆ ನಡೆಸುವಳು. ಹೀಗೆ ಓದಿದ ಒಂದು ಪುಟ, ಕೇಳಿದ್ದರಲ್ಲಿ ಉಳಿದ ತುಣುಕುಗಳನ್ನೇ ನಾನು ಹೊಳಪಿಸುತ್ತಿದ್ದುದು, ನನಗಿಂತ ಮುಂದಿದ್ದು ಬುದ್ಧಿವಂತರಾದವರ ಮೆಚ್ಚುಗೆಗಳಿಸುವ ಬಾಲಿಶ ಪ್ರವೃತ್ತಿಯಿಂದ." ಎಂದು ಮನಃಪೂರ್ವಕ ನಕ್ಕ. ನಾನೂ ನಕ್ಕೆ. ಒಂದು ಕುರಿ ನಗುವನ್ನು (ಕುರಿ ನಗುತ್ತೇನು!), ಎಷ್ಟೋ ವರ್ಷಗಳ ಹಿಂದಿನ ಪೆಚಿನ ಮೇಲೆ ಮಿಣುಕಿ, ಮಿಣುಕಿ ನರ್ತಿಸುತ್ತಿದ್ದ ಮಂದ ಪೆಕರು ನಗುವನ್ನು! ●

---

ಹೆಸರು ಬಿಟ್ಟುಕೊಡುವ ಕೆಲಸವಿದೆಯಲ್ಲ– ಅದು ಕೆಲವೊಮ್ಮೆ ತುಂಬ ತುಟ್ಟಿ ಎನಿಸುತ್ತದೆ. ಅದರಲ್ಲೂ ನಿಮ್ಮಾಕೆ ತನ್ನೊಂದಿಗಿರುವ ನಿಮ್ಮ ಹೆಸರನ್ನು ವಕೀಲರ ನೆರವಿನಿಂದ ಬಿಟ್ಟುಕೊಡುವಾಗ...

● ಯಬ್ಬಂಕ

# "ಶಬ್ದ ಮೋಸಾ ಮಾಡ್ತಾವ ಆದ್ರ, ಸಂಖ್ಯಾ ಮಾಡೂದಿಲ್ಲಾ..."



ಬೇಂದ್ರೆ ನೆನಪು

ಅದು ಬಹುಶಃ ೧೯೭೪ನೆಯ ಇಸ್ವಿಯ ಫೆಬ್ರುವರಿ ತಿಂಗಳಿರಬಹುದು. ನಾನು ಧಾರವಾಡದಲ್ಲಿ ಮೊದಲ ವರ್ಷದ ಎಂ.ಎ. (ಕನ್ನಡ) ಓದುತ್ತಿದ್ದೆ. ಅಲ್ಲಿಯ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿರುವಾಗ ಆಗೀಗ ಬೇಂದ್ರೆಯವರ ಭಾಷಣವನ್ನು ಕೇಳುವ, ಅವರನ್ನು ಅತ್ಯಂತ ಸಮೀಪದಿಂದ ನೋಡುವ ಅನೇಕ ಅವಕಾಶಗಳು ಒದಗುತ್ತಿದ್ದವು. ಅವರ ಅದ್ಭುತವಾದ ಮಾತಿನ ಮೋಡಿ, ಕವಿತೆ ಓದುವ ರೀತಿಗಳಿಂದ ಇತರರಂತೆ ಮಂತ್ರಮುಗ್ಧನಾಗುತ್ತಿದ್ದೆ. ಎಂದಾದರೂ ಒಮ್ಮೆ ಈ ದಾರ್ಶನಿಕ ಕವಿಯೊಂದಿಗೆ ಮಾತನಾಡುವ ಭಾಗ್ಯ ಬಂದೀತೇ ಎಂದು ಚಾತಕದಂತೆ ಕಾಯುತ್ತಿದ್ದೆ.

ಹೀಗೊಂದು ಸಭೆಗೆ ಬೇಂದ್ರೆಯವರು ಮುಖ್ಯ ಅತಿಥಿಗಳಾಗಿ ಬಂದರು. ಅಲ್ಲಿ ನನ್ನ ಸ್ನೇಹಿತರನೇಕರು ಇದ್ದುದರಿಂದಲೂ ಬೇಂದ್ರೆಯವರು ಬರುತ್ತಾರೆಂಬ ಹಿಗ್ಗಿನಿಂದಲೂ ನಾನೂ ಹೋಗಿದ್ದೆ. ಸಭೆ ಮುಗಿದ ನಂತರ ಅವರೊಂದಿಗೆ ಮಾತನಾಡುವ ಸುಯೋಗ ನನಗೆ ದೊರೆಯಿತು.

ಬೇಂದ್ರೆಯವರು, "ಗಣಿತ ಅಭ್ಯಾಸ ಮಾಡೂ ವಿದ್ಯಾರ್ಥಿಗಳು ಇಲ್ಲಿ ಯಾರಾದ್ರೂ ಇದ್ದಾರೇನು ?" ಎಂದು ಕೇಳಿದರು. ಆಗ ನಾನು ಸ್ನೇಹಿತನೊಬ್ಬನನ್ನು ಪರಿಚಯಿಸುತ್ತ, "ಇವರು ಸ್ನಾತಕೋತ್ತರ ಮಟ್ಟದ ಗಣಿತ ವಿದ್ಯಾರ್ಥಿ," ಎಂದೆ. ತುಂಬ ಸಂತೋಷಗೊಂಡ ಕವಿವರ್ಯರು ನನ್ನ ಸ್ನೇಹಿತನ ಜತೆ ಗಣಿತದ ಅನೇಕ ಸಮಸ್ಯೆಗಳನ್ನು ಕುರಿತು ಚರ್ಚಿಸಿದರು. ನಾನು ಮೂಕವಿಸ್ಮಿತನಾಗಿ ಆಲಿಸುತ್ತಲೇ ಇದ್ದೆ. ಬೇಂದ್ರೆಯವರಿಗೆ ನನ್ನ

ಕುತೂಹಲ ಅರ್ಥವಾಗಿರಬಹುದು. ಅವರು ನನ್ನೆಡೆಗೆ ನೋಡುತ್ತ, "ನಾನು ಈಗ ಸಂಖ್ಯಾಶಾಸ್ತ್ರದ ಅಭ್ಯಾಸ ನಡಸೀನಿ! ಅದಕ್ಕ ಇದೆಲ್ಲಾ ಅವಶ್ಯ ಅದs!" ಎಂದರು. ಆದರೂ ನಾನು ಮಿಕಿಮಿಕಿ ನೋಡುವುದರ ಮೇಲಿಂದಲೇ ನನಗೇನೂ ಅರ್ಥ ಆಗಿಲ್ಲ ಎಂಬುದು ಅವರಿಗೆ ತಿಳಿದಿದ್ದರಿಂದ, "ಶಬ್ದ ಮೋಸಾ ಮಾಡ್ತಾವ, ಆದ್ರ, ಸಂಖ್ಯಾ ಮಾಡೂದಿಲ್ಲಾ," ಎಂದರು.

ನಾನು, "ನಮಗ ತಿಳಿಯೂ ಹಾಂಗ ಸ್ವಲ್ಪ ಬಿಡಿಸಿ ಹೇಳಿದ್ರs" ಎಂದೆ.

ಕೂಡಲೇ ಅವರು, "ಒಂದು ಶಬ್ದಾ ಅಂದ ಕೂಡಲೇ ಅದು ಕೇಳವರ ಮ್ಯಾಲೆ ಬ್ಯಾರೇ ಬ್ಯಾರೇ ಅನುಭವ, ಸಂವೇದನೆ ನೀಡ್ತsದ. ಕೇಳಿದವರು ತಮ್ಮ ತಮ್ಮ ವಯಸ್ಸು, ಅನುಭವ, ಜ್ಞಾನ, ಸಂಸ್ಕಾರಕ್ಕ ತಕ್ಕಾಂಗ ಅದರ ಅರ್ಥ ಅನುಭವಿಸ್ತಾರ! ಆದ್ರ ಸಂಖ್ಯಾ ಹಾಂಗಲ್ಲ! ಅದು ನಿಖರ ಇರ್ತsದ! ಎರಡು ಅಂದ್ರ ಎರಡs ಆಗ್ತದ ಹೊರ್ತು ಮೂರು ಆಗೂದುಲ್ಲಾ!"

ನಾನು ತಿಳಿದವರಂತೆ ಗೋಣು ಹಾಕಿದೆ. ಆದರೆ ನಿಜಕ್ಕೂ ಆಗ ನನಗೆ ಏನೂ ತಿಳಿದಿರಲಿಲ್ಲ. ನಂತರ ಅವರ ಸಂಖ್ಯಾಶಾಸ್ತ್ರದ ಅಭ್ಯಾಸದ ಕುರಿತಂತೆ ಅಲ್ಪಸ್ವಲ್ಪ ಓದಿದಾಗ ಆಗ ಅವರಿಗೆ ಇದಕ್ಕಿಂತಲೂ ಸರಳವಾಗಿ ಹೇಳಲು ಸಾಧ್ಯವೇ ಇರಲಿಲ್ಲ ಎಂಬುದು ಈಗ ತಿಳಿದು ಬಂದಿತು. ಬೇಂದ್ರೆಯವರ ನೆನಪಾದಾಗಲೆಲ್ಲ ಅಂದಿನ ಆ ವಾಕ್ಯಗಳು ಇಂದಿಗೂ ನನ್ನ ಕಿವಿಯಲ್ಲಿ ಗುಂಯ್‌ಗುಡುತ್ತವೆ.

● ಚಿದಂಬರ ಇನಾಮದಾರ

---

ಇದು ವರಕವಿ ಡಾ. ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಜನ್ಮಶತಮಾನೋತ್ಸವ ವರ್ಷ. ಆ ಶಬ್ದಗಾರುಡಿಗನೊಂದಿಗೆ ನೀವು ಒಂದಷ್ಟಾದರೂ ಸಮಯ ಕಳೆದಿರಬೇಕಲ್ಲವೆ? ನಿಮ್ಮ ನೆನಪುಗಳನ್ನು ದಯವಿಟ್ಟು ನಮಗೆ ಚಿಕ್ಕದಾಗಿ ಬರೆದು ಕಳಿಸಿ.

● ಸಂಪಾದಕ

---

# "ಹೀಗೇ ನಗುನಗುತ್ತ ಇರು ತಂಗೀ..."

**ಬೇಂ**ದ್ರೆಯವರ 'ಸಖೀಗೀತ'ದ "ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುತ ಹೊಸದಾಗಿ, ರಸವಾಗಿ ಹರಿಯುತಿರೆ ಸುಖ-ದುಃಖ ಸಂಗಮವಾದ ಹೃದ್ರಂಗವು ಪಾವನವೆಂಬೆನು ಎಂದೆಂದಿಗೂ" ಈ ನುಡಿಯ ಸಂದೇಶ, ಇಂದಿಗೂ ನನ್ನ ನೆನಪಿನಲ್ಲಿ ಅಚ್ಚಳಿಯದೇ ಉಳಿದಿದೆ. ನನ್ನ ಬಾಳಿಗೆ ದಾರಿದೀಪವಾಗಿದೆ. ಬೇಂದ್ರೆ ನನ್ನ ಹೃನ್ಮಂದಿರದಲ್ಲಿ ಅಭಿಮಾನದ ಆರಾಧ್ಯಮೂರ್ತಿಯಾಗಿ ಉಳಿದಿದ್ದರೆ ಅದು ಕೇವಲ ಅವರ ಕವಿತೆಗಳನ್ನು ಓದಿದ್ದರಿಂದ ಅಲ್ಲ, ಅವರ ಸರಳತೆ, ಸಜ್ಜನಿಕೆ, ಸ್ನೇಹಪರತೆ, ಹಾಸ್ಯಪ್ರಜ್ಞೆ, ವಾಕ್ಚಾತುರ್ಯವನ್ನು ಹತ್ತಿರದಿಂದಲೇ ಕಂಡದ್ದರಿಂದ, ಉಂಡದ್ದರಿಂದ.

ನಾನು ಮೊದಲು ಬೇಂದ್ರೆಯವರನ್ನು ಕಂಡದ್ದು ನನ್ನನ್ನವರು ಪರಿಚಯಿಸಿಕೊಂಡದ್ದು ಹುಬ್ಬಳ್ಳಿಯಲ್ಲಿ ನನ್ನಣ್ಣ ಬಿ.ಎಚ್. ಶ್ರೀಧರರ ಮನೆಯಲ್ಲಿ. ನಮ್ಮಣ್ಣ ಆಗ 'ಕರ್ಮವೀರ' ಪತ್ರಿಕೆಯ ಉಪಸಂಪಾದಕನಾಗಿದ್ದ. ಅವನ ಮನೆ, ಸಾಹಿತಿಗಳ, ಸಾಹಿತ್ಯಾಸಕ್ತರ, ನೆಲವೀಡಾಗಿತ್ತು, ಸರಸ್ವತಿ ಮಂದಿರವಾಗಿತ್ತು. ದ.ರಾ. ಬೇಂದ್ರೆ, ಅಡಿಗ, ಎ.ಜಿ. ಭಟ್ಟ, ಗೌರೀಶ ಕೈಕಿಣಿ', ಶಿವರಾಮ ಕಾರಂತ ಮೊದಲಾದವರು ಹುಬ್ಬಳ್ಳಿಗೆ ಬಂದಾಗ ಇರುತ್ತಿದ್ದುದು ನಮ್ಮಲ್ಲಿಯೆ. ಬಂದವರು, ಅವರನ್ನು ನೋಡಲು ಬರುವವರು, ಆಗ ನಡೆಯುತ್ತಿದ್ದ ಆ ಸಾಹಿತ್ಯಕ ಚರ್ಚೆ, ಕವಿತಾ ವಾಚನ, ಅಲ್ಲಿ ನಡೆಯುತ್ತಿದ್ದ ವಿದ್ವದ್ಗೋಷ್ಠಿಯ ರಸಾಸ್ವಾದನೆ ಅದೆಷ್ಟು ಮೌಲಿಕ, ರೋಚಕವಾಗಿರುತ್ತಿತ್ತು! ಅದರಲ್ಲಿಯೂ ಬೇಂದ್ರೆಯವರು ಬರುವವರೆಂದರೆ ನಮ್ಮ ಮನೆ ಹಬ್ಬದ ಸಂಭ್ರಮ

ದಿಂದ ತುಂಬಿರುತ್ತಿತ್ತು. ಹೊರಗಿನಿಂದ ಒಳಗೆ ಬರುವಾಗ ಬಾಗಿಲ ಬಳಿಯಲ್ಲಿ ಪುಟ್ಟ ಪಾದರಕ್ಷೆಯನ್ನು ಕಂಡರೆ, ವಾಮನಕಾಯದ ತ್ರಿವಿಕ್ರಮ ಬೇಂದ್ರೆ ಒಳಗಿದ್ದಾರೆಂದು ಗೊತ್ತು.

ಸಭೆಯಲ್ಲಿ ಭಾಷಣ ಮಾಡಬೇಕಾದಾಗ ಅವರ ವಾಗ್ಝರಿ ನಿರಂತರವಾಗಿ ಹರಿಯುತ್ತಿತ್ತು. ಅನೇಕ ವಿಚಾರದ ಜೊತೆ, ಶಬ್ದವೊಂದಕ್ಕೆ ಬಹುವಿಧ ಅರ್ಥ. ಹಾಸ್ಯಚಟಾಕಿಗಳು ಸಭಿಕರನ್ನು ಮೋಡಿ ಮಾಡುತ್ತಿದ್ದವು. ಒಮ್ಮೆ ಅವರು ಒಂದು ಭಾಷಣದಲ್ಲಿ 'ಸಾವಿರದಾಚೆ' ಎಂದು ಉಪಯೋಗಿಸಿದಾಗ, ಸಭಿಕರು 'ಸಾವು ಇರದ ಆಚೆ' ಎಂದು ಅರ್ಥ ಮಾಡಿಕೊಂಡಾಗ, ಬೇಂದ್ರೆಯವರೇ ಆಶ್ಚರ್ಯಪಟ್ಟಿದ್ದರಂತೆ.

ನಮ್ಮ ಅಣ್ಣನ ಮನೆಗೆ ಬೇಂದ್ರೆ ಬಂದಾಗಲೆಲ್ಲ ಅವರ ಹತ್ತಿರವೇ ಕುಳಿತು ಅವರ ಮಾತುಗಳನ್ನು ಕೇಳುತ್ತಿದ್ದೆ. ಅವರೂ ನನ್ನೊಡನೆ ಆತ್ಮೀಯವಾಗಿ ಮಾತಾಡುತ್ತಿದ್ದರು. ನನಗಾಗ ೧೩-೧೪ ವರ್ಷವಿರಬಹುದು. ಮುಂದೆ ನನಗೆ ಮದುವೆಯಾಗಿ ಕುಂದಾಪುರಕ್ಕೆ ಹೋದ ಮೇಲೂ ವರ್ಷಕ್ಕೊಮ್ಮೆ ಅಣ್ಣನ ಮನೆಗೆ ಹೋದಾಗ (ಮುಂದೆ ಅವನು ಕುಮಟಾ, ಶಿರಸಿ, ಕಾಲೇಜುಗಳಲ್ಲಿ ಪ್ರೊಫೆಸರ್ ಆಗಿದ್ದ.) ನವರಾತ್ರಿಯಲ್ಲಿ ಮಾರಿಕಾಂಬಾ ಜಾತ್ರೆ ಹಾಗೂ ಸಂಘ ಸಂಸ್ಥೆಗಳ ವಾರ್ಷಿಕೋತ್ಸವ ಸಂದರ್ಭಗಳಲ್ಲಿ ಬೇಂದ್ರೆಯವರನ್ನು ಕರೆಸಿದಾಗ, ಅವರು ಉಳಿದುಕೊಳ್ಳುತ್ತಿದ್ದುದು ಅಣ್ಣನ ಮನೆಯಲ್ಲಿಯೆ. ಮೊದಲಿನಿಂದಲೂ ಅವರೆಂದರೆ ಆತ್ಮೀಯ ಭಾವ, ಗೌರವ, ಅಭಿಮಾನ ನನ್ನಣ್ಣನಿಗೆ. ಅವರಿಗೂ ನಾವೆಂದರೆ ಅಷ್ಟೇ ಆದರ.

ಒಮ್ಮೆ ಅವರನ್ನು ಬೀಳ್ಕೊಡುವಾಗ ನಾನು-ಅತ್ತಿಗೆ ಅವರಿಗೆ ನಮಸ್ಕರಿಸಿದಾಗ, "ಹೀಗೇ ನಗು ನಗುತ್ತಾ ಇರು ತಂಗಿ. ಎಂತಹ ಕಷ್ಟ ಬಂದರೂ ನಿನ್ನ ಮುಖದ ನಗು ಮಾಸದಿರಲಿ," ಎಂದು ಹರಸಿದ್ದು ಇಂದಿಗೂ ನೆನಪಿದೆ. ಮುಂದೆ ನನಗೆ ಕ್ಷಯರೋಗ ಆಗಿ ಶಿರಸಿಯ ಅಣ್ಣನ ಮನೆಗೆ ಬಂದಾಗ, ನವರಾತ್ರಿಯ ಉತ್ಸವಕ್ಕೆ ಬೇಂದ್ರೆ ವಿಶೇಷ ಆಹ್ವಾನಿತರಾಗಿ ಬಂದಿದ್ದರು. ಆಗ ಅವರು ಸಂಖ್ಯಾಶಾಸ್ತ್ರ ಪರಿಣಿತರೂ ಜ್ಯೋತಿಷಿಗಳೂ ಆಗಿದ್ದರು. ದೈಹಿಕವಾಗಿ, ಮಾನಸಿಕವಾಗಿ ತೀರ ಕುಸಿದ ನಾನು ಅವರ ಬಳಿ ನನ್ನ ಜಾತಕ ತೋರಿಸಿದೆ. ಅವರು, "ನನ್ನದೂ ಸಿಂಹರಾಶಿ, ನಿನ್ನದೂ ಸಿಂಹ ರಾಶಿ ಮಗಳೆ, ಕಷ್ಟಗಳು ಬರುತ್ತವೆ. ಆದರೆ ಅದಕ್ಕೆ ಹೆದರಬೇಡ. ದಿನಾ ಸೂರ್ಯ ನಮಸ್ಕಾರ ಮಾಡು. ಮುಂದೆ ಒಳಿತಾಗುತ್ತದೆ," ಎಂದರು. ಆ ಭರವಸೆ ಇಂದಿಗೂ ನನಗೆ ಆತ್ಮಸ್ಥೈರ್ಯವನ್ನು ಕೊಡುತ್ತಿದೆ.

● ಎ. ರಮಾ ಕಾರಂತ

## ಕಲಾಶ್ನಿಕೋವ್‌ನ ಕಂಬನಿ

*ವಿಶ್ವವಿಖ್ಯಾತ ಎ.ಕೆ.–೪೭ ಎಂಬ ಮಾರಕ ರೈಫಲ್ಲನ್ನು ಸೃಷ್ಟಿಸಿದ ರಶಿಯದ ಮಿಖಾಯಿಲ್ ಕಲಾಶ್ನಿಕೋವ್ ಈಗ ಕಂಬನಿ ಮಿಡಿಯುತ್ತಿದ್ದಾನಂತೆ. ದ್ವಿತೀಯ ಮಹಾಯುದ್ಧದ ಕಾಲದಲ್ಲಿ ಭಾರವಾದ ರೈಫಲ್ಲುಗಳನ್ನು ಹೊತ್ತು ತಿರುಗಾಡಬೇಕಾಗಿದ್ದ ಸೈನಿಕ ಬಂಧುಗಳ ಕಷ್ಟವನ್ನು ನೋಡಲಾಗದೆ ತಾನು ರೂಪಿಸಿದ ಹಗುರ, ಸರಳ ಹಾಗೂ ವಿಶ್ವಸನೀಯ ರೈಫಲ್ಲು ಇಂದಿನ ದಿನಗಳಲ್ಲಿ ನಿರಪರಾಧಿಗಳನ್ನು ಕೊಲ್ಲಲು ಬಳಕೆಯಾಗುತ್ತಿರುವುದು ಅದಕ್ಕೆ ಒಂದು ಕಾರಣವಾದರೆ, ಅದನ್ನು ಉತ್ಪಾದಿಸುತ್ತಿರುವವರೆಲ್ಲರೂ ಸಿರಿವಂತರಾಗಿದ್ದರೆ, ತಾನು ಮಾತ್ರ ಬಡವನಾಗಿಯೇ ಉಳಿದಿರುವುದು ಇನ್ನೊಂದು ಕಾರಣವಂತೆ. ಈ ರೈಫಲ್ಲನ್ನು ಸೃಜಿಸಿದ್ದಕ್ಕಾಗಿ ಈಚೆಗೆ ೭೦ರ ದಶಕಲ್ಲಿರುವ ಕಲಾಶ್ನಿಕೋವ್‌ನನ್ನು ಅಧ್ಯಕ್ಷ ಬೋರಿಸ್ ಎಲ್‌ಸ್ಟಿನ್‌ರು ಸನ್ಮಾನಿಸಿದರೂ ಅವರು ಹಣವನ್ನೇನೂ ಕೊಡದ ಕಾರಣ ಅವನ ಕಂಬನಿ ಹರಿಯುತ್ತಲೇ ಇದೆಯಂತೆ!*

● ಕೆ. ವೆಂಕಟಾಚಾರ್

# ನೆನಪು ನೆರಳಿನಲ್ಲಿ

ನನ್ನ ತಾಯಿಗೆ ಹೃದಯಾಘಾತವಾಗಿದ್ದರಿಂದ ಅವರನ್ನು ದಾವಣಗೆರೆಯ ಒಂದು ಹಾಸ್ಪಿಟಲ್‌ನಲ್ಲಿ ಸೇರಿಸಲಾಗಿತ್ತು. ಬಹುಜನರಿಗೆ ಬೇಕಾಗಿದ್ದ, ಮಾತೃ ಹೃದಯದ ಅವರನ್ನು ನೋಡಲು ಬರುತ್ತಿದ್ದರು. ಅಂದು ಬಂದವರು ಒಬ್ಬ ಧಡೂತಿ ವ್ಯಕ್ತಿ. ಗರಿಗರಿಯಾದ ರೇಶಿಮೆ ಲುಂಗಿ, ರೇಶಿಮೆ ಜುಬ್ಬಾ, ಹಣೆಯಲ್ಲಿ ಉದ್ದವಾದೊಂದು ಕೆಂಪು ನಾಮ, ಕೊರಳಲ್ಲಿ ಮಿರಮಿರನೆ ಮಿಂಚುವ ದಪ್ಪವಾದ ಚಿನ್ನದ ಚೈನು! ಕೈಯಲ್ಲಿ ನಾಲ್ಕು ಎಳೆನೀರುಕಾಯಿಗಳು, ಕೈಚೀಲದಲ್ಲಿ ಮೋಸಂಬಿ ಹಾಗೂ ಸೇಬು ಹಣ್ಣುಗಳು. ಬಂದ ಆ ವ್ಯಕ್ತಿ ಮಲಗಿದ್ದ ತಾಯಿಯವರ ಪಾದಗಳನ್ನು ಥಟ್ಟನೆ ಹಿಡಿದುಕೊಂಡು ಕಣ್ಣಿಗೊತ್ತಿಕೊಂಡರು. ನನ್ನ ಜೊತೆಗೆ ಮಾತನಾಡುತ್ತಲೇ ಎರಡು ಎಳೆನೀರು ಕೊಚ್ಚಿ, ಸೋಸಿ ನಳಿಕೆಯ ಮುಖಾಂತರ ತಾಯಿಗೆ ಕುಡಿಸಿದರು. ಹಾಗೇ ತಾಯಿಯವರ ಆರೋಗ್ಯ ವಿಚಾರಿಸುತ್ತಲೆ ಮೋಸಂಬಿಯ ತೊಳೆ ಬಿಡಿಸಿ ಅದರ ರಸ ತೆಗೆದು ಮತ್ತರ್ಧ ಗಂಟೆಯ ನಂತರ ಅದನ್ನೂ ಕೊಳವೆಯ ಮುಖಾಂತರ ಕುಡಿಸಿದರು. ತಾಯಿಯವರ ಬೇಕು-ಬೇಡಗಳನ್ನು ವಿಚಾರಿಸುತ್ತಲೇ ಸೇಬಿನ ಸಿಪ್ಪೆ ತೆಗೆದು, ಅದನ್ನು ಹೆರೆದು ಪಕ್ಕದ ಜ್ಯೂಸ್ ಅಂಗಡಿಯಿಂದ ರಸ ಹಿಂಡಿಸಿ ತಂದು, ಸ್ವಲ್ಪ ಹೊತ್ತಿನ ನಂತರ ಅದನ್ನೂ ಕುಡಿಸಿದರು. ಹೀಗೆ ಪ್ರೀತಿಯಿಂದ ಅವರು ಒಂದೇ ಸಮನೆ ಮಾಡುತ್ತಿದ್ದ ಸೇವೆಯನ್ನು ನನ್ನ ತಾಯಿ ಮಾತನಾಡದೆ ಸ್ವೀಕರಿಸುತ್ತಿದ್ದರು. ಪ್ರೀತಿಯಿಂದ ಇಷ್ಟು ಉಪಚರಿಸುತ್ತಿರುವ ಈ ವ್ಯಕ್ತಿ ಯಾರಿರಬಹುದು? ನನ್ನ ತಾಯಿ ಮಲಗಿದ್ದಲ್ಲಿಂದಲೇ ಕೇಳಿದರು,

"ಯಾರಿವರು?"

"ಇವರು, ನಮ್ಮ ಕಿರಾಣಿ ಅಂಗಡಿಯ ಮಾಲಿಕರು. ರಾಮಣ್ಣ ಶೆಟ್ರು ಅಂತ...." ಎಂದೆ.

"ಒಂಚೂರು ಎಬ್ಬಿಸಿ ಕೂಡಿಸ್ತೀಯಾ?" ಅಂದರು. ತಾಯಿಗೆ ದಿಂಬಿನ ಆನಿಕೆ ಕೊಟ್ಟು ಎಬ್ಬಿಸಿ ಕೂಡಿಸಿದೆ.

"ರಾಮಣ್ಣ ಶೆಟ್ರs.... ಹತ್ತಿರ ಬರ್ರಿ..." ಎಂದು ನನ್ನ ತಾಯಿ ಅಂದಾಗ, ಆತ ಸಮೀಪದಲ್ಲೇ ಕುಳಿತುಕೊಂಡರು.

"ಅಜ್ಜೀಯವ್ರ, ಆಯಾಸ ಮಾಡ್ಕೋಬ್ಯಾಡ್ರೀ.... ಏನು ಹೇಳ್ರಿ... ನಾನೂ ನಿಮ್ಮ ಮಗನs...." ಅಂದರು ರಾಮಣ್ಣ.

"'ರಾಮಣ್ಣ ಅವರs, ನನ್ನ ಮಗಂದು ದೊಡ್ಡ ಸಂಸಾರ. ಬರೋಹೋಗೋ ಮಂದಿ ಜಾಸ್ತಿ. ಅದಕ್ಕs ಅವಗ ಎಲ್ಲಾ ಸಾಮಾನಾನೂ ಒಂಚೂರು ಸೋವಿ ಮಾಡಿ ಕೊಡ್ರೆಪಾ...." ಎಂದರು ತಾಯಿ.

ಇಹಲೋಕ ಯಾತ್ರೆಗೆ ಸಿದ್ಧಳಾಗಿದ್ದರೂ ಅವರು ಮಗನಿಗಾಗಿ ಪರಿತಪಿಸುತ್ತಿರುವ ರೀತಿಯನ್ನು ನೋಡುತ್ತಿದ್ದಂತೆಯೇ ನನ್ನ ಕಣ್ಣಿಂದ ಬಳಬಳನೆ ನೀರು ಹರಿಯತೊಡಗಿದವು. ರಾಮಣ್ಣನವರಿಗೆ ತಮ್ಮ ತಾಯಿಯ ನೆನಪಾಗಿರಬಹುದು. ಎದ್ದು ಹೊರನಡೆದುಬಿಟ್ಟರು.

• ಭಾರತಿ ಕುಲಕರ್ಣಿ

ಇಪ್ಪತ್ತು ವರ್ಷಗಳ ಹಿಂದೆ ನಡೆದ ಘಟನೆ. ರೊಟ್ಟಿ ಹೆಂಚು, ಡಬ್ಬಿ, ವಂದರಿ, ಸೌಟು, ದೀಪಗಳನ್ನು ಮಾರುವ ಮುಸ್ಲಿಂ ಕುಟುಂಬವೊಂದು ನಮ್ಮ ಪಕ್ಕದ ಮನೆಯಲ್ಲಿ ಇತ್ತು. ಗಂಡ-ಹೆಂಡತಿ ಮಾತ್ರ ಇದ್ದು, ಅವರಿಗೆ ಮಕ್ಕಳಿರಲಿಲ್ಲ. ಅನ್ಯ ಜಾತಿಯವರೆಂದು ಅಕ್ಕಪಕ್ಕದವರು ಜಾಸ್ತಿ ಮಾತಾಡುತ್ತಿರಲಿಲ್ಲವಾದ್ದರಿಂದ ಆ ಮನೆಯಾಕೆ ಭೇದಭಾವ ಕಾಣದ ನಮ್ಮ ಮನೆಗೆ ತುಂಬ ಹತ್ತಿರವಾದರು. ಕುಳ್ಳಗೆ ಕಪ್ಪಗೆ ಇದ್ದ ನನ್ನ ಕಂಡರಂತೂ ಆಕೆಗೆ ತುಂಬ ಪ್ರೀತಿ. ಬೆಳಿಗ್ಗೆ ಎದ್ದು ಹೊರಗೆ ಬಂದು ಬಿಸಿಲಿಗೆ ನಿಲ್ಲುತ್ತಿದ್ದಂತೆ ಎತ್ತಿಕೊಂಡು ಹೋಗಿ ಕಾಫಿಕೊಟ್ಟು ಬಿಸಿನೀರಿದ್ದರೆ ಮೂರು-ನಾಲ್ಕು ಬಾರಿ ಸೋಪು ಹಾಕಿ ಸ್ನಾನ

ಮಾಡಿಸಿ ತಿಂಡಿ ತಿನ್ನಿಸಿ ಮುಖಕ್ಕೆ ಪೌಡರ್ ಬಳಿದು ದೃಷ್ಟಿಬೊಟ್ಟು ಇಟ್ಟು ಮುದ್ದಿಸಿ ಮನೆಗೆ ಕಳಿಸಿ ಕೊಡುತ್ತಿದ್ದಳು.

ಮುಂದೆ ಆಕೆಯ ಗಂಡ ಬೇರೆ ಮದುವೆಯಾಗುವ ಯತ್ನದಲ್ಲಿದ್ದ. ಪ್ರತಿ ದಿವಸ ಜಗಳ ತೆಗೆದು ಆಕೆಯನ್ನು ಹೊಡೆಯುತ್ತ 'ಸೈತಾನ್ ಹಿಡಿದಿದೆ' ಎಂದು ದೂರುತ್ತ ನಿಜವಾಗಿಯೂ ಆಕೆಯನ್ನು ದೆವ್ವ ಹಿಡಿದಂತೆ ಮಾಡಿಬಿಟ್ಟಾಗ ಆಕೆಯ ತವರಿನವರು ಕರೆದುಕೊಂಡು ಹೋದರು. ಹೋಗುವಾಗ ಕೆದರಿದ ಕೂದಲು, ಸಣ್ಣಗಾಗಿದ್ದ ಆಕೆ ಬೆದರಿ ಹಿಂದೆ ಸರಿಯುತ್ತಿದ್ದ ನನ್ನ ಕೆನ್ನೆ ಸವರಿ, "ಬರ್‍ತೀನಿ ಬೇಟಾ," ಅಂತ ನನಗೆ ಟಾಟಾ ಮಾಡಿದಳು. ನಂತರ ಅಕ್ಕ ಪಕ್ಕದವರು ಮೂರು ತಿಂಗಳ ನಂತರ ಆಕೆ ತೀರಿ ಹೋದಳೆಂದು ಮಾತಾಡಿದ್ದು ಕೇಳಿದರೂ ಆಗ ದುಃಖವಾಗಿರಲಿಲ್ಲ. ಆದರೆ ಬುದ್ಧಿ ಬೆಳೆದಂತೆ ಅಂದು ಮುದ್ದಾದ ಮಕ್ಕಳ ಗುಂಪೇ ಇದ್ದರೂ ಕಪ್ಪಗೆ, ಕುಳ್ಳಗೆ ಇದ್ದ ನನ್ನನ್ನು ಸ್ವಂತ ಮಗನಂತೆ ಸುಮಾರು ದಿನ ಸ್ನಾನ ಮಾಡಿಸಿ, ತಿಂಡಿ ತಿನ್ನಿಸಿ, ಮುದ್ದಿಸಿದ ಆ ತಾಯಿಯ ನೆನಪಾದಾಗಲೆಲ್ಲ ಕಣ್ಣೀರ ಹನಿಗಳು ಕೆನ್ನೆಯ ಮೇಲೆ ಉರುಳುತ್ತವೆ.

• ಕುಡಿನೋಟ ಕೃಷ್ಣಮೂರ್ತಿ

ಅಂದು ಒಂಬತ್ತನೆ ತರಗತಿಯ ಮಕ್ಕಳಿಗೆಲ್ಲ ಹೇಳಿದ್ದೆ "ನಾಳೆ ದಿನ ಪ್ರಶ್ನೆಗಳನ್ನು ಕೇಳುತ್ತೇನೆ, ಚೆನ್ನಾಗಿ ಓದಿಕೊಂಡು ಬಂದಿರಬೇಕು," ಎಂದು. ಎಂದಿನಂತೆ ಮಧ್ಯಾಹ್ನ ಆರನೆ ಪಿರಿಯಡ್ ಬೆಲ್ ಆಗುತ್ತಿದ್ದಂತೆ ಬೆತ್ತವನ್ನು ಹಿಡಿದು ಆ ತರಗತಿಗೆ ಹೊರಟೆ.

ನಾನು ವಿದ್ಯಾರ್ಥಿಗಳನ್ನು ಕುರಿತು ಪ್ರಾಸ್ತಾವಿಕ ಮಾತನ್ನು ಆಡುತ್ತ, ಹಿಂದಲ ದಿನದ ಮನೆಗೆಲಸವನ್ನು ತಿದ್ದುತ್ತ ಪ್ರತಿಯೊಬ್ಬ ವಿದ್ಯಾರ್ಥಿಯನ್ನು ವಿಚಾರಿಸುತ್ತ ಹೋದೆ. ನಾಲ್ಕನೆ ಬೆಂಚಿನಲ್ಲಿನ ತಿಮ್ಮರಾಯಿ ಎದ್ದು ನಿಂತ. "ಏನೋ ?" ಎಂದೆ. ಆತ ಮೌನವಾಗಿ ತಲೆತಗ್ಗಿಸಿದ ! "ಯಾಕೆ ಹೋಮ್ ವರ್ಕ್ ಮಾಡಿಲ್ಲವೆ ?" ಎಂದೆ. ಉತ್ತರ ಮಾತ್ರ ಶೂನ್ಯ. ಲೀಡರನ್ನು ವಿಚಾರಿಸಿದೆ. "ಸಾರ್, ಆತ ಯಾವತ್ತೂ ನೋಟ್ಸ್ ಬರೆಯುವುದಿಲ್ಲ; ಹೋಮ್ ವರ್ಕ್ ಮಾಡುವುದಿಲ್ಲ," ಎಂದೆಲ್ಲ ಅವನ ಜಾತಕವನ್ನು ಕೊಟ್ಟ.

ಸರಿ, ಆ ವಿದ್ಯಾರ್ಥಿಯನ್ನು ಹಾಗೇ ನಿಂತಿರಲು ಹೇಳಿ ಮಿಕ್ಕ ವಿದ್ಯಾರ್ಥಿಗಳ ಹೋಮ್‌ವರ್ಕ್ ತಿದ್ದಿ ಪ್ರಶ್ನೆಗಳಿಗೆ ಉತ್ತರ ಪಡೆಯಲು ಅಣಿಯಾದೆ. ಸಮಾಜ ವಿಜ್ಞಾನವಾದ್ದರಿಂದ ಒಂದು ವಾಕ್ಯದ, ಎರಡು ವಾಕ್ಯದ ಸರಳ ಪ್ರಶ್ನೆಗಳು ಆರಂಭಿಸಿದೆ- ಅದೂ ಮಧ್ಯವಾರ್ಷಿಕ ಪರೀಕ್ಷೆ ಹತ್ತಿರವಾದ್ದರಿಂದ ! ಉತ್ತರಿಸುವ ಸರದಿ ತಿಮ್ಮರಾಯಿಯದು. ಆತನಿಂದ ಉತ್ತರ ಬರಲಿಲ್ಲ. ಕೈಯಲ್ಲಿ ಹಿಡಿದಿದ್ದ ಬೆತ್ತವನ್ನು ಎತ್ತಿದೆ. ಇನ್ನೇನು ಏಟು ಬೀಳಬೇಕು- ಅಷ್ಟು ಹೊತ್ತಿಗೆ ಆ ಹುಡುಗ ಅಳಲಾರಂಭಿಸಿದ. ನನಗೇಕೋ ಮನಸ್ಸು ಹಾಗೇ ಕರಗಿತು. ಮೇಲೆ ಎತ್ತಿದ ಕೈ ಕೆಳಗೆ ಇಳಿಯಿತು.

"ಯಾಕಪ್ಪ, ನಿನಗೆ ಓದಲು-ಬರೆಯಲು ಇಷ್ಟ ವಿಲ್ಲವೆ ? ಯಾವ ಊರು ? ಬೆಳಿಗ್ಗೆ ಊಟವೋ, ತಿಂಡಿಯೋ ?" ಇತ್ಯಾದಿ ಪ್ರಶ್ನಿಸಿದೆ.

ಅಳುತ್ತಲೆ, "ಸಾರ್, ನಮ್ಮ ಊರು ಇಲ್ಲಿಗೆ ಹದಿನೈದು ಮೈಲಿ ದೂರ. ದಿನಾಲೂ ನಡೆದು ಬರುತ್ತೇನೆ. ಬೆಳಿಗ್ಗೆ ಊಟ ಮಾಡಿದರೆ, ಸಂಜೆತನಕ ಏನೂ ಇಲ್ಲ. ಹೊಲ, ಕೊಟ್ಟಿಗೆ ಕೆಲಸದ ಜವಾಬ್ದಾರಿಯೂ ನನ್ನದು. ಪುಸ್ತಕ ಕೊಳ್ಳಲು ಕಾಸಿಲ್ಲ. ಬರೆಯಲು ಪೆನ್ನು-ಇಂಕು ಇಲ್ಲ, ಹೊಟ್ಟೆ ಹಸಿದರೆ ತಿನ್ನಲು ಕಾಸಿಲ್ಲ. ಅಪ್ಪ ಸತ್ತು ವರುಷವಾಯಿತು." ಹೀಗೆ ಅಳುತ್ತ ಮಾತು ನಿಲ್ಲಿಸಿದ ! ಕಣ್ಣೀರು ಮಾತ್ರ ಹರಿಯುತ್ತಿತ್ತು !

ಪಾಪ ! ವಿನಾಕಾರಣ ಯೋಚಿಸದೆ ನಾನು ಹೊಡೆದಿದ್ದರೆ ಗುಬ್ಬಿ ಮೇಲೆ ಬ್ರಹ್ಮಾಸ್ತ್ರವಾಗುತ್ತಿತ್ತು ! ಇದೊಂದು ಹುಡುಗನ ನೋವು. ಪ್ರಶ್ನಿಸಿದಾಗ ಇಂತಹ ಹತ್ತು ಪ್ರಕರಣ ಒಂದು ತರಗತಿಗೆ. ಹಾಗೇ ಶಾಲೆ, ಹಾಗೇ ಊರು.... ಲೆಕ್ಕ ಹಾಕುತ್ತ ಹೋದರೆ ಅದಕ್ಕೆ ಎಣೆಯೇ ಇಲ್ಲ. ಆದರೂ ಮಾಸ್ತರಗಿರಿ ನಿಜಕ್ಕೂ ಸವಾಲೇ ಸರಿ. ನೂರು ಕನಸು-ಭಾವನೆ, ಆಸೆ-ನಿರಾಶೆ, ನೋವು, ಕಷ್ಟ-ಕಾರ್ಪಣ್ಯಗಳಲ್ಲಿ ಅರಳುವ ಕುಸುಮಕ್ಕೆ ಕಾವಲಿನ ಕೆಲಸ ಅಸಾಧ್ಯ-ಅಪೂರ್ವ. ಅದು ತೆರೆದ ಮನಸ್ಸಿದ್ದರೆ ಮಾತ್ರ. ಅಲ್ಲವೆ ?

• ಸಾ.ರಾ. ನರಸಿಂಹ ಪ್ರಸಾದ

ಸಮಯ: ಏಸುಕ್ರಿಸ್ತ ಹುಟ್ಟುವುದಕ್ಕೆ
ಇಪ್ಪತ್ತೈದು ವರ್ಷಗಳ ಮೊದಲು.
ಕಾಲ: ವಸಂತ ಋತು. ಸ್ಥಳ: ಈಜಿಪ್ತದ
ನೈಲ್ ನದಿಯ ನಡುಗಡ್ಡೆ.
ಸಂದರ್ಭ: ರೋಮನ್ ನಾವೆಗಳ ಚಿಕ್ಕ
ದಳವೊಂದು ಬಂದರದಲ್ಲಿ ಸೇರಿದ್ದು.

ಅಂಬಿಗರು ಹುಟ್ಟುಗಳನ್ನು ನಾವೆಗಳೊಳಗೆ ಎಳೆದುಕೊಂಡರು. ದೋಣಿಗಳ ಮೂತಿಗಳು ದಡದ ಮರಳನ್ನು ತೂರಿ ನಿಂತವು. ಸೈನಿಕರು ಕತ್ತಿಗಳನ್ನು ಓರಿದು ದಡ ಸೇರಿದರು. ನದಿಯ ಉತ್ತರ ದಡದ ಮೇಲೆ ಸಿಯೆನೆಗೆ (ಈಗಿನ ಆಸ್ವಾನ್ ನಗರ) ಎದಿರುಮುಖವಾಗಿ ಲಗುಬಗನೆ ಸುರಕ್ಷಿತ ಶಿಬಿರವೊಂದನ್ನು ರಚಿಸಿದರು. ಸೈನಿಕರು ಹಿಡಿದಿದ್ದ ಹಲಗೆಯ ಮೇಲೆ ರೋಮನ್ ಚಕ್ರಾಧಿಪತ್ಯದ ಈಜಿಪ್ತ ಪ್ರಾಂತದ ಸೈನ್ಯಾಧಿಕಾರಿ ನಾಜೂಕಾಗಿ ಹೆಜ್ಜೆ ಹಾಕುತ್ತ ದಡ ಸೇರಿದ. ಆತನ ಹೆಸರು ಏಲಿಯಸ್ ಗ್ಯಾಲಸ್. ರಾಜವಲಯದ ಆಡಳಿತ ರಂಗದಲ್ಲಿ ಉದಯೋನ್ಮುಖ ವ್ಯಕ್ತಿ. ಕೆಳ ಈಜಿಪ್ತದಿಂದ ಜಲಮಾರ್ಗದಲ್ಲಿಯೇ ಸಾಗಿ ಬಂದಿದ್ದ. ರೋಮನ್ ಚಕ್ರವರ್ತಿ ಅಗಸ್ಟ್‌ಸ್‌ನ ಆಣತಿಯಂತೆ ಸೈನ್ಯ ದಳವೊಂದರ ಖಾಯಂ ಶಿಬಿರಕ್ಕಾಗಿ ನಿವೇಶನವನ್ನು ಅರಸುವುದು ಆತನ ಪಯಣದ ಉದ್ದೇಶ. ನೈಲ್ ನದಿಯ ಉತ್ತರ ಕಡೆಯಿಂದ ಆಕ್ರಮಣ ಮಾಡಬಹುದಾದ ವೈರಿಗಳನ್ನು ತಡೆಗಟ್ಟಲು ಅಂಥ ಸ್ಥಳಾವಕಾಶ ಬೇಕಾಗಿತ್ತು.

ರೋಮನ್ನರಿಗೆ ಅಪರಿಚಿತವಾದ ಆ ಪ್ರದೇಶಗಳಲ್ಲಿ ಮುಂದುವರಿಯಬೇಕಾಗಿದ್ದ ಗ್ಯಾಲಸ್ ತನ್ನೊಂದಿಗೆ ಗಡಿ ಪ್ರದೇಶಗಳ ಮೇಲ್ಮೈ ಲಕ್ಷಣಗಳ ನಕ್ಷೆಯ ರಚನೆಗಾಗಿ ಒಬ್ಬ ಭೂಗೋಳ ತಜ್ಞನನ್ನು ಕರೆದುಕೊಂಡೇ ಬಂದಿದ್ದ. ಅವನ ಹೆಸರು ಸ್ಟ್ರಾಬೋ. ಭೂಗೋಳ ಪಂಡಿತ. ವಿಶ್ವದ ಸುಪ್ರಸಿದ್ಧ ಗ್ರಂಥಕರ್ತೃಗಳಲ್ಲಿ ಒಬ್ಬ. ಇಂದಿಗೂ ಸ್ಟ್ರಾಬೋ ಬರೆದ 'ಭೂಗೋಳ' ಗ್ರಂಥವೇ ಆತನ ಕಾಲದ ಮಧ್ಯ ಪ್ರಾಚ್ಯದ ಬಗೆಗಿನ ಮಾಹಿತಿಗಳಿಗೆ ಮಹತ್ವದ ಆಕರವೆನಿಸಿದೆ.

ಸ್ಟ್ರಾಬೋನ ಬೌದ್ಧಿಕ ಸಾಮರ್ಥ್ಯದ ಅರಿವು



ಗ್ಯಾಲಸ್‌ಗೆ ಅತಿ ಶೀಘ್ರವಾಗಿ ಆಯಿತು. ಎಲಿಫೆಂಟೈನ್ ದ್ವೀಪದಲ್ಲಿದ್ದ ಒಂದು ನಿಗೂಢ ಬಾವಿಯ ಬಳಿಗೆ ರೋಮನ್ ದಳಪತಿಗಳ ದಂಡು ಗ್ಯಾಲಸ್‌ನನ್ನು ಕರೆದೊಯ್ದಿತು. ಹಲವು ನಿಮಿಷಗಳ ಕಾಲ ಗ್ಯಾಲಸ್ ಆ ಬಾವಿಯನ್ನು ದಿಟ್ಟಿಸಿ ನೋಡಿದ. ಯೋಚಿಸಿದ. ಬಾವಿಯ ಒಳ ಮೈಮೇಲೆ ಮತ್ತು ಕೆಳಗೆ ಗೆರೆಯ ಗುರುತುಗಳೇಕಿವೆಯೆಂದು ಅವನಿಗೆ ಅರ್ಥವಾಗಲಿಲ್ಲ. ಇದೇನಿದ್ದೀತೆಂದು ಪ್ರಶ್ನಿಸುವಂತೆ ಸ್ಟ್ರಾಬೋನತ್ತ ನೋಡಿ ಹುಬ್ಬು ಹಾರಿಸಿದ.

"ಈ ಗೆರೆಗಳು ನೈಲ್ ನದಿಯ ಗರಿಷ್ಠ, ಕನಿಷ್ಠ ಮತ್ತು ಸರಾಸರಿ ಮಟ್ಟಗಳನ್ನು ಸೂಚಿಸುವ ಸಾಧನ. ಈ ಬಾವಿಗೆ ನೆಲದಾಳದಲ್ಲಿ ನೈಲ್ ನದಿಯೊಡನೆ ಸಂಪರ್ಕವಿದೆ. ಆದ್ದರಿಂದಲೇ ಎರಡರಲ್ಲೂ ನೀರಿನ ಮಟ್ಟ ಏಕರೀತಿ[illegible] ಏರಿಳಿಯುತ್ತಿರುತ್ತದೆ. ಈ ಜಲಮಾಪಕವನ್ನು ಬಳಸಿಯೇ ಎಲಿಫೆಂಟೈನ್ ಪ್ರದೇಶದ ಜನರು ಭೂಮಿಗೆ ನೀರುಣಿಸುವುದನ್ನೂ ಸಸಿ ನೆಡುವುದನ್ನೂ ನಿರ್ಧರಿಸುತ್ತಿದ್ದರು," ಎಂದು ಸ್ಟ್ರಾಬೋ ತರ್ಕಿಸಿದ. ಆ ತರ್ಕ ವಾಸ್ತವವೇ ಆಗಿತ್ತು. ಇಂತಹ ವಿಶೇಷ ಪಾಂಡಿತ್ಯ ಸ್ಟ್ರಾಬೊನಿಗೆ ಸರ್ವೇ ಸಾಮಾನ್ಯವಾಗಿ ಸಿದ್ಧಿಸಿತ್ತು.

ಈಗಿನ ಟರ್ಕಿಯ ಪಾಂಟೆಸ್ ಎಂಬಲ್ಲಿ ಕ್ರಿ.ಪೂ. ೬೪ರಲ್ಲಿ ಸ್ಟ್ರಾಬೋ ಜನಿಸಿದ. ಗ್ರೀಕ್ ಮತ್ತು ರೋಮನ್ ಶಾಲೆಗಳಲ್ಲಿ ಅಧ್ಯಯನ-ತರಬೇತಿ ಪಡೆದು ತಯಾರಾದ. ಪಾರಂಪರ್ಯವಾಗಿ ಬಂದ ಆಸ್ತಿಯೂ ಸಾಕಷ್ಟಿತ್ತು. ತನ್ನ ವೃತ್ತಿ, ಪ್ರಯಾಣ ಮೊದಲಾದವುಗಳಲ್ಲಿ ತೊಡಗಲು ಅಡ್ಡಿ ಇರಲಿಲ್ಲ. ಅವನೊಂದಿಗೆ ಏಲಿಯಸ್ ಗ್ಯಾಲಸ್ ಮಿತ್ರನಂತೆ ನಡೆದುಕೊಳ್ಳುತ್ತಿದ್ದ. ಅಗಸ್ಟಸ್ ಚಕ್ರವರ್ತಿಯೂ ಸೇರಿದಂತೆ ಪ್ರಭಾವಿ ಆಡಳಿತಗಾರರ ನಿಕಟ ಪರಿಚಯ ಸ್ಟ್ರಾಬೋನಿಗೆ ಇತ್ತು. ಪಾಂಟೆಸ್ ರಾಣಿಗಾಗಿ ಆತ 'ಭೋಗೋಳ' ಗ್ರಂಥವನ್ನು ಬರೆದನೆಂದು ಹೇಳಲಾಗುತ್ತಿದೆ.

ಹಿಂದಿನಿಂದ ಉಳಿದುಕೊಂಡು ಬಂದ ಭೋಗೋಳದ ಎರಡು ಪ್ರಮುಖ ಗ್ರಂಥಗಳಲ್ಲಿ ಸ್ಟ್ರಾಬೋನದೂ ಒಂದಾಗಿದೆ. ಹಿಂದಿನ ಭೌಗೋಳಿಕ ದಿಗ್ಗಜರೆಂದು ಪರಿಗಣಿಸಲ್ಪಟ್ಟ ಪೈಥಿಯಾಸ್, ಎರಟೋಸ್ತನೀಸ್, ಪೊಸೆಯಿಡೊನಿಯಸ್‌ರಂಥವರನ್ನೂ ಆತ ಟೀಕಿಸಿದ್ದ. ಸ್ಟ್ರಾಬೋ ತನ್ನ ಗ್ರಂಥದಲ್ಲಿ ಗಣಿತೀಯ ಭೂಗೋಳದ ಸಾಂಪ್ರದಾಯಿಕ ವಿವರಣೆ ನೀಡಿರುವನಾದರೂ ಆತನೇ ಅದನ್ನು ಅರ್ಥಮಾಡಿಕೊಂಡಿರುವಂತೆ ಕಾಣುವುದಿಲ್ಲ.

ಪಶ್ಚಿಮದಲ್ಲಿ ಭೌಗೋಳಿಕ ವಿಚಾರಗಳ ಪ್ರವಾಹದ ಮೂಲವನ್ನು ಆರಂಭದ ಗ್ರೀಕರ ಬರಹಗಳಲ್ಲಿ ಕಾಣಬಹುದು. ಹೋಮರ್‌ನ 'ಇಲಿಯೆಡ್' ಮತ್ತು 'ಒಡೆಸ್ಸಿ'ಗಳಲ್ಲಿ ಈಜಿಯನ್ ಪ್ರದೇಶದ ಜನ ಮತ್ತು ಭೂಪ್ರದೇಶಗಳ ಬಗ್ಗೆ ನಿಜಾಂಶ ಹಾಗೂ ಕಲ್ಪನೆಗಳ ವಿಚಿತ್ರ ಸಮ್ಮಿಶ್ರಣವಿದೆ. ಈ ಪೂರ್ವಭಾವೀ ಭೌಗೋಳಿಕ

# ಸ್ಟ್ರಾಬೋ:
## ಭೂಗೋಳ ಶಾಸ್ತ್ರದ ಆದ್ಯಪ್ರವರ್ತಕ

• ಎ. ನರಹರಿ

ಒನ್ನಲೆಯು ನಂತರದ ರೋಮನ್ನರ ಜ್ಞಾನ ವಿಕಾಸಕ್ಕೆ ಎಡೆ ಮಾಡಿಕೊಟ್ಟಿತು. ಸ್ಟ್ರಾಬೋ ಅದನ್ನು ಮುಂದುವರಿಸಿಕೊಂಡು ಹೋದ.

ಸ್ಟ್ರಾಬೋನ ಗ್ರಂಥವನ್ನು ಓದಿದವರು ಕ್ರಿ.ಪೂ. ಐದನೇ ಶತಮಾನದ ಗ್ರೀಕ್ ಇತಿಹಾಸಜ್ಞ ಹಿರೊಡೊಟಸ್‌ಗಿಂತ ಈತನ ವಿಚಾರಗಳು ಹೇಗೆ ಭಿನ್ನವಾಗಿವೆಯೆಂಬುದನ್ನು ವಿವರಿಸಬಲ್ಲರು. ಹಿರೊಡೊಟಸ್ ತನಗಾಗಿಯೇ ಬರೆದುಕೊಂಡವ. ಕುತೂಹಲ ಕೆರಳಿಸುವ ಘಟನೆಗಳೆಲ್ಲವನ್ನೂ ದಾಖಲಿಸಿದವ. ಆದರೆ ಸ್ಟ್ರಾಬೋ ಶ್ರೀಮಂತ ಓದುಗರನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆದವ. ಆದ್ದರಿಂದಲೇ ಸ್ಟ್ರಾಬೋನ ಕೃತಿಯನ್ನು ದೊರೆಗಳ ಮತ್ತು ರಾಯಭಾರಿಗಳ ಕೈಪಿಡಿ ಎನ್ನಲಾಗುತ್ತಿತ್ತು. ಆತನ ಭೂಗೋಳವು 'ಮಾನವನಿಗೆ ತಿಳಿದಿದ್ದ ಪ್ರಪಂಚ' (ಎಕ್ಯುಮನೆ)ವನ್ನು ಕೇಂದ್ರವಾಗಿಟ್ಟು ಕೊಂಡಿತ್ತು. ಆಗಿನ ಪ್ರಪಂಚದ ಜನರು ಮತ್ತು ಪ್ರದೇಶಗಳ ಬಗ್ಗೆ ಈ ಆಕರಗ್ರಂಥ ಮಾಹಿತಿ ನೀಡುತ್ತದೆ.

ಸ್ಟ್ರಾಬೋನ ಕೃತಿ ಹದಿನೇಳು ಅಧ್ಯಾಯಗಳ ನ್ನೊಳಗೊಂಡಿದೆಯಾದರೂ ಏಳನೇ ಅಧ್ಯಾಯ ಕಣ್ಮರೆಯಾಗಿದೆ. ಅದರ ಬಗ್ಗೆ ಸಂಕ್ಷಿಪ್ತ ನಿರೂಪಣೆ ಮಾತ್ರ ಕಾಣಸಿಗುತ್ತದೆ. ಸ್ಟ್ರಾಬೋನ ಬರವಣಿಗೆ ಯಲ್ಲಿ ಅಪರೂಪಕ್ಕೆಂಬಂತೆ ನಾಟಕೀಯ ತಿರುವು ಗಳೂ ಕಂಡುಬರುತ್ತವೆ. ಅಂಥವುಗಳಲ್ಲಿ ಎಲಿಯಸ್ ಗ್ಯಾಲಸ್‌ನನ್ನು ಅಲೆಕ್ಸಾಂಡ್ರಿಯದಿಂದ ಹಿಂದಕ್ಕೆ ಕರೆಸಿಕೊಂಡು ಅರೇಬಿಯ ಪ್ರಾಂತ್ಯವನ್ನು ಗೆಲ್ಲುವ ಹೊಣೆಗಾರಿಕೆಯನ್ನು ಹೊರಿಸಿದ್ದೂ ಒಂದು. ಅಗಸ್ಟಸ್‌ನ ಅಪ್ಪಣೆಯ ಮೇರೆಗೆ ಗ್ಯಾಲಸ್‌ನು ಅರೇಬಿಯ ಪರ್ಯಾಯ ದ್ವೀಪದತ್ತ ಪ್ರಯಾಣಿಸಿದ. ಅಲ್ಲಿನ ಸಾಂಬಾರ ಪದಾರ್ಥಗಳು, ರತ್ನಗಳು ಮತ್ತು ಬೆಲೆ ಬಾಳುವ ಲೋಹಗಳ ಮೇಲೆ ಅವನು ದೃಷ್ಟಿ ನೆಟ್ಟಿದ್ದ. ಆದರೆ ತನಗೆ ಯಾವ ರೀತಿಯ ಸ್ವಾಗತ ಅಲ್ಲಿ ದೊರೆತೀತೆಂಬ ಬಗ್ಗೆ ಆ ಸೈನ್ಯಾಧಿಕಾರಿಗೆ ತಿಳಿದಿರಲಿಲ್ಲವಾಗಿ ಎಲ್ಲದಕ್ಕೂ ಸಿದ್ಧವಾಗಿಯೇ ಹೊರಟಿದ್ದ. 'ಶ್ರೀಮಂತ ಸ್ನೇಹಿತರನ್ನು ಗಳಿಸುತ್ತೇನೆ ಇಲ್ಲವೆ ಶ್ರೀಮಂತ ಶತ್ರುಗಳನ್ನು ಸದೆಬಡಿಯುತ್ತೇನೆ' ಎಂದು ಪ್ರಕಟಿಸಿದ್ದ. ಆದರೆ ಇವೆರಡೂ ಅವನ ಕೈಲಾಗಲಿಲ್ಲ. ಈ ವೈಫಲ್ಯದ ಅಪವಾದ ಗೆಳೆಯ ನಾದ ತನ್ನ ಮೇಲೆ ಬರದಿರಲೆಂದೋ ಏನೋ ಸ್ಟ್ರಾಬೋ ಈ ಘಟನೆಯನ್ನು ಮಾರ್ಗದರ್ಶಕ ನೊಬ್ಬನ ವಿಶ್ವಾಸದ್ರೋಹಕ್ಕೆ ವರ್ಗಾಯಿಸಿಬಿಟ್ಟ. 'ಆ ಮಾರ್ಗದರ್ಶಕ ನೀರು ಆಹಾರಗಳಿಲ್ಲದ ಒಣ ಪ್ರದೇಶದಲ್ಲಿ ಬಳಸುದಾರಿಗಳ ಮೂಲಕ ಸೈನ್ಯ ಪಯಣಿಸುವಂತೆ ಮಾಡಿ ರೋಮನ್ನರನ್ನು ಅಪಾಯಗಳಿಗೆ ಒಡ್ಡಿದ.' ಎಂದು ಸ್ಟ್ರಾಬೋ ಬರೆದ. ಗ್ಯಾಲಸ್ ಬರಿಗೈಲಿ ಈಜಿಪ್ಟಿಗೆ ಮರಳ ಬೇಕಾಯಿತು. ಆ ಪ್ರಸಿದ್ಧ ಸೇನಾಧಿಕಾರಿಯ ಹಿಂದೆಗೆತವು ರಾಜಧಾನಿಯಾದ ಮಾರಿಬ್‌ನಿಂದ ಅಲ್ಲವೇದೂ ಮರಿಸಿಯಾಬಾ ಎಂಬ ಹೆಚ್ಚು ಪರಿಚಿತವಲ್ಲದ ಸ್ಥಳದಿಂದಲೆಂದೂ ಬರೆದು ಗ್ಯಾಲಸ್‌ನ ಮರ್ಯಾದೆ ಉಳಿಸಿದ.

ತನ್ನ ರೋಮನ್ ಸ್ನೇಹಿತ ವಿನಾಶಕರ ರೀತಿಯಲ್ಲಿ ಸೋತುಹೋದ ಬಗ್ಗೆ ಸ್ಟ್ರಾಬೋಗೆ ದುಃಖವಾಗಿತ್ತು. ಅಷ್ಟು ಸಮೃದ್ಧವಾದ ಪ್ರದೇಶ ರೋಮನ್ ಚಕ್ರಾಧಿಪತ್ಯಕ್ಕೆ ಸೇರಲಿಲ್ಲವಲ್ಲ ಎಂದು ಆತ ಖಿನ್ನನಾಗಿದ್ದ. ಎಲಿಯಸ್ ಗ್ಯಾಲಸ್ ಈಜಿಪ್ತನ್ನು ಬಿಟ್ಟು ರೋಮ್‌ಗೆ ಹಿಂದಿರುಗಿದ ಮೇಲೆ ಸ್ಟ್ರಾಬೋ ಸಿರಿಯಾಕ್ಕೆ ತೆರಳಿದ. ದಾರಿಯಲ್ಲಿ ದ್ವೀಪವೊಂದರ ದೃಶ್ಯ ಅವನ ಮನಸೆಳೆ ಯಿತು. 'ಅಲೆಕ್ಸಾಂಡರನು ನಗರಕ್ಕೆ ಮುತ್ತಿಗೆ ಹಾಕಿ ದಾಗ ಮೇಲೆಬ್ಬಿಸಿದ ಮಣ್ಣಿನ ದಿಣ್ಣೆಯು ಅದನ್ನೂ ಭೂಖಂಡಕ್ಕೆ ಸೇರಿಸಿತ್ತು' ಎಂದು ಬರೆದ. ಆಗಿನ ಕಾಲದ ಹಳಬರಿಗೆ ಟೈರ್ ಎಂದರೆ ಟೈರಿಯನ್ ನೇರಳೆ ಬಣ್ಣ ಎಂದೇ ಪರಿಚಿತ. ಇದೇಕೆ ಹೀಗೆ ಎಂದು ಪರೀಕ್ಷಿಸಲು ಸ್ಟ್ರಾಬೋ ಗಮನ ಹರಿಸಿದ. ಚಿಪ್ಪು ಮೀನಿನಿಂದ ನೇರಳೆ ಬಣ್ಣ ತಯಾರಿಸಿ ಆಗಿನ ಕಾರ್ಖಾನೆಗಳು ಉಜ್ವಲವಾದ ನೇರಳೆ ಬಣ್ಣದ ಬಟ್ಟೆಗಳನ್ನು ತಯಾರಿಸುವುದನ್ನು ಕಂಡ.

ಸ್ಟ್ರಾಬೋ ಪೂರ್ವದಲ್ಲಿ ಆರ್ಮೇನಿಯದಿಂದ ಪಶ್ಚಿಮದ ಸಾರ್ಡೀನಿಯದವರೆಗೆ, ಉತ್ತರದಲ್ಲಿ ಪಾಂಟಸ್ ಯೂಕ್ಸಿನಸ್‌ನಿಂದ ದಕ್ಷಿಣದ ಇಥಿಯೋಪಿಯದ ಗಡಿಗಳವರೆಗೆ ಅಡ್ಡಾಡಿದ. ಜ್ಞಾನ ದಾಹ ಮತ್ತು ಮಾಹಿತಿ ಸಂಗ್ರಹಿಸುವಲ್ಲಿನ ಆತನ ತುಡಿತ ಈ ಪ್ರಯಾಣಕ್ಕೆ ಕಾರಣವೆನ್ನಬಹುದು.

ಯುಫ್ರೇಟಿಸ್ ನದಿಯೆಡೆಗೆ ಪೂರ್ವಾಭಿಮುಖವಾಗಿ ಕ್ರಮಿಸಿದ ಸ್ಟ್ರಾಬೋ ಸುಮಾರು ೧೯೦೦ ವರ್ಷಗಳಿಂದ ಜನರ ಗಮನದಿಂದ ಕಳೆದು ಹೋಗಿದ್ದ ನಿನೇವೆ ಎಂಬ ಪುರಾತನ ನಗರದ ಕುರುಹುಗಳನ್ನು ಹೆಕ್ಕಿ ತೆಗೆದ. ಡೇರಿಯಸ್‌ನನ್ನು ಮಣ್ಣು ಸಾಮುಕ್ಕಿಸಿ ಅಲೆಕ್ಸಾಂಡರ್ ಜಯ ಸಂಪಾದಿಸಿದ ಗೌಗಮೇಲ ಎಂಬ ಸ್ಥಳವನ್ನು ಪರಿಶೋಧಿಸಿದ. ಆತ ಅಲ್ಲಿನ ವಿಶಾಲ ರಸ್ತೆಗಳನ್ನು ಹೊಗಳಿ ಬರೆದ.

ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದಾದ ತೂಗುವ ತೋಟದ ಬಗ್ಗೆಯೂ 'ಭೂಗೋಳ'ದಲ್ಲಿ ಪ್ರಸ್ತಾವನೆ ಇದೆ. "ಬೆಬಿಲೋನಿನ ತೂಗು ಉದ್ಯಾನದ ಅಟ್ಟಗಳ ಮೇಲೆ ಮರಗಳು ಬೆಳೆದು ನಿಂತಿವೆ. ಕುಶಲ ಶಿಲ್ಪಿಗಳು ಜಲಯಂತ್ರಗಳನ್ನು ಬಳಸಿ ಉದ್ಯಾನಕ್ಕೆ ಯುಫ್ರೆಟಿಸ್ ನದಿಯಿಂದ ನೀರೆತ್ತುತ್ತಾರೆ" ಎಂದು ತಾನು ಕಂಡದ್ದನ್ನು ಕೃತಿಯಲ್ಲಿ ಕಾಣಿಸಿದ.

ಆತನ 'ಭೂಗೋಳ'ದಲ್ಲಿ ಎಂಟು ಅಧ್ಯಾಯಗಳು ಯುರೋಪಿನ ಬಗ್ಗೆ, ಆರು ಅಧ್ಯಾಯಗಳು ಏಶಿಯದ ಬಗ್ಗೆ, ಒಂದೊಂದು ಅಧ್ಯಾಯ ಈಜಿಪ್ತ್ ಮತ್ತು ಲಿಬಿಯದ ಬಗ್ಗೆ ಇವೆ. ತನ್ನ ಗ್ರಂಥ ರಚನೆಗಾಗಿ ಮಾಡಿಟ್ಟುಕೊಂಡ ಯೋಜನೆಗಳನ್ನು ಆತನಿಂದ ಪೂರೈಸಲಾಗಲಿಲ್ಲವೆಂಬುದನ್ನು ಪುರಾವೆಗಳು ಸೂಚಿಸುತ್ತವೆ. ಏಶಿಯದ ವಿವರಣೆಗಾಗಿ ಅವನು ಅಲೆಕ್ಸಾಂಡರನ ದಂಡಯಾತ್ರೆ ಸೇರಿದಂತೆ ಅನೇಕ ಗ್ರೀಕ್ ಮೂಲಗಳಿಂದ ಮಾಹಿತಿ ಪಡೆಯಬೇಕಾಯಿತು. ಖಗೋಳಶಾಸ್ತ್ರ ಮತ್ತು ಜ್ಯೋತಿಷವನ್ನು ಒಟ್ಟುಗೂಡಿಸಿದ ಚಾಲ್ಡಿಯನ್ ಆಕಾಶವೀಕ್ಷಕರ ಬಗೆಗೂ ಸ್ಟ್ರಾಬೋನ ಹೇಳಿಕೆಗಳುಂಟು. ಟೈಗ್ರಿಸ್ ಹಾಗೂ ಯುಫ್ರೆಟಿಸ್ ನದಿಗಳ ಮೇಲಿನ ಸಾರಿಗೆ ಮಾರ್ಗಗಳ ವಿವರಗಳನ್ನು ಆತ ನೀಡಿದ್ದಾನೆ.

ಸ್ಟ್ರಾಬೋನನ್ನು ಮಧ್ಯಪ್ರಾಚ್ಯದ ಒಂದು ವಸ್ತುವಾದ ನ್ಯಾಫ್ತಲೀನ್ (ಟಾರೆಣ್ಣೆಯನ್ನು ಕಾಯಿಸಿ ಭಟ್ಟಿ ಇಳಿಸುವಾಗ ದೊರೆಯುವ ಬಿಳಿಯ ಸ್ಫಟಿಕ ಅಥವಾ ನುಸಿಗುಳಿಗೆ) ಭ್ರಮೆಗೊಳಿಸಿತ್ತು. "ನ್ಯಾಫ್ತಾವನ್ನು ಬೆಂಕಿಯ ಬಳಿಗೆ ತಂದಾಗ ಹೊತ್ತಿಕೊಂಡು ಉರಿಯುತ್ತದೆ. ಯಾವುದಾದರೊಂದು ವಸ್ತುವಿಗೆ ನ್ಯಾಫ್ತಾವನ್ನು ಬಳಿದು ಬೆಂಕಿಯ ಬಳಿಗೆ ತಂದಾಗ ಆ ವಸ್ತು ಜೋರಾಗಿ ಉರಿಯುತ್ತದೆ. ವಿಪರೀತ ನೀರನ್ನು ಹಾಕದಿದ್ದರೆ ಅದನ್ನು ನಂದಿಸುವುದು ಸಾಧ್ಯವೇ ಇಲ್ಲ," ಎಂದಾತ ಕೌತುಕವನ್ನು ತೋಡಿಕೊಂಡಿದ್ದಾನೆ. ಇದೇ ನ್ಯಾಫ್ತಾ ಮುಂದೆ ಒಂದು ಇಂಧನವಾಗಿ, ದ್ರಾವಣವಾಗಿ ಬರುತ್ತದೆಂದು ಅವನಿಗೇನು ಗೊತ್ತು?

ನಲವತ್ತೂಮ್ರು ಅಧ್ಯಾಯಗಳಲ್ಲಿ ಆತ ಐತಿಹಾಸಿಕ ಕೃತಿಯನ್ನೂ ರಚಿಸಿದ್ದನಂತೆ. ಆದರೆ ಅವೀಗ ಲಭ್ಯವಿಲ್ಲ. ಪೊಲಿಬಿಯಸ್ ಎಂಬಾತನ ಕಾಲದಿಂದ ಆ್ಯಕ್ಟಿಕಂ ಸಮರದವರೆಗಿನ ಚರಿತ್ರೆಯನ್ನದು ಒಳಗೊಂಡಿತ್ತಂತೆ.

ಏಸುಕ್ರಿಸ್ತ ಜನಿಸಿದ ಇಪ್ಪತ್ತು ವರ್ಷಗಳ ನಂತರ ಸ್ಟ್ರಾಬೋ ಅಸುನೀಗಿದಾಗ ಅವನಿಗೆ ಎಂಭತ್ನಾಲ್ಕು ವರ್ಷ ವಯಸ್ಸು. ಆತನ ವಿವರಣೆಯ ಹಿಂದೆಯೇ ಹೆಜ್ಜೆ ಹಾಕುತ್ತ ಹೋದರೆ ರೋಮನ್ ಸಾಮ್ರಾಜ್ಯದ ಏರುಗತಿಯ ಆರಂಭವನ್ನು ಸ್ಪಷ್ಟವಾಗಿ ಕಾಣಬಹುದು. ಆ ಭಾಗಗಳ ಮೇಲೆ ಕಲ್ಪನೆಯಲ್ಲಿ ಹೆಜ್ಜೆ ಹಾಕಬಹುದು.

## ಬೆಂಡಿನಂತಹ ದೇಹದವಳು!

*ಆಸ್ಟ್ರೇಲಿಯದ ಅನಿತಾ ಹಂಡಷೀಲ್ಡ್ ಎಂಬಾಕೆಗೆ ನೀರಿನ ಮೇಲ್ ತೇಲುವ ಗುಣವಿದೆಯಂತೆ. ಆಕೆ ಸುಮ್ಮನೆ ನೀರಿನಲ್ಲಿ ಕೂತು, ನಿಂತು ಅಥವಾ ಅಂಗಾತ ಮಲಗಬಲ್ಲಳಂತೆ. ಆಕೆಯನ್ನು ಪರೀಕ್ಷಿಸಿದ ತಜ್ಞರು, "ಆಕೆ ಸ್ಥೂಲವಾಗಿಲ್ಲ, ಅವಳ ಮೂಳೆಗಳು ಹಗುರ. ಆಕೆಯ ದೇಹದ ಸಾಂದ್ರತೆ ನೀರಿನ ಸಾಂದ್ರತೆಗಿಂತ ಕಡಿಮೆ," ಎಂದೆಲ್ಲ ಹೇಳುವರಾದರೂ ಆಕೆಯ ಈ ಗುಣದ ಬಗ್ಗೆ ಖಚಿತವಾಗಿ ಏನು ಹೇಳಲೂ ಅವರಿಗೆ ಸಾಧ್ಯವಾಗಿಲ್ಲವಂತೆ.*

**• ಕೆ. ವೆಂಕಣ್ಣಾಚಾರ್**

# ರ್‍ವಾಂಡಾ: ನರಮೇಧದ ನಂತರ...

• ಮಧುರ

ಕಳೆದ ವರ್ಷ ಕಪ್ಪು ಖಂಡ ಆಫ್ರಿಕಾದ ಪುಟ್ಟ ರಾಷ್ಟ್ರ ರ್‍ವಾಂಡಾ ತನ್ನ ಇತಿಹಾಸದಲ್ಲಿ ಹಿಂದೆಂದೂ ಕಂಡರಿಯದ ಭೀಕರ ನರಮೇಧದ ಕರಾಳ ಕಗ್ಗತ್ತಲಲ್ಲಿ ತತ್ತರಿಸಿತು. ೧೯೯೪ ರ ಎಪ್ರಿಲ್‌ನಿಂದ ಜುಲೈ ವರೆಗೆ ನಡೆದ ನರಹತ್ಯಾಕಾಂಡದಲ್ಲಿ ಐದು ಲಕ್ಷಕ್ಕೂ ಅಧಿಕ ಮಂದಿ ನಿರ್ನಾಮವಾದರು.

ಆಫ್ರಿಕಾದ 'ಸ್ವಿಟ್ಜರ್‌ಲ್ಯಾಂಡ್' ಎಂದೇ ಆಧುನಿಕ ಇತಿಹಾಸದಲ್ಲಿ ವರ್ಣಿಸಲ್ಪಟ್ಟಿದೆ ರ್‍ವಾಂಡಾ. ಬೆಟ್ಟ ಗುಡ್ಡಗಳು, ನದಿ ತೊರೆಗಳಿಂದ ಕೂಡಿದ ಪುಟ್ಟ ರಾಷ್ಟ್ರವಿದು. ಆದರೆ ಇಡೀ ಆಫ್ರಿಕಾ ಖಂಡದಲ್ಲಿಯೇ ಕಡು ಬಡರಾಷ್ಟ್ರಗಳ ಶ್ರೇಣಿಯಲ್ಲಿ ಅಗ್ರಸ್ಥಾನದಲ್ಲಿದೆ. ಅಲ್ಲಿನ ಅಧಿಕ ಮಂದಿಗೆ ಕೃಷಿಯೇ ಪ್ರಮುಖ ಜೀವನೋಪಾಯವಾಗಿದೆ. ರ್‍ವಾಂಡಾದಲ್ಲಿ ನಡೆದ ನರಮೇಧದ ಹಿನ್ನೆಲೆ ಕಾರಣಗಳನ್ನು ಅರಿಯಬೇಕಾದರೆ ಅಲ್ಲಿನ ಅತಿ ಸಂಕೀರ್ಣ ಸ್ವರೂಪದ ಬುಡಕಟ್ಟು ಜನಾಂಗಗಳ ನಡುವಣ ವೈಷಮ್ಯದ ಇತಿಹಾಸವನ್ನು ಮೊದಲು ನಾವು ವಿಶ್ಲೇಷಿಸಬೇಕಾಗುತ್ತದೆ.

ಆಫ್ರಿಕಾದ ಎರಡು ಕಡು ಬಡರಾಷ್ಟ್ರಗಳೆನಿಸಿದ್ದ ರ್‍ವಾಂಡಾ ಮತ್ತು ಬುರುಂಡಿ ಹಿಂದೆ ಬೆಲ್ಜಿಯಂನ ವಸಾಹತುಗಳಾಗಿದ್ದವು. ಬೆಲ್ಜಿಯಂನ ಇತರ ವಸಾಹತುಗಳಲ್ಲಿದ್ದಂತೆ ಅಲ್ಲಿ ಆರ್ಥಿಕ ಅಭಿವೃದ್ಧಿ ತೀರಾ ಕೆಳಮಟ್ಟದಲ್ಲಿತ್ತು. ಬೆಲ್ಜಿಯಂನ ಆಳರಸರು ರ್‍ವಾಂಡಾದಲ್ಲಿ ಅಲ್ಲಿನ ಬುಡಕಟ್ಟು ಪಂಗಡಗಳ ಮೂಲಕ ಆಳ್ವಿಕೆ ನಡೆಸುತ್ತಿದ್ದರು. ರ್‍ವಾಂಡಾದ ಎರಡು ಪ್ರಮುಖ ಬುಡಕಟ್ಟು ಪಂಗಡಗಳು ಟುಟ್ಸಿ

ಆಫ್ರಿಕಾ ಖಂಡದ ಹಲವು ಬಡರಾಷ್ಟ್ರಗಳಲ್ಲಿ ಮಾನವ ಜೀವಕ್ಕೆ ಏನೇನೂ ಬೆಲೆಯಿಲ್ಲ. ಕಳೆದ ವರ್ಷ ರ್‍ವಾಂಡಾದಲ್ಲಿ ಜರುಗಿದ ಎರಡು ಬುಡಕಟ್ಟು ಜನಾಂಗಗಳ ನಡುವಣ ಅಂತರ್ಯುದ್ಧದಲ್ಲಿ ಐದು ಲಕ್ಷಕ್ಕೂ ಅಧಿಕ ಮಂದಿಯ ಭೀಕರ ಕೊಲೆಯಾಯಿತು. ನರಮೇಧದಿಂದ ರಕ್ತಸಿಕ್ತವಾಗಿದ್ದ ರ್‍ವಾಂಡಾ ಇಂದು ನಿಧಾನವಾಗಿ ಚೇತರಿಸಿಕೊಳ್ಳುತ್ತಿದೆ. ಅಂತಾರಾಷ್ಟ್ರೀಯ ನೆರವಿಗಾಗಿ ಹಂಬಲಿಸುತ್ತಿದೆ.

ಗಳು ಹಾಗೂ ಹುಟೂಗಳು. ರ್‍ವಾಂಡಾದ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೯೦ ರಷ್ಟು ಮಂದಿ ಹುಟೂ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಟುಟ್ಸಿಗಳ ಸಂಖ್ಯೆ ಶೇಕಡಾ ೨೦ ಭಾಗ. ಹಲವು ದಶಕಗಳ ಹಿಂದಿನಿಂದಲೂ ಹುಟೂ ಮತ್ತು ಟುಟ್ಸಿ ಜನಾಂಗದವರ ಮಧ್ಯೆ ಬದ್ಧದ್ವೇಷ ಹೊಗೆಯಾಡುತ್ತಲೇ ಇದೆ. ಎತ್ತರದ ನಿಲುವಿನ ತೌಲನಿಕವಾಗಿ ತೆಳು ಚರ್ಮದ ಟುಟ್ಸಿಗಳು ಮೇಲ್ಜಾತಿಯವರಾಗಿದ್ದು ಹುಟೂಗಳು ಅವರ ಗುಲಾಮರಂತೆ ಬಾಳುತ್ತಿದ್ದರು. ೧೯೫೦ರ ದಶಕದಲ್ಲಿ ಆಫ್ರಿಕಾದಲ್ಲಿ ವಸಾಹತುಗಳ ವಿಸರ್ಜನಾ ಪ್ರಕ್ರಿಯೆ ಆರಂಭವಾದಾಗ ಹುಟೂಗಳು ಟುಟ್ಸಿಗಳ ಮೇಲೆ ಪ್ರತೀಕಾರ ಕೈಗೊಳ್ಳಲು ಆರಂಭಿಸಿದರು. ೧೯೫೯-೧೯೬೬ರ ಅವಧಿಯಲ್ಲಿ ಸಾವಿರಾರು ಟುಟ್ಸಿಗಳ ಹತ್ಯೆಯಾಯಿತು. ಸುಮಾರು ಒಂದೂವರೆ ಲಕ್ಷ ಮಂದಿ ನೆರೆಯ ಉಗಾಂಡಾ, ಟಾಂಜಾನಿಯಾ, ಝೈರೆಗಳಿಗೆ ಓಡಿ ಹೋದರು.

೧೯೬೨ ರಲ್ಲಿ ರ್‍ವಾಂಡಾ ಸ್ವತಂತ್ರ ರಾಷ್ಟ್ರವಾದಾಗ ಟುಟ್ಸಿ ಜನಾಂಗದವರನ್ನು ಎಲ್ಲ ರಾಜಕೀಯ ಅಧಿಕಾರ ಸ್ಥಾನಗಳಿಂದ ಉಚ್ಚಾಟಿಸಲಾಯಿತು. ತದನಂತರವೇ ರಕ್ತಸಿಕ್ತ ಸಂಘರ್ಷ ಆರಂಭವಾದದ್ದು. ಹುಟೂಗಳ ನೇತೃತ್ವದಲ್ಲಿ 'ಹುಟೂ ವಿಮೋಚನಾ ಚಳವಳಿಯ ಸಂಘಟನೆ' ಅಸ್ತಿತ್ವಕ್ಕೆ ಬಂದಿತು. ಈ ಸಂಘಟನೆಯ ಆಶ್ರಯದಲ್ಲಿಯೇ ಉಗ್ರ ಹೋರಾಟ ಆರಂಭವಾಯಿತು. ಹುಟೂಗಳ ನೇತೃತ್ವದಲ್ಲಿ ಆರಂಭವಾದ ಸಾಮಾಜಿಕ ಕ್ರಾಂತಿ ಆಫ್ರಿಕಾ ಖಂಡದಲ್ಲಿಯೇ ಅತಿ ಹಳೆಯದೆನ್ನಬಹುದಾದ ನಿರಾಶ್ರಿತರ ಸಮಸ್ಯೆಯನ್ನು ಹುಟ್ಟು ಹಾಕಿತು. ಈ ನಿರಾಶ್ರಿತರ ಶಿಬಿರಗಳಲ್ಲಿ ಹುಟ್ಟಿ ಬೆಳೆದವರೇ ಇಂದು ಟುಟ್ಸಿಗಳ ನೇತೃತ್ವದ ರ್‍ವಾಂಡಾ ದೇಶಾಭಿಮಾನಿ ಸಂಘಟನೆಯ (RWANDA PATRIOTIC FRONT) ಸಕ್ರಿಯ ಕಾರ್ಯಕರ್ತರು.

ಬುರುಂಡಿಯಲ್ಲಿ ಬಹುಸಂಖ್ಯಾತ ಹುಟೂಗಳು ೧೯೬೨ ರಿಂದಲೂ ಟುಟ್ಸಿಗಳ ಕೈಯಿಂದ ರಾಜಕೀಯ ಅಧಿಕಾರ ಸ್ವಾಧೀನಪಡಿಸಿಕೊಳ್ಳಲು ಸತತವಾಗಿ ಪ್ರಯತ್ನಿಸುತ್ತಾ ಬಂದಿದ್ದಾರೆ. ಟುಟ್ಸಿಗಳ ನಿಯಂತ್ರಣದಲ್ಲಿರುವ ಅಲ್ಲಿನ ಸೇನೆ ೧೯೬೫, ೧೯೭೮, ೧೯೭೨ ಹಾಗೂ ೧೯೯೩ ಅಕ್ಟೋಬರ್‌ದಲ್ಲಿ ಜರುಗಿದ ಕ್ಷಿಪ್ರ ಸೇನಾ ಕ್ರಾಂತಿಯನ್ನು ನಿರ್ದಯವಾಗಿ ಹತ್ತಿಕ್ಕುತ್ತಾ ಬಂದಿದೆ. ೧೯೭೨ ರಲ್ಲಿ ನಡೆದ ದಮನ ಕಾರ್ಯಾಚರಣೆಯಲ್ಲಿ ಎರಡು ಲಕ್ಷಕ್ಕೂ ಹೆಚ್ಚು ಜನ ನಿರ್ನಾಮವಾದರು.

ಎರಡೂ ಬುಡಕಟ್ಟು ಜನಾಂಗಗಳಲ್ಲಿ ವಿವೇಕಯುತವಾಗಿ ಚಿಂತಿಸುವ ಕೆಲವು ನಾಯಕರಿದ್ದಾರೆ. ಅವರು ಶತಮಾನಗಳಿಂದ ನಡೆಯುತ್ತ ಬಂದಿರುವ ಬದ್ಧದ್ವೇಷ ರಕ್ತಪಾತವನ್ನು ಕೊನೆಗೊಳಿಸಲು ಶ್ರಮಿಸುತ್ತಾ ಬಂದಿದ್ದಾರೆ. ಈ ದಿಸೆಯಲ್ಲಿ ರ್‍ವಾಂಡಾದ ಅಧ್ಯಕ್ಷ ಜುವೆನಲ್ ಹಬ್ಯಾರಿಮಾನ್ ಹಾಗೂ ಬುರುಂಡಿಯ ಅಧ್ಯಕ್ಷ ಸಿಪ್ರಿಯನ್ ನ್ಟಾರ್‍ಯಮಿ ಪ್ರಮುಖರು. ಕಳೆದ ವರ್ಷ ಟಾಂಜಾನಿಯಾದಲ್ಲಿ ಶಾಂತಿ ಮಾತುಕತೆಗಳನ್ನು ಮುಗಿಸಿ ಹಿಂತಿರುಗುತ್ತಿದ್ದಾಗ ಅವರು ಪ್ರಯಾಣಿಸುತ್ತಿದ್ದ ವಿಮಾನದ ಮೇಲೆ ರ್‍ವಾಂಡಾದ ಅಧ್ಯಕ್ಷರ ಕಾವಲು ಪಡೆಯವರು ಗುಂಡು ಹಾರಿಸಿ ವಿಮಾನವನ್ನು ಉರುಳಿಸಿದರು. ಇಬ್ಬರು ಅಧ್ಯಕ್ಷರೂ ಅಮಾನುಷವಾಗಿ ಹತ್ಯೆಯಾದರು. ಈ ಕಾವಲು ಪಡೆಯವರು ಟುಟ್ಸಿ ನೇತೃತ್ವದ ರ್‍ವಾಂಡಾ ದೇಶಾಭಿಮಾನಿ ಸಂಘಟನೆಗೆ ಯಾವುದೇ ವಿಧದ ವಿನಾಯಿತಿ ನೀಡುವುದನ್ನು ತೀವ್ರವಾಗಿ ವಿರೋಧಿಸಿದ್ದರು.

ರ್‍ವಾಂಡಾದಲ್ಲಿ ಟುಟ್ಸಿಗಳನ್ನು ಎಲ್ಲ ಅಧಿಕಾರ ಸ್ಥಾನಗಳಿಂದ ಉಚ್ಚಾಟಿಸಲಾಗಿದ್ದರೂ ಅವರ ಗೆರಿಲ್ಲಾ ಸೇನೆ ರ್‍ವಾಂಡಾ ದೇಶಾಭಿಮಾನಿ ಸಂಘಟನೆ ಹುಟೂಗಳ ಮೇಲೆ ಮಿಲಿಟರಿ ವಿಜಯ ಸಂಪಾದಿಸುತ್ತಾ ಕಿಗಾಲಿಯ ಹೊರ ವಲಯಕ್ಕೆ ತಲುಪಿತು. ಈ ಸಂಘಟನೆಯ ಗೆರಿಲ್ಲಾಗಳು ಸಮರ ಕಲೆಯಲ್ಲಿ ಪರಿಣತರಾಗಿದ್ದರು. ಅವರು ಮುಸವೇನಿ ನೇತೃತ್ವದ ಗೆರಿಲ್ಲಾ ಪಡೆಗಳ ಜೊತೆಗೂಡಿ ಉಗಾಂಡಾದಲ್ಲಿ ಸರ್ವಾಧಿಕಾರಿ ಇದಿ ಅಮೀನ್ ಮತ್ತು ಮಿಲ್ಟನ್ ಒಬೊಟೆಯ ನಿರಂಕುಶಾಧಿಕಾರದ ವಿರುದ್ಧ ಹೋರಾಡಿದ್ದರು.

## ಹೊಟೇಲಲ್ಲಿ ಹತ್ಯಾಕಾಂಡ

ರ್‍ವಾಂಡಾದ ರಾಜಧಾನಿ ಕಿಗಾಲಿಯಲ್ಲಿ ಮಿಲ್ಸ್ ಕೊಲಿನ್ಸ್ ಹೊಟೇಲಿದೆ. ಅಂತರ್ಯುದ್ಧದ ದಿನಗಳಲ್ಲಿ ಸಾವಿರಾರು ಮಂದಿ ವೈದ್ಯರು, ರೈತರು, ಅಧ್ಯಾಪಕರು, ಪರಿಹಾರ ಕಾರ್ಯದಲ್ಲಿ ತೊಡಗಿದ




ವರು ಅಲ್ಲಿ ಆಶ್ರಯ ಪಡೆದರು. ಅಂದಿನ ದಿನಗಳಲ್ಲಿ ಅವರೆಲ್ಲರೂ ಕರಾಳ ಭೀತಿಯ ಕಗ್ಗತ್ತಲಲ್ಲಿ ತತ್ತರಿಸುತ್ತಿದ್ದರು. ಇಂದು ಈ ಹೊಟೇಲಿನಲ್ಲಿ ಸಹಜ ಪರಿಸ್ಥಿತಿ ವ್ಯಾಪಿಸಿದೆ. ರ್‍ವಾಂಡಾದಲ್ಲಿರುವ ಮಾನವ ಹಕ್ಕುಗಳ ಕಾರ್ಯಕರ್ತರು ಈ ಹೊಟೇಲಿನಲ್ಲಿ ಸಮಾವೇಶಗೊಂಡು ಅಂತರ್ಯುದ್ಧದ ನರಮೇಧದಿಂದ ಅವಸಾನದ ಅಂಚಿಗೆ ತಲುಪಿದ ರಾಷ್ಟ್ರದ ಪುನಾರಚನೆ ಮಾಡುವ ಕುರಿತು ಯೋಚಿಸಿದರು.

ಕಿಗಾಲಿಯಲ್ಲಿರುವ ೩೦ರ ಹರೆಯದ ಮಹಿಳೆ ಎಸ್ತರ್ ಮುಜಾವಯೋಳ ಕರುಣಕತೆ ಕೇಳಿ: ಆಕೆ ಮೂರು ಮಕ್ಕಳ ತಾಯಿ. ರ್‍ವಾಂಡಾದಲ್ಲಿ ನರಮೇಧ ಆರಂಭವಾದಾಗ ಆಕೆ ತನ್ನ ಕುಟುಂಬದ ಇತರ ಸದಸ್ಯರೊಂದಿಗೆ ಸ್ಥಳೀಯ ಅಧ್ಯಾಪಕರ ಜೊತೆಯಲ್ಲಿ ಸ್ಥಳೀಯ ಕಾನ್ವೆಂಟ್‌ನಲ್ಲಿ ಆಶ್ರಯ ಪಡೆದಳು. ಆಕೆಯ ಪತಿಯೂ ಅಧ್ಯಾಪಕನಾಗಿದ್ದ. ಶಸ್ತ್ರಧಾರಿ ಹುಟೂಗಳ ತಂಡ ಕಾನ್ವೆಂಟ್‌ನ ಮೇಲೆ ದಾಳಿ ಮಾಡಿತು. ಮಹಿಳೆಯರು ಮತ್ತು ಎಳೆ ವಯಸ್ಸಿನ ಹುಡುಗರು ಹಾಗೂ ಹುಡುಗಿಯರನ್ನು ಗಂಡಸರಿಂದ ಪ್ರತ್ಯೇಕಿಸಿ ಗಂಡಸರನ್ನು ಗುಂಡಿಟ್ಟು ಕೊಲ್ಲಲಾಯಿತು. ಈ ನರಮೇಧದಲ್ಲಿ ಎಸ್ತರ್ ತನ್ನ ಪತಿ, ತಂದೆ, ತಾಯಿ ಹಾಗೂ ಇತರ ಕೆಲವು ಸಂಬಂಧಿಗಳನ್ನು ಕಳೆದುಕೊಂಡಳು. ಅಂತರ್ಯುದ್ಧ ಮುಗಿದ ಬಳಿಕ ಎಸ್ತರ್ ತನ್ನ ಕುಟುಂಬದ ಸದಸ್ಯರು ಯಾರಾದರೂ ಬದುಕಿ ಉಳಿದಿದ್ದಾರೆಯೇ ಎಂದು ಪತ್ತೆ ಕಾರ್ಯದಲ್ಲಿ ತೊಡಗಿದಳು. ಅವಳ ತಂಗಿ ಬದುಕಿ ಉಳಿದಿದ್ದಾಳೆ. ತಂಗಿಯ ನಾಲ್ವರು ಮಕ್ಕಳು ಹಾಗೂ ಪತಿಯನ್ನು ಅಂತರ್ಯುದ್ಧದಲ್ಲಿ ಬುಡಕಟ್ಟು ಪಂಗಡದ ಟುಟ್ಸಿಗಳು ಕೊಂದಿದ್ದಾರೆ.

ರ್‍ವಾಂಡಾದ ಗ್ರಾಮಾಂತರ ಪ್ರದೇಶಗಳ ಹೊಲಗಳಲ್ಲಿ ವ್ಯವಸಾಯದ ಕೆಲಸ ಆರಂಭವಾಗಿದೆ. ಆದರೆ ಬಹುತೇಕ ಕುಟುಂಬಗಳಲ್ಲಿ ಪುರುಷರು ಅಂತರ್ಯುದ್ಧದಲ್ಲಿ ಹತರಾಗಿರುವುದರಿಂದ ದುಡಿಯುವ ಕೈಗಳಿಲ್ಲ. ಹೀಗಾಗಿ ಮಹಿಳೆಯರೇ ಕೃಷಿ ಕಾರ್ಯಗಳಿಗಿಳಿದಿದ್ದಾರೆ.

## ನದಿಯಲ್ಲಿ ಶವಗಳು

ನ್ಯಾರುಬುಯೆ ಜಿಲ್ಲೆಯ ಗ್ರಾಮೀಣ ಪ್ರದೇಶದ ಚರ್ಚ್ ಒಂದರ ಹೊರ ಆವರಣದಲ್ಲಿ ಮಾನವ ಅಸ್ಥಿಪಂಜರಗಳು ಚಲ್ಲಾಪಿಲ್ಲಿಯಾಗಿ ಹರಡಿವೆ. ಟುಟ್ಸಿ ಜನಾಂಗದವರೇ ಬಹು ಸಂಖ್ಯಾತರಾಗಿರುವ ಈ ಜಿಲ್ಲೆಯಲ್ಲಿ ಹತ್ತು ಸಾವಿರ ಮಂದಿಯ



ಕಿಗಾಲಿಯಲ್ಲಿ ನರಮೇಧಕ್ಕೆ ಬಲಿಯಾದ  ಎಳೆಯ ಮಕ್ಕಳ ಶವಗಳು

ಹತ್ಯೆಯಾಯಿತು. ಅಸ್ಥಿಪಂಜರಗಳು ಬಿದ್ದಿರುವ ಭಂಗಿಯನ್ನು ಗಮನಿಸಿದರೆ ಕೊನೆಯುಸಿರೆಳೆಯುವ ಕ್ಷಣಗಳಲ್ಲಿ ಆ ನತದೃಷ್ಟರು ಅನುಭವಿಸಿದ ನರಕ ಯಾತನೆ ಕಣ್ಣಿಗೆ ಕಟ್ಟಿದಂತಾಗುತ್ತದೆ. ರ್‍ವಾಂಡಾದ ಪ್ರತಿಯೊಂದು ಜಿಲ್ಲೆಯ ಗ್ರಾಮ ಹಾಗೂ ಪಟ್ಟಣ ಪ್ರದೇಶಗಳಲ್ಲಿ ಒಂದು ನಿರ್ದಿಷ್ಟ ಬುಡಕಟ್ಟು ಜನಾಂಗದವರಲ್ಲಿ ಯಾರನ್ನು ಕೊಲ್ಲಬೇಕು ಎಂಬುದರ ಯಾದಿಯನ್ನು ಮೊದಲೇ ತಯಾರಿಸಿದ್ದರಂತೆ. ಹೀಗೆ ನರಹತ್ಯೆಗೆ ಸಿದ್ಧತೆ ಬಹಳ ಹಿಂದಿನಿಂದಲೇ ವ್ಯವಸ್ಥಿತವಾಗಿ ನಡೆದಿತ್ತು.

ಸಿಯಾಂಗುಗು ಎಂಬ ಸಣ್ಣ ಪಟ್ಟಣದಲ್ಲಿ ಹುಟೂಗಳು ಸಿದ್ಧಪಡಿಸಿದ ಒಂದು ಯಾದಿಯಲ್ಲಿ ೧೦೭ ಹೆಸರುಗಳಿದ್ದವು. ಅವರೆಲ್ಲರನ್ನೂ ಸ್ಥಳೀಯ ಸ್ಟೇಡಿಯಂಗೆ ಒಯ್ದು ಗುಂಡಿಟ್ಟು ಕೊಲ್ಲಲಾಯಿತು. ಝೈರೆ ಮತ್ತು ಟಾಂಜಾನಿಯಾ ಗಡಿ ಭಾಗದಲ್ಲಿ ಇಪ್ಪತ್ತು ಲಕ್ಷ ಜನ ನೆಲೆಸಿದ್ದರು. ಅವರಲ್ಲಿ ಬಹಳಷ್ಟು ಮಂದಿ ಹುಟೂಗಳು. ನೆರೆ ಹೊರೆಯಲ್ಲಿದ್ದ ಅಸಂಖ್ಯಾತ ಟುಟ್ಸಿಗಳನ್ನು ಅವರು ಪೊಲೀಸರ ಆದೇಶದ ಮೇರೆಗೆ ಕೊಂದರು. ಟಾಂಜಾನಿಯಾ-ರ್‍ವಾಂಡಾ ಗಡಿ ಭಾಗದಲ್ಲಿ ಕಗೇರಾ ನದಿ ಹರಿಯುತ್ತಿದೆ. ಅಂತರ್ಯುದ್ಧದ ದಿನಗಳಲ್ಲಿ ಹಂತಕರು ಜನರನ್ನು ಹತ್ಯೆ ಮಾಡಿ ಶವಗಳನ್ನು ಈ ನದಿಗೆ ಎಸೆದಿದ್ದರು. ಎಷ್ಟೋ ದಿನಗಳ ವರೆಗೆ ಶವಗಳು ಕೊಳೆತು ದುರ್ವಾಸನೆ ಇಡುಗಿತ್ತು.

ರ್‍ವಾಂಡಾದಲ್ಲಿ ಅಂತರ್ಯುದ್ಧ ಮುಗಿದು ಏಳೆಂಟು ತಿಂಗಳು ಕಳೆದಿವೆ. ಕಿಗಾಲಿಯಲ್ಲಿ ಜನಸಾಮಾನ್ಯರ ಬದುಕು ಸಹಜಸ್ಥಿತಿಗೆ ಮರಳಿದೆ. ಕಿಗಾಲಿಯ ಸ್ಥಳೀಯ ಮಾರುಕಟ್ಟೆಯಲ್ಲಿ ಜೀವನಾವಶ್ಯಕ ಸರಕುಗಳು ಸುಲಭವಾಗಿ ದೊರಕುತ್ತಿವೆ. ನೆರಹೊರೆಯ ಆಫ್ರಿಕನ್ ರಾಷ್ಟ್ರಗಳಿಂದಲೂ ಸರಕುಗಳು



ಸುಭದ್ರ ನೆಲೆ ಹುಡುಕಿಕೊಂಡು ಹೊರಟಿರುವ ನಿರಾಶ್ರಿತರು

ಅಲ್ಲಿಗೆ ತಲುಪುತ್ತಿವೆ. ಉಗಾಂಡಾದವರು ಅಲ್ಲಿ ತಮ್ಮ ವ್ಯಾಪಾರ ವಹಿವಾಟು ಆರಂಭಿಸಿದ್ದಾರೆ. ನರಮೇಧದಲ್ಲಿ ತನ್ನ ಇಡೀ ಕುಟುಂಬವನ್ನು ಕಳೆದುಕೊಂಡ ಜೆನ್ನಿ ಬೆನಿಂಕಾ ಎಂಬಾಕೆ ವಿದೇಶಿ ವಾಣಿಜ್ಯೋದ್ಯಮಿಗಳಿಗೆ ವ್ಯಾಪಾರ-ವಹಿವಾಟು ಸೇವೆ ಒದಗಿಸುವ ಕಂಪನಿಯೊಂದನ್ನು ಅಲ್ಲಿ ಆರಂಭಿಸಿದ್ದಾಳೆ.

ರ್‍ವಾಂಡಾದ ಪುನರ್ನಿರ್ಮಾಣ ಕಾರ್ಯ ತ್ವರಿತ ಗತಿಯಲ್ಲಿ ನಡೆಯಬೇಕಾಗಿದೆ. ಅಲ್ಲಿ ಸರಕಾರಿ ಆಡಳಿತ ಸಂಪೂರ್ಣ ಕುಸಿದಿದೆ. ಪೊಲೀಸ್ ವ್ಯವಸ್ಥೆ ಇಲ್ಲ, ನ್ಯಾಯಾಲಯಗಳಿಲ್ಲ, ನ್ಯಾಯಾಧೀಶರಿಲ್ಲ. ಅಷ್ಟೇಕೆ ವ್ಯವಸ್ಥಿತ ಕಾನೂನೇ ಇಲ್ಲ. ಸದ್ಯ ರ್‍ವಾಂಡಾದಲ್ಲಿ ಐದು ಪಕ್ಷಗಳ ರಾಷ್ಟ್ರೀಯ ಏಕತಾ ಸರಕಾರ ಅಧಿಕಾರ ವಹಿಸಿಕೊಂಡಿದೆ. ಕಿಗಾಲಿಯ ಸ್ಥಳೀಯ ಸೆರೆಮನೆಯಲ್ಲಿ ೪೦೦೦ ಮಂದಿಯನ್ನು ನರಹತ್ಯೆಯ ಆರೋಪದ ಮೇಲೆ ಬಂಧಿಸಲಾಗಿದೆ. ಮೊತ್ತ ಮೊದಲಾಗಿ ಜೀವ ಉಳಿಸಿಕೊಳ್ಳಲು ನೆರೆಹೊರೆಯ ಆಫ್ರಿಕನ್ ರಾಷ್ಟ್ರಗಳಿಗೆ ಓಡಿ ಹೋದ ಎರಡೂ ಬುಡಕಟ್ಟು ಜನಾಂಗಗಳ ಮಂದಿ ಸ್ವದೇಶಕ್ಕೆ ಹಿಂತಿರುಗಬೇಕಾಗಿದೆ. ಅವರಲ್ಲಿ ಮೊದಲು ಆತ್ಮವಿಶ್ವಾಸವನ್ನು ಕುದುರಿಸಿ ಬದುಕಿನ ಬಗ್ಗೆ ಭದ್ರತೆ ಸುರಕ್ಷಿತತೆ ಭಾವನೆ ಮೂಡಿಸಬೇಕಾಗಿದೆ ಎಂದು ಪ್ರಧಾನಮಂತ್ರಿ ಫಾಸ್ಟಿನ್ ತ್ವಾಗಿರಾಮುಂಗಾ ಹೇಳುತ್ತಾರೆ.

ರ್‍ವಾಂಡಾದಲ್ಲಿ ನರಮೇಧಕ್ಕೆ ಕಾರಣರಾದ ಪಾತಕಿಗಳನ್ನು ಪತ್ತೆ ಹಚ್ಚಿ ಅಂತಾರಾಷ್ಟ್ರೀಯ ನ್ಯಾಯಮಂಡಳಿಯಿಂದ ವಿಚಾರಣೆ ನಡೆಸಲು ವಿಶ್ವಸಂಸ್ಥೆಯ ಭದ್ರತಾ ಸಮಿತಿ ಒಪ್ಪಿದೆ. ಈ ಸುದ್ದಿ ರ್‍ವಾಂಡಾದ ಅಸಂಖ್ಯಾತ ನತದೃಷ್ಟರಿಗೆ ಸಂತಸ ನೀಡಿದೆ. ದಕ್ಷಿಣ ಆಫ್ರಿಕಾದ ನ್ಯಾಯಾಧೀಶ ರಿಚರ್ಡ್ ಗೋಲ್ಡ್ ಸ್ಟೋನ್ ಅವರು ಈ ನ್ಯಾಯಮಂಡಳಿಯ ನೇತೃತ್ವ ವಹಿಸಿದ್ದಾರೆ.

ಆಫ್ರಿಕಾ ಖಂಡದ ಹಲವು ರಾಷ್ಟ್ರಗಳಲ್ಲಿ ಮಾನವ ಜೀವಕ್ಕೆ ಏನೇನೂ ಬೆಲೆಯಿಲ್ಲ. ಕಳೆದ ಹತ್ತು ವರ್ಷಗಳ ಅವಧಿಯಲ್ಲಿ ಸುಡಾನಿನಲ್ಲಿ ಅಂತರ್ಯುದ್ಧ ಹಾಗೂ ಕ್ಷಾಮದಿಂದ ಐದು ಲಕ್ಷಕ್ಕೂ ಅಧಿಕ ಮಂದಿ ಸತ್ತರೆ, ಅಂಗೋಲಾದಲ್ಲಿ ಅಂತರ್ಯುದ್ಧದಲ್ಲಿ ಒಂದು ಲಕ್ಷದಾಚೆಗೂ ಜನಜೀವ ಹಾನಿಯಾಯಿತು. ಮೊಜಾಂಬಿಕ್, ಲಿಬೇರಿಯಾ, ಝೈರೆಗಳಲ್ಲಿ ಹೆಚ್ಚು ಕಡಿಮೆ ಇಷ್ಟೇ ಮಂದಿ ಸತ್ತಿರಬಹುದು. ಆಫ್ರಿಕಾದ ಬಡರಾಷ್ಟ್ರಗಳ ಕರುಣ ಕಥೆಗೆ ಕೊನೆಯೇ ಇಲ್ಲವೇನೋ ಅನಿಸುತ್ತದೆ.

(ವಿವಿಧ ಮೂಲಗಳಿಂದ)



# ತೌಸಂಡ್ ಲೈಟಿನ ಅಯ್ಯ ದೇವರು

● ಶಾಂತಾರಾಮ ಸೋಮಯಾಜಿ

ಈಗ ನಾನಿರುವ ಪಟ್ಟಣದಲ್ಲಿ 'ತೌಸಂಡ್ ಲೈಟ್ಸ್' ಎಂಬ ಹೆಸರಿನ ಒಂದು ಸ್ಥಳವಿದೆ. ತೌಸಂಡ್ ಲೈಟ್ಸ್ ಎಂದರೆ ಸಾವಿರ ದೀಪಗಳು. ಆದರೆ ಅಲ್ಲಿ ಮಾರ್ಗದ ಬದಿ ಸಾವಿರ ಹೋಗಲಿ ಒಂದು ಹತ್ತು ದೀಪಗಳೂ ಇಲ್ಲ. ಇರುವ ಒಂದು ಅರ್ಧ ಡಜನ್ ದೀಪಗಳಲ್ಲಿ ಕೆಲವು ಕೆಲದಿನ ಉರಿಯುತ್ತವೆ. ಇನ್ನು ಕೆಲವು ಉರಿದು ಕಣ್ಣು ಮುಚ್ಚಿಕೊಂಡಿರುತ್ತವೆ.

ಆ ಪ್ರದೇಶಕ್ಕೆ 'ತೌಸಂಡ್ ಲೈಟ್ಸ್' ಅಂತ ಹೆಸರು ಬಂದದ್ದು ಯಾಕೆ ಹೇಗೆಂದು ನನಗೆ ಗೊತ್ತಿಲ್ಲ. ಈ ಬಗ್ಗೆ ನಾನು ವಿಚಾರಿಸಿದ ಯಾರಿಗೂ ಗೊತ್ತಿದ್ದಂತಿರಲಿಲ್ಲ. ದಕ್ಷಿಣ ಕನ್ನಡದ ಮೂಡಬಿದಿರೆಯ ಸಾವಿರ ಕಂಬದ ಬಸದಿಯಲ್ಲಿ ಸಾವಿರ ಕಂಬಗಳಿವೆಯೋ, ಅಥವಾ ಬರೀ ಮುನ್ನೂರೋ, ನಲುವತ್ತೆರಡೋ ಎಂದೆಲ್ಲಾ ಯಾರು ಎಣಿಸಿಕೊಂಡು ಹೋಗುತ್ತಾರೆ; ಅಂತೂ ಆ ಹೆಸರಿದೆ.

ಆ ಪ್ರದೇಶದಲ್ಲಿ ಮಾರ್ಗದ ಎರಡೂ ಕಡೆ ಹಲವು ಇಲೆಕ್ಟ್ರಿಕ್ ಅಂಗಡಿಗಳಿವೆ. ಅಂಗಡಿಗಳ ಮುಂದೆ ಹಲವಾರು ಗಾತ್ರದ ಹೊಸ ಹೊಸ ನಮೂನೆಯ ಬಣ್ಣದ ಲೈಟುಗಳನ್ನು ನೇತು ಹಾಕಿದ್ದಾರೆ. ಹೆಚ್ಚಿನ ಅಂಗಡಿಗಳಲ್ಲಿ ಈ ಲೈಟುಗಳು ಹಗಲೂ ರಾತ್ರಿ ಉರಿದುಕೊಂಡು ಬಿದ್ದಿರುತ್ತವೆ. ಯಾಕೆಂದರೆ ಉರಿಯದ ದೀಪಗಳನ್ನು ಯಾರಾದರೂ ಕೊಳ್ಳಲು ಬರುತ್ತಾರಾ ?

ಆ ಲೈಟು ಅಂಗಡಿಗಳಿಗೆ ತಾಗಿಕೊಂಡು ಒಂದು ಉಡುಪಿ ಹೊಟೇಲು, ಎರಡು ಮಾಳಿಗೆಯ ಒಂದು ಮಾಂಸದ ಹೊಟೇಲು, ಒಂದೆರಡು ಚಾ ಕಾಫಿ ಅಂಗಡಿಗಳು, ಒಂದು ದುಬಾರಿ ಬೆಲೆಯ ಚೈನೀಸ್ ಹೊಟೇಲು ಎಲ್ಲಾ ಇವೆ. ಮಾಂಸದ ಹೊಟೇಲು ದೊಡ್ಡದಾಗಿದ್ದರೂ, ಅರ್ಧ ಬಾಗಿಲನ್ನು ಬಿಟ್ಟು ಉಳಿದೆಲ್ಲಾ ಕಿಟಕಿ ಬಾಗಿಲುಗಳು ಸಂಪೂರ್ಣ ಮುಚ್ಚಿಕೊಂಡುದರಿಂದ ನೋಡಲಿಕ್ಕೆ ಸಾಮಾನ್ಯ ಹೊಟೇಲಿನಂತೇ ಕಾಣುತ್ತದೆ.

ಆ ಹಲ ಬಗೆಯ ಹೊಟೇಲುಗಳಲ್ಲದೆ ಒಂದು ಟಯರ್ ಮಾರುವ ಅಂಗಡಿ, ಒಂದು ಫರ್ನಿಚರ್ ಶಾಪ್, ಬಿಸ್ಕೀಟನಿಂದ ಹಿಡಿದು ಫೇಸು ಪೌಡರ್ ವರೆಗೆ ಅದೂ ಇದೂ ಮಾರುವ ಎರಡು ಪ್ರಾವಿಶನ್ ಸ್ಟೋರ್‌ಗಳು, ಒಂದು ಅಗ್ಗದ ಬೆಲೆಯ ಶೂ ಸ್ಟೋರ್, ಇವೆಲ್ಲಾ ಇವೆ.

ಎಂದರೆ ಅಸಾಮಾನ್ಯವಾದದ್ದು ಈ ಪ್ರದೇಶದಲ್ಲಿ ಯಾವುದೂ ಇಲ್ಲ. ಈ ನಗರದ ಯಾವ ಮೂಲೆಗೆ ಹೋದರೂ ಕಾಣಸಿಗಬಹುದಾದ ಸಾಮಾನ್ಯ ದೃಶ್ಯಗಳೇ ಇಲ್ಲಿವೆ. ಆದರೆ.....

ಆದರೆ ಒಂದೇ ಒಂದು ವ್ಯತ್ಯಾಸ.

ಈ ಪ್ರದೇಶದಿಂದ ಬರೀ ಮುನ್ನೂರು ನಾನ್ನೂರು ಮೀಟರ್ ದೂರದಲ್ಲಿ ಒಂದು ತೀರಾ ಅಸಾಮಾನ್ಯ ದೃಶ್ಯವನ್ನು ನಾನು ನೋಡಿದೆ.

ಈ ರಾಜ್ಯದ ಏರುತಗ್ಗುಗಳನ್ನು ಹಾದು ಹಲವಾರು ಸಾರಿ ಸುತ್ತಿ ಬಂದಿದ್ದರೂ, ದೇಶದ ಮೇಲೆ ಕೆಳಗೆ ಒಂದು ಡಜನ್ ಬಾರಿಯಾದರೂ ಏರಿಳಿದು

ಬಂದಿದ್ದರೂ ಬೇರೆಲ್ಲೂ ನಾನಿದನ್ನು ಕಂಡೇ ಇಲ್ಲ. ಇಂತಹದೊಂದು ಸಾಧ್ಯ ಎಂಬುದೂ ನನಗೆ ಗಣನೆಗೆ ಬಂದಿರಲಿಲ್ಲ- ಇಲ್ಲಿಗೆ ಭೇಟಿಕೊಡುವವರೆಗೆ.

ಈ ವಿಶೇಷ ದೃಶ್ಯವನ್ನು ವಿವರಿಸುವ ಮೊದಲು ಈ ಜಾಗಕ್ಕೆ ಹೇಗೆ ಬರುವುದೆಂದು ತಿಳಿಸಿಬಿಡುತ್ತೇನೆ.

ಸಿಟಿಯ ರೈಲ್ವೇ ಸ್ಟೇಶನ್ನಿನಿಂದ ವಿಮಾನ ನಿಲ್ದಾಣಕ್ಕೆ ಹೋಗುವ ಮೇನ್ ರೋಡಿನಲ್ಲಿ ಸುಮಾರು ಹನ್ನೊಂದು ಕಿಲೋಮೀಟರ್ ಬಂದರೆ ನೀರೇ ಇರದ ಒಂದು ಇಳಿ ಪ್ರದೇಶ ಬರುತ್ತದೆ. ಅದರ ಮೇಲೆ ಎಂದೋ ಕಟ್ಟಿದ ಕೆಂಪು ಇಟ್ಟಿಗೆಯ ಬ್ರಿಡ್ಜ್ ಇದೆ. ಅಲ್ಲಿ ಸುತ್ತಲೂ ತಲೆ ಹುಣ್ಣಿನಂತೆ ಎದ್ದು ನಿಂತ ಹುಲ್ಲು, ಬಟ್ಟೆ ಬಿದಿರು, ತಗಡಿನಿಂದ ಕಟ್ಟಿದ ಹಲವಾರು ಗುಡಿಸಲುಗಳನ್ನು ನೋಡಿದರೆ, ಹಿಂದೊಮ್ಮೆ ಇದೇ ನೆಲದಲ್ಲಿ ನೀರು ಹರಿದು ಹೋಗುತ್ತಿತ್ತು ಎಂದು ನಂಬುವುದೂ ಕಷ್ಟವಾಗು



ತ್ತದೆ. ಆ ನೀರನ್ನು ಕುಡಿದು, ಮೈಯೆಲ್ಲಾ ಬೆವರಿಳಿಸಿಕೊಂಡವರು, ದಣಿವಾರಿಸಿಕೊಳ್ಳುತ್ತಿದ್ದರೆಂದು ಯಾರೂ ನಂಬುವುದಿಲ್ಲ. ನೀಲಿ ಬಣ್ಣ ಉಕ್ಕುವ ಆ ನೀರ ತೆರೆಗಳಲ್ಲಿ ಚಿತ್ರ ವಿಚಿತ್ರ ಬಣ್ಣದ ಮೀನುಗಳು ಆಟವಾಡಿಕೊಂಡಿರುತ್ತವೆಂದು ಎಣಿಸಿಕೊಳ್ಳುವುದೂ ಈಗ ಕಷ್ಟ.

ಆ ಬ್ರಿಡ್ಜ್ ದಾಟಿದ ನಂತರ ಒಂದು ಅರ್ಧ ಕಿಲೋಮೀಟರ್‌ನೊಳಗೆ ಎರಡು ಅಶ್ವತ್ಥ ಮರಗಳು ಕಂಡು ಬರುತ್ತವೆ. ಒಂದರ ಆಕಾರ ಭಯಂಕರ. ಇನ್ನೊಂದು ಅದರ ಅರ್ಧದಷ್ಟು ಎನ್ನಬಹುದು. ಭಯಂಕರ ಗಾತ್ರದ ಮರವನ್ನು ನೋಡಿದರೆ ಅದರ ವಯಸ್ಸು ಸುಮಾರು ೨೦೦೦ ವರ್ಷಗಳಾದರೂ ಆಗಿರಬಹುದೆಂದು ಊಹಿಸಬಹುದು. ಎಂದರೆ ಗೌತಮ ಬುದ್ಧನ ಕಾಲದಲ್ಲಿ ಹುಟ್ಟಿ ಬೆಳೆದಿರಬಹುದಾದ ಮರ. ಬೌದ್ಧ ಮತದ ಅನುಯಾಯಿಗಳು, ಅನಂತರ, ಆ ಮರದ ಬುಡದಲ್ಲಿ ಚಟ್ಟಾಮುಟ್ಟಿಕೆ ಹಾಕಿ ಕುಳಿತು ಶ್ರದ್ಧೆಯಿಂದ ಬಂದವರಿಗೆ ಜಪ, ತಪ, ಮಂತ್ರ, ತಂತ್ರ, ಮನುಷ್ಯ, ಹಕ್ಕಿ, ದೇವರ ಬಗ್ಗೆ ವಿವರಣೆ ಕೊಟ್ಟಿರಬಹುದು.

ಬರಲಿ ಬರದೆ ಹೋಗಲಿ ಎಂಬಂತೆ ಗಂಭೀರವಾಗಿ ಭೂಲೋಕದ ಎಲ್ಲಾ ದಿಕ್ಕುಗಳಿಗೆ ದೊಡ್ಡ ಸಣ್ಣ ರೆಂಬೆ ಬೆಳೆಸಿ ಸುತ್ತಲಿಗೆ ನೆರಳು ಕೊಡುತ್ತಲೇ ಇವೆ.

ಆ ನೆರಳು ಹುಡುಕಿಕೊಂಡು ಯಾರ್‍ಯಾರೋ ಬರುತ್ತಾರೆ. ಮಂಗ ಕುಣಿಸುವವರು, ರಾತ್ರಿ ಕುಡಿದು ದಾರಿ ತಪ್ಪಿದವರು, ಕೈ ಗಾಡಿಗಳಲ್ಲಿ ಬಣ್ಣ ಬಣ್ಣದ ಶರಬತ್ ಮಾರುವವರು, ಸೈಕಲ್ಲಲ್ಲಿ ಮಣ ಗಟ್ಟಲೆ ಭಾರ ತುಂಬಿ ಎಲ್ಲೆಲ್ಲಿ ವ್ಯಾಪಾರ ಮಾಡುವವರು, ಗಂಡನಿಂದ ಬೈಸಿಕೊಂಡು ಏಟುತಿಂದು ಮನೆಯಿಂದ ಹೊರಬಂದವರು, ಎಲ್ಲಾ ಬಂದು ನೆರಳಿಗೆ ಮೈಯೊಡ್ಡುತ್ತಾರೆ. ಹಾಗೇ ದಿಕ್ಕಿರದ ದನಗಳು, ಯಾರಿಗೂ ಕ್ಯಾರ್ ಮಾಡದ ಎಮ್ಮೆಗಳು, ಹುಚ್ಚರ ಹಾಗೆ ತಿರುಗುವ ನಾಯಿಗಳು, ಕೊಳಕು ನಾತದ ಕಪ್ಪು ಹಂದಿಗಳು, ಗಲಾಟೆ ಮಾಡುವ ಕಾಗೆಗಳೆಲ್ಲಾ ಆ ಮರದ ಕೆಳಗೆ ಆಶ್ರಯ ಪಡೆಯುತ್ತವೆ.

ಆ ಎರಡು ಮರಗಳ ನಡುವೆ ಒಂದು ಸಪೂರ ಮಾರ್ಗ ಬಲಕ್ಕೆ ತಿರುಗಿದೆ. ಅಲ್ಲಿ ತಿರುಗಿದರೆ



ಈಗ ಆ ಎರಡು ಮರಗಳ ಸುತ್ತ ಕಟ್ಟೆಗಳು ಸಂಪೂರ್ಣ ಕುಸಿದು ಬಿದ್ದಿವೆ. ಕುರುಹಿಗಾಗಿ ಮಾತ್ರ, ಮಳೆ ಬಿಸಿಲಿಗೆ ಕೊರಗಿದ ಸವೆದ ಸವೆದ ಕೆಲಕಪ್ಪು ಕಲ್ಲುಗಳನ್ನು ಕಾಣಬಹುದಷ್ಟೇ, ಆದರೆ ಆ ಮರಗಳು ಮಾತ್ರ ಕಟ್ಟೆ ಇರಲಿ ಬಿಡಲಿ ಯಾರು

ಒಂದು ಇಕ್ಕಟ್ಟಾದ ಗಲ್ಲಿಯೊಳಗೆ ಹೋದಂತೆ ಭಾಸವಾಗುತ್ತದೆ. ಒಂದು ಆಟೋರಿಕ್ಷಾ ಅಥವಾ ಒಂದು ಹಳೆ ಮಾರುತಿ ಹೇಗೋ ನುಸುಳಿಕೊಂಡು ಹೋಗಬಹುದು. ಅಷ್ಟೆ. ಅಂಬಾಸಿಡರ್ ಕಾರಾದರೆ

ಬಹಳ ಕಷ್ಟ. ಬಸ್ಸು, ಲಾರಿಯಂತೂ ಸಾಧ್ಯವೇ ಇಲ್ಲ.

ಗಲ್ಲಿಯ ಎರಡೂ ಕಡೆ ಚಿಕ್ಕ ಚಿಕ್ಕ ಮನೆಗಳು 'ಮಾರ್ಗಗಳು,' ಉಚ್ಚೆ ಹೊಯ್ಯುವ ಮಕ್ಕಳು, ಸೈಕಲ್ಲು ರಿಪೇರಿ ಅಂಗಡಿಗಳು, ನೀರಿಗಾಗಿ ಸಾಲಾಗಿ ಮೌನವಾಗಿ ಕುಳಿತು ಕಾಯುವ ಪ್ಲಾಸ್ಟಿಕ್ ಬಕೆಟ್‌ಗಳು, ಬಿಸಿಲಲ್ಲಿ ಜಡವಾಗಿ ಮಲಗಿದ ನಾಯಿಗಳು, ನೆಲದಲ್ಲಿ ಕುಂಡೆಯೂರಿ ಕೂತು ಪಟ್ಟಾಂಗ ಹೊಡೆಯುವ ಹೆಂಗಸರು, ನೆಲಕುಕ್ಕುವ ಕೋಳಿಗಳು.

ಅದೇ ಗಲ್ಲಿಯಲ್ಲಿ ಒಂದು ಇನ್ನೂರು ಮುನ್ನೂರು ಮೀಟರ್ ಹೋದರೆ ಮಾರ್ಗಕ್ಕೆ ತಾಗಿಕೊಂಡೇ ಸಗಣಿ ಸಾರಿಸಿದ, ಸುಮಾರು ಹತ್ತು ಹನ್ನೆರಡು ಅಡಿ ಉದ್ದ ಮತ್ತು ಅಷ್ಟೇ ಅಗಲದ ಒಂದು ಚಿಕ್ಕ ಜಾಗೆ ಕಂಡು ಬರುತ್ತದೆ. ಅದೇ ನಾನು ಮೊದಲು ಹೇಳಿದ ವಿಶೇಷ ಜಾಗ.

ಅಲ್ಲಿ ಸಗಣಿ ಸಾರಿಸಿದ ನೆಲದ ಮಧ್ಯೆ ಒಂದು ಚಿಕ್ಕ ಚಟ್ನಿ ಅರೆಯುವ ಕಲ್ಲು. ಗುಂಡು ಕಾಣೆಯಾದ ಒರಟು ಮೈಯಕಲ್ಲು. ಕಲ್ಲಿನ ಮೇಲೆ ಸವೆದು ಕೊಳಕಾಗಿ ಬಣ್ಣ ಕಳೆದುಕೊಂಡು, ಎರಡು ಉಂಗುಷ್ಟಗಳೂ ಕಿತ್ತು ಬಂದ ಒಂದು ಜೊತೆ ಹಳೆ ಪಾದರಕ್ಷೆಗಳು. ಅಷ್ಟೇ ಇರುವುದು.

ವಿಶೇಷವೆಂದರೆ, ತನ್ನೊಳಗೆ ಕೊಳಕು ನೀರು ತುಂಬಿಕೊಂಡ ಚಿಕ್ಕ ಅರೆಯುವ ಕಲ್ಲು ಮತ್ತು ಮಳೆ ಬಿಸಿಲಿಗೆ ಸಂಪೂರ್ಣ ಜೀವ ಕಳೆದುಕೊಂಡ ಪಾದರಕ್ಷೆಗಳು- ಇವನ್ನು ಪ್ರತೀ ದಿನ ಸಾವಿರಾರು ಜನ ದೇವರಂತೆ ಪೂಜಿಸಲು ಇಲ್ಲಿಗೆ ಬಂದು ಹೋಗುತ್ತಿದ್ದಾರೆ. ಅದಕ್ಕೊಂದು ನಮಸ್ಕಾರ ಮಾಡಿ ಹೋಗಲು ಬೆಳಗ್ಗಿಂದ ರಾತ್ರೆವರೆಗೆ ಹಿಂಡು ಹಿಂಡು ಜನ ಬರುತ್ತಲೇ ಇರುತ್ತಾರೆ.

ಕಾರಲ್ಲಿ ಹೋಗುವವರು ಅಲ್ಲಿ ಒಂದು ಗಳಿಗೆಯಾದರೂ ಕಾರು ನಿಲ್ಲಿಸಿ ಆ ಕಲ್ಲು-ಪಾದರಕ್ಷೆಗಳಿಗೆ ನಮಸ್ಕಾರ ಮಾಡಿಯೇ ಮುಂದೆ ಹೋಗುವುದು. ಆಟೋ ಡ್ರೈವರ್‌ಗಳು ಆಟೋ ಬಿಟ್ಟುಕೊಂಡೇ ಎರಡು ಕೈಯೆತ್ತಿ ಬಾಯೊಳಗೇ ಏನೋ ಹೇಳಿಕೊಂಡು ಮುಂದೆ ಹೋಗುತ್ತಾರೆ. ಆ ಗಜಿಬಿಜಿ ಗಲ್ಲಿಯಲ್ಲಿ ಕಾರು ನಡೆಸಲಾಗದವರು ನಿಲ್ಲಿಸಲಾಗದವರು ಯಾವ ಯಾವ ಕಡೆಯಲ್ಲಿ ಕಾರು ನಿಲ್ಲಿಸಿ ಆ ಜಾಗಕ್ಕೆ ನಡೆಕೊಂಡು ಬಂದು ಆ ಸಗಣಿ ಸಾರಿಸಿದ ನೆಲಕ್ಕೆ ಕೈ ತಟ್ಟುತ್ತಾರೆ. ಮಕ್ಕಳನ್ನು ಹೊತ್ತುಕೊಂಡು ದೂಡಿಕೊಂಡು ಹಲ ಹೆತ್ತವರು ಬಂದು ಆ ಚಟ್ನಿ ಅರೆಯುವ ಕಲ್ಲಿಗೆ ಕೈ ಮುಗಿಯಲು ಹೇಳುತ್ತಾರೆ.

ವಿಚಾರಿಸಿದರೆ ಅವರೆಲ್ಲಾ 'ಅದು ಅಯ್ಯ ದೇವರು' ಎಂದಷ್ಟೇ ಹೇಳುತ್ತಾರೆ. ಆದರೆ ಈ ದೇವರಿಗೆ ಗುಡಿಯೂ ಇಲ್ಲ, ಮಂಟಪವೂ ಇಲ್ಲ, ಗೋಪುರವೂ ಮತ್ತು ಬಾಗಿಲು ಕೂಡಾ ಇಲ್ಲ. ಇರುವುದು ಚಟ್ನಿ ಅರೆಯುವ ಕಲ್ಲು, ಮುರುಕು ಪಾದರಕ್ಷೆ, ಮತ್ತು ಸಗಣಿ ಸಾರಿಸಿದ ನೆಲ. ವಾರಕ್ಕೊಮ್ಮೆ ಅಲ್ಲೇ ಪಕ್ಕದ ಮನೆಯಲ್ಲಿ ಎರಡು ಎಮ್ಮೆ ಸಾಕಿ ಹಾಲು ಮಾರಿ ಜೀವನ ದೂಡುವ ವಿಧವೆ ಹೆಂಗಸೊಬ್ಬಳು, ಆ ಜಾಗಕ್ಕೆ ಸಗಣಿ ಸಾರಿಸಿ ಹೋಗುತ್ತಾಳೆ.

ಗುಡಿಯೇ ಇಲ್ಲವೆಂದ ಮೇಲೆ ಪೂಜಾರಿ ಹೇಗೆ ಮತ್ತು ಎಲ್ಲಿಂದ ಬರುವುದು ? ಪೂಜಾರಿಯಿದ್ದರೇನೇ ಪೂಜೆ, ಮಂತ್ರ, ಆರತಿ, ಹರಕೆ.... ಎಲ್ಲಾ. ಪೂಜೆ ಮಂತ್ರಗಳಿರದೆ ಸೇವೆ ಹಣ ಚಿನ್ನ ವಜ್ರಗಳಿರುವುದು ಸಾಧ್ಯವಿಲ್ಲ ತಾನೇ....

ಎಂದರೆ ಈ ಅಯ್ಯ ದೇವರಿಗೆ ಗುಡಿಯಿಲ್ಲ, ಪೂಜಾರಿಯಿಲ್ಲ, ಯಾವ ತರದ ಸೇವೆಯೂ ಇಲ್ಲ, ಮಹಾಪೂಜೆಯೂ ಇಲ್ಲ, ಅಲಂಕಾರವೂ ಇಲ್ಲ.

ಆದರೆ ಇಲ್ಲಿಗೆ ಬರುವ ಜನಜಾತ್ರೆಯನ್ನು ನೋಡಿದರೆ ಇದು ದೇವರಲ್ಲದೆ ಬೇರೇನೂ ಆಗಿರಲು ಅಸಾಧ್ಯವೆಂದೇ ಕಾಣುತ್ತದೆ.

ಜನರು ಹಿಂಡು ಹಿಂಡಾಗಿ ನೊಣಗಳಂತೆ ಮುತ್ತಿಕೊಂಡು ಬರುತ್ತಾರೆ. ಬಂದು ಅವರವರಿಗೆ ಕಂಡಂತೆ ಅಯ್ಯ ದೇವರಿಗೆ ನಮಸ್ಕಾರ ಮಾಡುತ್ತಾರೆ. ಯಾವ ಜಾತಿಯವರೂ ಆಗಬಹುದು. ಈ ಅಯ್ಯ ದೇವರಿಗೆ ಜಾತಿಯಿಲ್ಲ. ಆದುದರಿಂದ , 'ನಿಮಗೆ ಜನಿವಾರ ಇದೆಯಾ ?', 'ಬೈಬಲ್ ಓದಿದ್ದೀರಾ ?' 'ಅಪ್ಪನ ಹೆಸರೇನು ?' ಎಂದೆಲ್ಲಾ ಯಾರೂ ಪ್ರಶ್ನೆ ಹಾಕುವುದಿಲ್ಲ.

ಮುಸ್ಲಿಮರು ಇಲ್ಲಿಗೆ ಬರುತ್ತಾರೆ. ಬಂದು ಮೊಣಕಾಲ ಮೇಲೆ ಭಾರ ಹಾಕಿ ಹಣೆಯನ್ನು ನೆಲಕ್ಕೆ ಮುಟ್ಟಿಸುತ್ತಾರೆ. ಕ್ರಿಶ್ಚಿಯನ್ನರೂ ಬರುತ್ತಾರೆ. ಬಂದು ಅರೆಯುವ ಕಲ್ಲಿನೆದುರು ಕಂಬದಂತೆ ನಿಂತು ಕಣ್ಣು ಮುಚ್ಚಿಕೊಂಡು ಎದೆ ಹಣೆ ಮುಟ್ಟಿ

ಶಿಲುಬೆಯನ್ನು ನೆನಪಿಗೆ ತಂದುಕೊಳ್ಳುತ್ತಾರೆ. ಹಿಂದುಗಳು ಬಂದು ಸಗಣ' ನೆಲವನ್ನು ಬೆರಳಿಂದ ಸವರಿ ಹಣೆಗೆ ಕುಂಕುಮವಿಡುತ್ತಾರೆ. ಬ್ರಾಹ್ಮಣರು ಬಂದು ಏನೇನೋ ಸಂಸ್ಕೃತ ಮಂತ್ರ ಹೇಳುತ್ತಾ ಬಿಳಿ ಹಳದಿ ಕೆಂಪು ಹೂಗಳನ್ನು ನೆಲದಲ್ಲಿ ಚೆಲ್ಲುತ್ತಾರೆ. ಸಂಸ್ಕೃತದ ಗಂಧ ಗಾಳಿಯಿರದವರು, ಮಂತ್ರ ಕಲಿಯದವರು ಅರೆಯುವ ಕಲ್ಲಿನ ಮುಂದೆ ಉದ್ದಕ್ಕೆ ಬೀಳುತ್ತಾರೆ.

ಈ ಅಯ್ಯ ದೇವರ ಮುಂದೆ ನಿಂತು ಏನು ಕೇಳಿದರೂ ಏನು ಬೇಡಿಕೊಂಡರೂ ಅದೆಲ್ಲವನ್ನೂ ಜೀವಮಾನದಲ್ಲಿ ಒಮ್ಮೆಯಾದರೂ ಪಡೆದೇ ತೀರುತ್ತಾರಂತೆ. ಹಣ, ಹೆಂಡತಿ, ಡಿಗ್ರಿ, ಆಸ್ತಿ, ಮನೆ.... ಯಾವುದಾದರೂ ಸರಿ. ಸಾಯುವ ಮುನ್ನ ಸಿಕ್ಕಿಯೇ ಸಿಗುತ್ತದಂತೆ.

ಹೀಗೆ ಹಣ, ಆಸ್ತಿ, ಮಕ್ಕಳು, ಪ್ರಮೋಶನ್ ಹೀಗೆ ಏನೇನೆಲ್ಲಾ ಪಡೆದವರು ಅಲ್ಲಿಗೆ ಬಂದು ಸಗಣ' ನೆಲದ ಮೇಲೆ ಕಾಣ'ಕೆಯಾಗಿ ಏನೆಲ್ಲಾ ಬಿಸಾಡುತ್ತಾರೆ. ರೂಪಾಯಿ ನೋಟುಗಳು, ನಾಣ್ಯಗಳು, ಚಿನ್ನದ ಉಂಗುರ, ಹಣ್ಣಿನ ಬಟ್ಟಲು....ಹೀಗೆ ಏನೇನೋ ಕೆಲವರು ಬೆಳ್ಳಿ, ಚಿನ್ನ, ಅಥವಾ ತಾಮ್ರದ ಅರೆಯುವ ಕಲ್ಲು ಮಾಡಿ ತರುತ್ತಾರೆ. ಅಥವಾ ಪಾದರಕ್ಷೆಗಳನ್ನು ಮಾಡಿ ತರುತ್ತಾರೆ. ಮತ್ತೆ ಕೆಲವರು ಬಿಳಿ, ಕೆಂಪು, ಹಸುರು, ಹೀಗೆ ಬೇರೆ ಬೇರೆ ಬಣ್ಣದ ಕಲ್ಲುಗಳಿಂದ ಅರೆಯುವ ಕಲ್ಲು ಮಾಡಿಸಿ ತರುತ್ತಾರೆ.

ಆದರೆ ಗುಡಿಯೂ ಇರದ ಪೂಜಾರಿಯೂ ಇರದ ದೇವರಿಗೆ ಹಣ ಎಂತದಕ್ಕೆ? ಅಥವಾ ಬಂಗಾರದ ಪಾದರಕ್ಷೆಗಳು ಯಾವುದಕ್ಕೆ? ಆದುದರಿಂದ ಅವೆಲ್ಲಾ ಆ ಸಗಣ' ಸಾರಿಸಿದ ನೆಲದಲ್ಲಿ ಎಸೆದ ಹೂಗಳೊಂದಿಗೆ ಅಲ್ಲಲ್ಲಿ ಬಿದ್ದಿರುತ್ತವೆ.

ಅಲ್ಲಿಗೆ ತೀರಾ ಬಡವರೂ ಬರುತ್ತಾರೆ. ಹಣ ಇರದೇ ಇದ್ದವರು, ಮನೆ ಕಳಕೊಂಡವರು, ಆಸ್ಪತ್ರೆ ಖರ್ಚಿಗೆ ಹಣ ಸಾಲದವರು, ಕೆಲಸ ಕಳಕೊಂಡವರು, ಮನೆಯ ಯಜಮಾನನ ಆಶ್ರಯ ತಪ್ಪಿದವರು, ಮಕ್ಕಳನ್ನು ಕಾಲೇಜಿಗೆ ಸೇರಿಸಲಾಗದವರು.... ಹೀಗೆ ಕಷ್ಟದಲ್ಲಿರುವವರು ಅಲ್ಲಿಗೆ ಬಂದು, ನೆಲದಲ್ಲಿ ಎಸೆದ ಕಾಣ'ಕೆಯಾಗಿ ನೀಡಿದ ಹಣ, ವಸ್ತು, ಇವುಗಳನ್ನೆಲ್ಲಾ ಎತ್ತಿಕೊಂಡು ಹೋಗುತ್ತಾರೆ.

**ಮುತ್ತಿನ ಸರಪಳಿ**

ನಿನ್ನ ಒಡಲಿಂದ
ನನ್ನ ಒಡಲಿಗೆ
ಹರಿದು ಬಂದ
ಉನ್ಮತ್ತ ಗಾಳಿಗೆ
ಉದುರಿ ಬಿದ್ದಾವೊ
ತುಟಿಯಿಂದ
ಗೆಳೆಯಾ ಮುತ್ತಿನ
ಸರಪಳಿ!

—ಡಿ.ಎ. ಬಡಿಗೇರ

ಅದರ ಬಗ್ಗೆ ಯಾರೂ ಏನೂ ಹೇಳುವುದಿಲ್ಲ. ವಿರೋಧಿಸುವುದೂ ಇಲ್ಲ. ವಿಚಾರಿಸುವುದೂ ಇಲ್ಲ. ತನಗೆ ಕಡಿಮೆ ಸಿಕ್ಕಿತು, ಅವನಿಗೆ ಜಾಸ್ತಿ ಸಿಕ್ಕಿತು ಅಂತ ಯಾರೂ ಜಗಳ ತೆಗೆಯುವುದಿಲ್ಲ.

ಈ ವಿಚಿತ್ರ ಅಯ್ಯ ದೇವರು ಇಲ್ಲಿ ಹುಟ್ಟಿಕೊಂಡದ್ದು ಸುಮಾರು ಹನ್ನೆರಡು ವರ್ಷಗಳ ಹಿಂದೆಯಂತೆ. ಅದಕ್ಕಿಂತ ಮುಂಚೆ, ಒಂದು ದಿನ, ಒಂದು ಇಪ್ಪತ್ತೊಂದು ಇಪ್ಪತ್ತೆರಡು ವರ್ಷದ ಹುಡುಗ, ಕುಂಭಕೋಣಂನಿಂದ ಕಾಲ್ನಡಿಗೆಯಲ್ಲಿ, ಲಾರಿಯಲ್ಲಿ, ಟ್ರೈನಿನಲ್ಲಿ ಈ ನಗರಕ್ಕೆ ಬಂದ. ಆಗ ಮೇ ತಿಂಗಳು.

ತೂತಾದ ಮುಂಡು. ತೋಳು ಹರಿದ ಶರ್ಟು. ಬರಿ ಕಾಲು. ಹಸಿದ ಹೊಟ್ಟೆ. ಆಯಾಸದಿಂದ ಕುರುಡಾದ ಕಣ್ಣುಗಳು. ಆಲೋಚಿಸಲಾಗದ ತಲೆ....

ಮೂರು ವರ್ಷದ ಹಿಂದೆ ಅವನ ಅಮ್ಮ ತೀರಿ ಹೋಗಿದ್ದಳು. ಒಂದು ತಿಂಗಳ ಹಿಂದೆ ಯಾವುದೋ ನೆಪವೊಡ್ಡಿ ಆತನ ತಂದೆಯನ್ನು ಪೊಲಿಸರು ಎಳೆದುಕೊಂಡು ಹೋದರು. ಅನಂತರ ಕೆಲವೇ ದಿನದಲ್ಲಿ ಅವನ ಗುಡಿಸಲಿಗೆ ಬೆಂಕಿ ಬಿದ್ದು ಸರ್ವನಾಶವಾಯಿತು. ದಿಕ್ಕಿರದವನಾಗಿ ಏನು ಮಾಡಲೂ ತಿಳಿಯದೆ ಜೀವನಕ್ಕೊಂದು ಮಾರ್ಗ ಹುಡುಕಿಕೊಂಡು ಈ ನಗರಕ್ಕೆ ಬಂದಿಳಿದ.

ಬಿಸಿಲ ತಾಪದಿಂದ ಒಣಗಿ ಒಣಗಿ ನೀರಿರದೆ ಕಂಗಾಲಾದ ಈ ನಗರಕ್ಕೆ ಆತ ಕಾಲಿಟ್ಟಾಗ ಆತನ ಪಾದಗಳೆರಡೂ ಕೆಂಪಗಾಗಿ ಹುಣ್ಣುಗಳಾಗಿ, ಮುಟ್ಟಿದರೂ ಕಿರಿಚಿಕೊಳ್ಳುವಷ್ಟು ಉರಿಯುತ್ತಿತ್ತು. ಅಂತೂ ಎಲ್ಲೆಲ್ಲೋ ಓಡಾಡಿ ಕೊನೆಗೆ ಈ ತೌಸಂಡ್ ಲೈಟ್‌ನ ಪ್ರದೇಶಕ್ಕೆ ಬಂದು ಇದೇ ಜಾಗಕ್ಕೆ ಬಂದ.

ಈ ಜಾಗದಲ್ಲಿ-ಎಂದರೆ ಈ ಅಯ್ಯ ದೇವರಿರುವ ಜಾಗದಲ್ಲಿ ಕಣ್ಣು ಕಾಣ'ಸದ ಒಬ್ಬ ಮುದುಕ, ನಾಲ್ಕು ಬಿದಿರಿನ ಕಂಬದ ಮೇಲೆ ತಗಡಿನ ಚೂರು ಹರಡಿ, ಒಂದು ಮನೆ ಅಂತ ಮಾಡಿಕೊಂಡಿದ್ದ. ಕುಂಭಕೋಣಂನ ದಣ'ದ ಹಸಿದ ಹುಡುಗ ಬಂದ ಸಮಯ ಮುದುಕ ಗಂಜಿ ಬೇಯಿಸುತ್ತಾ ಕುಳಿತಿದ್ದ. ಆಗ ಈ ಪ್ರದೇಶದಲ್ಲಿ ಜನವಸತಿ ಬಹಳ ಕಮ್ಮಿ. ಆ ಗಲ್ಲಿಯ ಎರಡೂ ಕಡೆ ಅಸಾಧ್ಯ ಮುಳ್ಳಿನ ಗಿಡಗಳು ಗುಂಪು ಗುಂಪಾಗಿ ಬೆಳೆದಿದ್ದವು.

ಬಾಯಾರಿ, ಹಸಿವೆಯಿಂದ ಕಂಗಾಲಾಗಿ, ಕಾಲಿನ ಹುಣ್ಣುಗಳಿಂದ ನಡೆಯಲಾಗದೆ, ಬಿದಿರಿನ ಕಂಬದ ನೆರಳಿಗೆ ಬಂದು ನಿಂತ ಕುಂಭಕೋಣಂನ ಹುಡುಗನನ್ನು ಕಣ್ಣು ಕಾಣ'ಸದ ಮುದುಕ ಕೇಳಿದ - "ಯಾರದು, ಮುರುಗನಾ ?"

ನಿಜಕ್ಕೆಂದರೆ ಆ ಹುಡುಗನ ಹೆಸರೂ ಮುರುಗನ್ ಆಗಿತ್ತು. ಆ ಮುದುಕನಿಗೆ ದಿವ್ಯ ದೃಷ್ಟಿ ಮತ್ತು ದಿವ್ಯ ಶಕ್ತಿಯಿದ್ದುದರಿಂದ ಆ ಹುಡುಗನ ವಿಚಾರವೆಲ್ಲವೂ ಅವನಿಗೆ ತಿಳಿದಿತ್ತೆಂದು ಹಲವರು ಹೇಳುತ್ತಾರೆ. ಅದೇನೇ ಇರಲಿ, ಆದರೆ ತನಗೆ ಹಿಂದೆಯೇ ಪರಿಚಯವಿತ್ತ ಎಂಬಂತೆ ಮುದುಕ ಕೇಳಿದ,

"ಮುರುಗನ್ ಬಾ ಬಾ.... ಈ ಬಿಸಿಲಲ್ಲಿ ಹಾಗೆ ನಡೆದುಕೊಂಡು ಬರಬೇಕಿತ್ತಾ? ಅದೂ ಬರಿಗಾಲಲ್ಲಿ? ಕೂತುಕೋ, ನೀರು ಕುಡಿ."

ಮುದುಕನು ಹಾಗೆ ಹೇಳಿದ್ದರೂ ಆತನಿಗೆ ಕಣ್ಣು ಕಾಣ'ಸುತ್ತಿರಲಿಲ್ಲ ಎಂದು ನೆನಪಲ್ಲಿಟ್ಟುಕೊಳ್ಳಬೇಕು. ಮುದುಕ ತಂದುಕೊಟ್ಟ ನೀರನ್ನು ಕುಡಿದ ಹುಡುಗ. ಮತ್ತೆ ಸ್ವಲ್ಪ ನೀರನ್ನು ತನ್ನ ಸುಡುವ ಕಾಲುಗಳಿಗೆ ಸುರಿದ. ಅನಂತರ ಗಂಜಿ ಬೇಯುತ್ತಿರುವುದನ್ನು ಮೀನು ತುಂಡು ಮಾಡುತ್ತಿರುವುದನ್ನು ನೋಡುತ್ತಾ ಕುಳಿತುಕೊಳ್ಳುವ ಬೆಕ್ಕಿನಂತೆ, ನೋಡುತ್ತಾ ಕುಳಿತ.

ಆಗ ಮುದುಕ ಹೇಳಿದ, "ಚಟ್ನಿ ಮಾಡ್ತೇನೆ. ಆ ಮೇಲೆ ಗಂಜಿ ಊಟ ಮಾಡಿ ಮಲಕ್ಕೋ ಆಯ್ತಾ ಮುರುಗನ್ ?" ಅರೆಯುವ ಕಲ್ಲಿನಲ್ಲಿ ಚಟ್ನಿ ಅರೆದು, ಅಲ್ಯುಮಿನಿಯಂ ತಟ್ಟೆಯಲ್ಲಿ ಗಂಜಿ ತುಂಬಿ, ಹುಡುಗನ ಮುಂದೆ ಹಿಡಿದು ಮುದುಕ ಹೇಳಿದ, "ಮಗಾ ತಿನ್ನು, ಚಟ್ನಿಯಷ್ಟೇ ನಂಗೆ ಮಾಡಲಿಕ್ಕೆ ಗೊತ್ತಿರುವುದು..."

ಗಂಜಿ ತಿಂದ ಮುರುಗನ್ ಮಲಗಿ ನಿದ್ರೆ ಹೋದ.

ಮರುದಿನ ಮುರುಗನ್ ಕೆಲಸ ಹುಡುಕಲು ಹೊರಟ. ಹೊರಡುವ ಮೊದಲು ಮುದುಕ ಹೇಳಿದ,

"ಮಗಾ ಇಲ್ಲಿ ಬಾ.... ಅಲ್ಲಿ ನಂದು ಚಪ್ಪಲಿ ಉಂಟು ನೋಡು. ತಕ್ಕೊಂಡು ಬಾ.... ನೋಡು, ಹಾಕಿ ನೋಡು, ಸಿಂಗಾದೀತು... ಆಗ್ತದೆ.... ಆಗ್ತದೆ ಅಲ್ವಾ.... ಹೋಗು, ತಕ್ಕೊಂಡು ಹೋಗು. ನಂಗೆ ಯಾಕೆ ಅದು ? ಹೇಗೂ ನಂಗೆ ನಡೀಲಿಕ್ಕೆ ಆಗುವುದಿಲ್ಲ ! ನೀನು ಹಾಕ್ಕೊಂಡು ಹೋಗು."

ಮುದುಕನ ಚಪ್ಪಲಿ ಹಾಕಿಕೊಂಡು ಮುರುಗನ್ ಅಲ್ಲಿಂದ ಹತ್ತು ಕಿಲೋಮೀಟರ್ ದೂರದ ಸಿನೀಮಾ ಸ್ಟುಡಿಯೋಗೆ ಹೋದ. ಅಲ್ಲಿ ವಾಚಮನ್ ಕೆಲಸ ಅವನಿಗಾಗೇ ಕಾದು ಕುಳಿತಂತಿತ್ತು. ಆಗಲೇ ಕೆಲಸಕ್ಕೆ ಸೇರಿಕೊಂಡ.

ಎರಡು ತಿಂಗಳಲ್ಲೇ ಇವನಿಗೆ ಒಂದು ಸ್ಟಂಟ್ ಸಿನೇಮಾದಲ್ಲಿ ಒಂದು ಚಿಕ್ಕ ಪಾರ್ಟು ಸಿಕ್ಕಿತು. ಅದರಿಂದ ಬಂದ ಹಣದಲ್ಲಿ ಒಂದು ಜೊತೆ ಹೊಸ ಚಪ್ಪಲಿ ತಕ್ಕೊಂಡ ತನಗಾಗಿ. ಹಾಗೇ ಆ ಮುದುಕನಿಗಾಗಿ ಇನ್ನೊಂದು ಹೊಸ ಜೊತೆ ತೆಗೆದುಕೊಂಡ.

ಈ ಹೊಸ ಚಪ್ಪಲಿಗಳನ್ನು ಅಯ್ಯನಿಗೆ ಕೊಟ್ಟು ಬರುತ್ತೇನೆ ಎಂದು ಆ ಕಣ್ಣು ಕಾಣದ ಮುದುಕನ ಗುಡಿಸಲಿಗೆ ಬಂದ. ಆದರೆ ಇಲ್ಲಿಗೆ ಬಂದಾಗ....

ಆ ತಗಡಿನ ಗುಡಿಸಲು ಕುಸಿದು ನೆಲಕ್ಕೆ ಬಿದ್ದಿತ್ತು. ಅದರಡಿ, ಕೊಳಕು ನೀರಿನ ಗುಂಡಿಯಲ್ಲಿ....

ಅಲ್ಲಿ ಮುದುಕನ ದೇಹ ಕೊಳೆಯುತ್ತ ಬಿದ್ದಿತ್ತು. ಮುರುಗನ್ ಬಿಡಿ ಬಿಡಿಯಾದ ದೇಹವನ್ನು ಅಲ್ಲಿಂದ ಎಳೆದು ತೆಗೆದು ಅಲ್ಲೇ ಪಕ್ಕದಲ್ಲಿ

ಒಂದು ಹೊಂಡ ಮಾಡಿ ಹುಗಿದ.

ಅಪ್ಪಚ್ಚಿಯಾದ ಅಲ್ಯುಮಿನಿಯಮ್ ಪಾತ್ರೆಗಳು, ಸೌಟು, ಹೆರಮಣೆ, ಮತ್ತು ಕೆಲ ಸಾಮಾನುಗಳನ್ನು ಸರಿಸಿದ. ಅಲ್ಲೇ ನಡುವೆ ಮುರಿಯದೆ ಉಳಿದದ್ದೆಂದರೆ ಒಂದು ಅರೆಯುವ ಕಲ್ಲು ಮಾತ್ರ. ಅದರ ಗುಂಡು ಎಲ್ಲೋ ಉರುಳಿ ಹೋಗಿ ಕೊಳಕಿನಲ್ಲಿ ಬಿದ್ದುಕೊಂಡಿತ್ತು.

ಆ ಸ್ಥಳವನ್ನು ಸ್ವಲ್ಪ ನೀಟಾಗಿಟ್ಟು, ಕಣ್ಣು ಕಾಣದ 'ಅಯ್ಯ'ನಿಗಾಗೇ ತಂದ ಹೊಸ ಚಪ್ಪಲಿಗಳನ್ನು ಅಲ್ಲೇ ಬಿಟ್ಟು, ಅದರ ಮೇಲೆ ಮಾವಿನೆಲೆಗಳನ್ನು ಕಿತ್ತು ತಂದು ಹಾಕಿದ ಮುರುಗನ್ ಅನಂತರ ಹಿಂದೆ ಹೋದ.

ಹಿಂದೆ ಹೋದ ಮರುದಿನವೇ ಅವನಿಗೆ ಹೊಸದೊಂದು ಸಿನೇಮಾದಲ್ಲಿ ಖಳನಾಯಕನ ಪಾತ್ರ ಸಿಕ್ಕಿಬಿಟ್ಟಿತು. ಎರಡು ವಾರ ಕಳೆದು 'ಅಯ್ಯ' ಸತ್ತ ಜಾಗಕ್ಕೆ ಪುನಃ ಬಂದ, ಮಲ್ಲಿಗೆ ಹೂವಿನೊಂದಿಗೆ.

ಅವನು ಆ ಸ್ಥಳಕ್ಕೆ ಮತ್ತೆ ಹಲವು ಸಲ ಬಂದ. ಪ್ರತೀಸಲ ಬಂದು ಹಿಂದೆ ಹೋದಾಗಲೂ ಅವನ ಜೀವನದಲ್ಲಿ ಮಹತ್ವದ ಬದಲಾವಣೆ ಆಗುತ್ತಿತ್ತು. ಮತ್ತೆ ಮೂರೇ ವರ್ಷದಲ್ಲಿ ಅವನು ಸಿನೇಮಾ ಜಗತ್ತಿನ ಒಬ್ಬ ಶ್ರೇಷ್ಠ ಖಳನಾಯಕನಾಗಿಬಿಟ್ಟ. ಆ ಜಗತ್ತಿನಲ್ಲಿ ಹಲ ವರ್ಷ ಮೆರೆದ- ಒಂದು ಹೊಸ ಹೆಸರಿನೊಂದಿಗೆ.

ಆವಾಗಲೇ ಆ 'ಅಯ್ಯ ದೇವರ' ಕುರಿತು ಸುದ್ದಿ ಹರಡತೊಡಗಿತು. ಈ ಸಿನೇಮಾ ನಟ ಈ ಅಯ್ಯ ದೇವರಿಗೆ ಕೈ ಮುಗಿಯದೆ ಯಾವ ಹೊಸ ಕೆಲಸವನ್ನು ಮಾಡುವುದಿಲ್ಲ ಎಂದು ಜನರಿಗೆ ತಿಳಿಯತೊಡಗಿತು. ಮುಂದೆ ಕೆಲ ವರ್ಷಗಳಲ್ಲಿ ಒಂದು ಅಮಾವಾಸ್ಯೆಯ ದಿನ ಮುರುಗನ್‌ನಿಗೆ ಕನಸಲ್ಲಿ ಆ ಕಣ್ಣು ಕಾಣಿಸದ ಮುದುಕ ಕಾಣಿಸಿಕೊಂಡ. ಕಾಣಿಸಿಕೊಂಡು, ಇನ್ನು ಮೂರೇ ದಿನದಲ್ಲಿ ಅವನು ಸತ್ತು ಹೋಗುವುದಾಗಿಯೂ, ಅದರೊಳಗಾಗಿ ಅವನು ಶೇಖರಿಸಿದ ಎಲ್ಲಾ ಹಣ, ಚಿನ್ನ ಎಲ್ಲವನ್ನೂ ದೂರ ಮಾಡಿಬಿಡು ಎಂದೂ ಹೇಳಿ ಮರೆಯಾದ.

ಮರುದಿನವೇ ಮುರುಗನ್, ಆ ಅಯ್ಯದೇವರ ಬಳಿ ಬಂದು ತನ್ನಲ್ಲಿದ್ದ ಎಲ್ಲಾ ಹಣ ಚಿನ್ನ ಮತ್ತೆಲ್ಲಾ ವಸ್ತುಗಳನ್ನು ಆ ಅರೆಯುವ ಕಲ್ಲಿನ ಸುತ್ತ ಬಿಸಾಡಿ ಹಿಂದೆ ಹೋದ. ಮತ್ತೆ ಎರಡೇ ದಿನದಲ್ಲಿ ಸಿನೇಮಾ ಸೆಟ್ ಒಂದರಲ್ಲಿ ಆದ ಬೆಂಕಿ ಅಪಘಾತದಲ್ಲಿ ಸಂಪೂರ್ಣ ಸುಟ್ಟು ಬೂದಿಯಾದ.

ಹೀಗೆ, ಗುರುತರಿಯದ, ಯಾವ ಸಂಬಂಧವೂ ಇರದ ದೂರ ಪ್ರದೇಶದ ಹುಡುಗನಿಂದ ಪೂಜೆ ಮಾಡಿಸಿಕೊಂಡ ಕೊಳಕು ಅರೆಯುವ ಕಲ್ಲು ಮತ್ತು ಹಳೆ ಪಾದರಕ್ಷೆಗಳು ಸಾವಿರಾರು ಜನರಿಗೆ ಪ್ರತೀ ಹಗಲೂ ರಾತ್ರ 'ಅಯ್ಯ ದೇವ'ರಾದದ್ದು ಅಸಾಮಾನ್ಯ ಘಟನೆಯೇ. ●

* * *

## ನಮ್ಮ ವಿಮಾನಪಡೆ

'ರಾಯಲ್ ಇಂಡಿಯನ್ ಏರ್‌ಫೋರ್ಸ್'ಗೆ ಬರೀ ಭಾರತೀಯರನ್ನೇ ಆರಿಸಬೇಕೆಂದು ಸಲಹೆ ನೀಡಲಾಯಿತು. ಈ ಸಲಹೆ ನೀಡಿದ ಸಮಿತಿಯಲ್ಲಿ ಮೋತಿಲಾಲ ನೆಹರೂ ಕೂಡ ಒಬ್ಬ ಸದಸ್ಯರಾಗಿದ್ದರು. ಈ ಸಲಹೆಯಂತೆ ಅಕ್ಟೋಬರ್ ೮, ೧೯೩೨ರಂದು ಮೊದಲ ತಂಡ ಕಾರ್ಯಪ್ರವೃತ್ತವಾಯಿತು. ಇದನ್ನು ಭಾರತ ವಿಮಾನಪಡೆಯ ಉಗಮವೆನ್ನಬಹುದು.

ಸ್ವತಂತ್ರ ಭಾರತದ ವಾಯುಪಡೆಯ ಮೊದಲಸೇನಾನಿಯಾಗಿ ನೇಮಕಗೊಂಡು 'ಏರ್‌ಮಾರ್ಷಲ್' ಎನ್ನಿಸಿಕೊಂಡವರು ಸುಬ್ರತೋ ಮುಖರ್ಜಿ. ಇವರೋರ್ವ ಅತಿ ಹಿರಿಯ ಪೈಲಟ್. ೧೯೩೯ರಲ್ಲಿ ಎರಡನೆಯ ಮಹಾಯುದ್ಧ ಆರಂಭಗೊಂಡ ದಿನದಂದೇ ಇವರಿಗೆ 'ಫ್ಲೈಟ್ ಲೆಫ್ಟಿನೆಂಟ್' ಎಂದು ಆರ್.ಎ.ಎಫ್.ನ ಸ್ಕ್ವಾಡ್ರನ್ ನಂ. ೧ರ ಮುಖ್ಯಸ್ಥರನ್ನಾಗಿ ಬಡ್ತಿ ನೀಡಲಾಗಿತ್ತು.

● ಕೆ. ಗಣೇಶ್

# ನಮ್ಮ ಊರಿನ ಪುಣ್ಯಜೀವಿಗಳು

## ಶೇಷಣ್ಣ

ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ನನ್ನೂರು. ಊರು ನೆನಪಾದಾಗಲೆಲ್ಲ ಹನುಮನ ದೇಗುಲವೂ ಅದರ ಪೂಜೆಗೆಂದು ನೇಮಕವಾಗಿದ್ದ ಶೇಷಣ್ಣನವರೂ ನೆನಪಿಗೆ ಬರುತ್ತಾರೆ.

ಶೇಷಣ್ಣನವರದು 'ಕರ್ಮಣ್ಯೇವಾಧಿಕಾರಸ್ತೇ...' ಎಂಬಂಥ ವ್ಯಕ್ತಿತ್ವ. ಊರಿನ ಎಲ್ಲರ ಮನೆಗಳ ಆಚಾರ ವಿಚಾರಗಳೂ ಅವರಿಗೆ ಗೊತ್ತು. 'ಇವತ್ತು ಇಂಥ ತಿಥಿ', 'ಬರುವ ವಾರ ನಿಮ್ಮ ತಂದೆಯ ಶ್ರಾದ್ಧ' ಎಂದು ಜ್ಞಾಪಿಸುತ್ತಲೇ 'ಗೌರೀ ಹಬ್ಬ ಬಂತು ಮಗಳನ್ನು ಕರೆಸಿಕೋ,' 'ಈ ದೀಪಾವಳಿಗೆ ಅಳಿಯ ಬರಬೇಕು,' ಮುಂತಾಗಿ ಸಲಹೆ ನೀಡುತ್ತಿದ್ದರು. ಸುಮಂಗಲಿಯರು ಬರಿ ಹಣೆಯಲ್ಲಿ ಅಡ್ಡಾಡುವುದನ್ನು ಕಂಡರೆ ಅವರಿಗಾಗುತ್ತಿರಲಿಲ್ಲ. 'ಹಣೆಯನ್ನು ನಾಯಿ ನೆಕ್ಕಿತೇನು ?' ಎಂದು ಕೇಳಿಯೇ ಬಿಡುತ್ತಿದ್ದರು.

ಶೇಷಣ್ಣ ಹನುಮಂತನ ಪೂಜೆ ಮಾಡುತ್ತಿದ್ದುದ್ದೇ ಒಂದು ವೈಶಿಷ್ಟ್ಯ. ಊರಿನಲ್ಲಿ ಹೂ ಬಿಡುವ ಗಿಡಗಳೆಲ್ಲವನ್ನೂ ಅವರು ಗುರುತಿಟ್ಟುಕೊಂಡಿದ್ದರು. ದೂರದಿಂದ ಹನುಮನಿಗೆ ಹೂವು ಎಸೆಯುವುದು ಅವರ ರೂಢಿ. ಆ ದೇವರೊಂದಿಗೆ ಸಖನಲ್ಲಿರುವ ಸಲುಗೆ ಹೊಂದಿದ್ದ ಶೇಷಣ್ಣ ಒಮ್ಮೊಮ್ಮೆ "ನೀನು ಏನು ಮಹಾ ಮಾಡಿದೆ ಅಂತ ಜಂಬ ಪಡ್ತೀಯೋ. ನಮ್ಮ ಊರಿನಲ್ಲಿ ನಿನಗೆ ಅಭಿಷೇಕಕ್ಕೆ ನೀರು ತರಿಸಿಕೊಡುವ ಶಕ್ತಿ ನಿನಗಿಲ್ಲ" ಎಂದು ಮೂದಲಿಸುತ್ತಿದ್ದರು. ಕುಡಿಯಲೂ ನೀರು ದೊರೆಯದಂಥ ಪರಿಸ್ಥಿತಿಯಲ್ಲಿ ಅವರ ಅಸಮಾಧಾನ ವ್ಯಕ್ತಗೊಳ್ಳುತ್ತಿದ್ದುದು ಸಹಜವೇ ಆಗಿತ್ತು. ಒಮ್ಮೊಮ್ಮೆ ತಾನು ಅಂದದ್ದು ಅತಿಯಾಯಿತೆನಿಸಿದಾಗ 'ಸಿಟ್ಟು ಮಾಡ್ಕೋಬೇಡ, ಏನೇನೋ ಅಂದುಬಿಟ್ಟೆ,' ಎಂದು ಕಣ್ಣೀರುಗರೆಯುತ್ತಿದ್ದರು.

ಕಲಿಯುಗದಲ್ಲೂ ಭಗವಂತನೊಂದಿಗೆ ಸಂಭಾಷಣೆ ನಡೆಸುತ್ತಿದ್ದ ಅವರನ್ನು ನೋಡುವುದು ಮೋಜೆನಿಸುತ್ತಿತ್ತು. ಶೇಷಣ್ಣ ಪ್ರತಿ ಕಲ್ಲಿನಲ್ಲಿ ಹನುಮನನ್ನು ಕಂಡರೆ ನಾನು ಹನುಮನ ಪ್ರತಿ ವಿಗ್ರಹದಲ್ಲಿ ಶೇಷಣ್ಣನನ್ನು ಕಾಣುತ್ತೇನೆ.

• ಟಿ.ವಾ.ಅ.ಶಾಸ್ತ್ರಿ

---

## ವಿಶಾಲಾಕ್ಷಮ್ಮ

ಇಂದಿನ ಯಾಂತ್ರಿಕಯುಗದಲ್ಲಿ ಎಲ್ಲಿಯೂ ಸಲ್ಲದವರು ಎಂಬಂತಹ ಸ್ಥಿತಿ ಬಹುಪಾಲು ವೃದ್ಧರಿಗೆ. ಆದರೆ ಇಂತಹ ವೃದ್ಧರನ್ನು ಕೈ ಬೀಸಿ ಕರೆಯುವ, ನಗು ಮುಖದಿಂದ ಸ್ವಾಗತಿಸುವ ಸಂಸ್ಥೆಯೊಂದು ಮೈಸೂರಿನಲ್ಲಿದೆ. ಅದುವೆ 'ಶ್ರೀ ಭಾರತಿ ವೃದ್ಧ ಸೇವಾಶ್ರಮ.'

ಈ ಸೇವಾಶ್ರಮದ ಹಿಂದಿನ ಶಕ್ತಿ ಹೆಸರಿಗೆ ತಕ್ಕ ಹಾಗೇ ಇರುವ ವಿಶಾಲ ಹೃದಯದ ವಿಶಾಲಾಕ್ಷಮ್ಮನವರು ದಿಟ್ಟಮನದ ಹುಟ್ಟು ಹೋರಾಟಗಾರ್ತಿ. ಸಂಕಲ್ಪಿಸಿದ್ದನ್ನು ಸಾಧಿಸುವ ಛಲವುಳ್ಳವರು. ೧೯೨೦ರಲ್ಲಿ ಮೇಲುಕೋಟೆಯ ಹಳೇಬೀಡಿನಲ್ಲಿ ಹುಟ್ಟಿ ೧೯೩೪ರಲ್ಲಿ ಅಗರಬತ್ತಿಯ ಉತ್ಪಾದಕರಾದ ಎಚ್.ನಂಜಪ್ಪಯ್ಯ ಅವರ ಗೃಹಲಕ್ಷ್ಮಿಯಾಗಿ ಮನೆ ತುಂಬಿದರು. ಪತಿಗೆ ಹೆಗಲೆಣೆಯಾಗಿ ದುಡಿದು ನೂರಾರು ಕಾರ್ಮಿಕರಿಗೆ ಆಧಾರವಾಗಿ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಪ್ರಶಸ್ತಿಗಳನ್ನು ಗಳಿಸಿ ಯಶಸ್ಸಿನ ಸುಗಂಧವನ್ನು ಎಲ್ಲೆಡೆ ಬೀರಿರುವ ಮೈಸೂರಿನ 'ಅರವಿಂದ ಪರಿಮಳ ವರ್ಕ್ಸ್' ಅನ್ನು ಅಂತಾರಾಷ್ಟ್ರೀಯ ಮಟ್ಟಕ್ಕೇರಿಸಿದರು.

ಅದುವರೆಗೂ ಮೈಸೂರಿನಲ್ಲಿ ವೃದ್ಧರಿಗಾಗಿ ಯಾವ ಆಶ್ರಮವೂ ಇರಲಿಲ್ಲ. ೧೯೭೮ರಲ್ಲಿ ನಂಜಪ್ಪಯ್ಯನವರ ಮನದಲ್ಲಿ ಈ ವಿಚಾರ ಮೂಡಿದಾಗಲೇ ವಿಧಿ ಅವರನ್ನು ಕರೆದೊಯ್ದಿತು. ಆಗ

ನೊಂದ 'ಅಮ್ಮ'ನ ಮನಕ್ಕೆ ಸಾಂತ್ವನ ನೀಡಿದ್ದು ರಾಮಕೃಷ್ಣಾಶ್ರಮದ ಶ್ರೀ ಸೋಮನಾಥಾನಂದಜಿಯವರ ಮಾರ್ಗದರ್ಶನ. "ಇತರರ ನೋವಿನಲ್ಲಿ ನಿನ್ನ ನೋವನ್ನು ಮರೆ" ಎಂಬ ಉಪದೇಶ. ಅದೇ ವೇಳೆಗೆ ನಿಲ್ಲಲು ನೆಲೆಯಿಲ್ಲದ ಶತಾಯುಷಿ ವೃದ್ಧೆಯರನ್ನು ಶೃಂಗೇರಿ ಶ್ರೀ ಜಗದ್ಗುರುಗಳ ಸಹಾಯದಿಂದ ಶ್ರೀ ಮಠಕ್ಕೆ ಸೇರಿದ ಪುಟ್ಟಮನೆಯೊಂದರಲ್ಲಿ ಇರಲು ಏರ್ಪಡಿಸಿದ್ದು, ವೃದ್ಧಾಶ್ರಮದ ಸ್ಥಾಪನೆಗೆ ನಾಂದಿಹಾಡಿತು. ೧೯೮೮ರಲ್ಲಿ ಸ್ವಂತ ಕಟ್ಟಡ 'ಶ್ರೀ ಭಾರತಿ ವೃದ್ಧ ಸೇವಾಶ್ರಮ' ಎಂಬ ಹೆಸರು ಹೊಂದಿ, ಇಂದು ೬೫ರ ಮೇಲ್ಪಟ್ಟ ೧೨ ಪುರುಷರನ್ನು ಒಳಗೊಂಡಂತೆ ೭೫ ವೃದ್ಧರ ಊರುಗೋಲಾಗಿದೆ ಈ ತಾಣ.

ಸಾಂಕ್ರಾಮಿಕ ರೋಗಿಗಳಿಗೆ, ಗಂಡು ಮಕ್ಕಳಿದ್ದವರಿಗೆ ಹಾಗೂ ೬೫ಕ್ಕಿಂತ ಕಡಿಮೆ ವಯಸ್ಸಿನವರಿಗೆ ಇಲ್ಲಿ ಪ್ರವೇಶವಿಲ್ಲ. ಹಿತಮಿತ ಸಸ್ಯಾಹಾರ, ಅವರವರ ಶಕ್ತಿಗೆ ಆಸಕ್ತಿಗೆ ತಕ್ಕಂತೆ ಭಜನೆ, ಪಾರಾಯಣ, ಇತ್ಯಾದಿ ದಿನ ನಿತ್ಯದ ಕಾರ್ಯಕ್ರಮ. ಆಶ್ರಮದಂಗಳದ ಸುಂದರ ಗಣೇಶನ ಗುಡಿ, ರಾಮಕೃಷ್ಣ ವಿವೇಕಾನಂದರ, ಭಾವಚಿತ್ರಗಳನ್ನೊಳಗೊಂಡ ಧ್ಯಾನ ಮಂದಿರ, ಭಗವಂತನ ಸಾನ್ನಿಧ್ಯದ ತಂಪು ತರುತ್ತವೆ. ಅಡಿಗೆಯವರು, ವೈದ್ಯರು, ತಮ್ಮ ಮಕ್ಕಳ ಸಂಪೂರ್ಣ ಸಹಕಾರದಿಂದ ಆಶ್ರಮ ವಾಸಿಗಳ ಊಟೋಪಚಾರಗಳ ಬಗ್ಗೆ ವೈಯಕ್ತಿಕ ಮೇಲ್ವಿಚಾರಣೆ ನಡೆಸುತ್ತಾರೆ ವಿಶಾಲಮ್ಮನವರು. ವೃದ್ಧರಿಗಾಗಿ ಟಿ.ವಿ. ರೇಡಿಯೋಗಳ ಸೌಕರ್ಯವಿದೆ.

ಸರ್ಕಾರದ ಸಹಾಯ ಪಡೆಯದೆ, ತಮ್ಮ ಶ್ರೀಮಂತಿಕೆಯನ್ನು ಸಾರ್ಥಕಗೊಳಿಸಿಕೊಂಡಿದ್ದಾರೆ. ೧೯೩೭ರಲ್ಲಿ ಆಂಗ್ಲ ಪೋಲೀಸ್ ಅಧಿಕಾರ ಹ್ಯಾಮಿಲ್ಟನ್ ಅವರ ಹೆಸರನ್ನು, ಮೈಸೂರು ಸೆಂಟ್ರಲ್ ಪೋಲೀಸ್ ಠಾಣೆಯ ಕಟ್ಟಡಕ್ಕೆ ಇರಿಸಿದಾಗ ಇದನ್ನು ವಿರೋಧಿಸಿ ಶ್ರೀಮತಿ ವಿಶಾಲಾಕ್ಷಮ್ಮ ತಮ್ಮ ನೆರೆಹೊರೆಯವರನ್ನು ಹುರಿದುಂಬಿಸಿ ತಮ್ಮ ಒಂದೂವರೆ ವರ್ಷದ ಕಂದನನ್ನು ಕಂಕುಳಿಗೇರಿಸಿ ಸತ್ಯಾಗ್ರಹ ನಡೆಸಿದ್ದು ಸ್ಮರಣೀಯ. ೧೯೪೭ರಲ್ಲಿ ಮೈಸೂರು ರಾಮಸ್ವಾಮಿ ವೃತ್ತದಲ್ಲಿ ತ್ರಿವರ್ಣ ಧ್ವಜ ಹಾರಿಸಿ ಪೊಲೀಸರ ಗುಂಡಿಗೆ ಈಡಾದ ರಾಮಸ್ವಾಮಿಯವರ ಕಳೇಬರವನ್ನು ಪೊಲೀಸರು ಅವರ ಮನೆಯವರ ಸ್ವಾಧೀನಕ್ಕೆ ಕೊಡಲು ನಿರಾಕರಿಸಿದಾಗ ಶ್ರೀಮತಿ ವಿಶಾಲಾಕ್ಷಮ್ಮ ಜೊತೆಯವರೊಂದಿಗೆ ರುದ್ರ ಭೂಮಿಯವರೆಗೂ ಪ್ರತಿಭಟಿಸುತ್ತ ನಡೆದುದು ನೆನಪಿನಲ್ಲುಳಿಯುವ ಸಂಗತಿ. ಮಾಜಿ ರಾಷ್ಟ್ರಪತಿ ಜೈಲ್‌ಸಿಂಗ್ ಹಾಗೂ ಮಾರ್ಗರೆಟ್ ಆಳ್ವಾರಿಂದ ಸನ್ಮಾನಿತರಾದ ಇವರಿಗೆ ಸಂದ ಗೌರವಗಳು ಅಸಂಖ್ಯ.

ಜೀವನದ ಕೋಟಲೆಯ ಕುಲುಮೆಯಲ್ಲಿ ಬೆಂದ ಜೀವಿಗಳಿಗೆ ಈ ಅಮ್ಮನ ವಾತ್ಸಲ್ಯದ ಒಂದು ಸ್ಪರ್ಶ, ಒಂದು ಹಿತನುಡಿ, ಇಲ್ಲಿಗೆ ಬರುವವರೆಗೂ



ಜೀವನವೇ ಸಾಕು ಎನ್ನುತ್ತಿದ್ದವರಲ್ಲಿ ನಾಳೆಗಳನ್ನು ಕಾಣುವ ಆಸೆಯನ್ನು ತುಂಬುತ್ತವೆ.

ಅನೇಕ ಸಂಘ ಸಂಸ್ಥೆಗಳ ಯಶಸ್ಸಿಗೆ ಸಹಾಯದ ಉದಾರ ಹಸ್ತ ನೀಡುವ ೭೮ ರ ವೃದ್ಧೆ ವಿಶಾಲಾಕ್ಷಮ್ಮನವರ ಕಾರ್ಯ ವೈಖರಿ ನಮ್ಮ ತರುಣ ತರುಣಿಯರನ್ನೂ ನಾಚಿಸುವಂಥದ್ದು. "ಈ ವೃದ್ಧ ಜೀವಿಗಳಲ್ಲಿಯೇ ಭಗವಂತನನ್ನು ಕಾಣುತ್ತೇನೆ. ಇದೇ ನನ್ನ ಪೂಜೆ" ಎನ್ನುವ ವಿಶಾಲಾಕ್ಷಮ್ಮನವರಿಗೆ ಈ ವೃದ್ಧಾಶ್ರಮವೊಂದು ತಪೋಭೂಮಿ.

● ಟಿ.ಎಸ್. ಲಲಿತ

# ಚಿರಂತನ

ಎದುರು ಮನೆಯ ಅಜ್ಜ ಸತ್ತರು ತಿಂಗಳ ಹಿಂದೆ
ಮಾಸಗಟ್ಟಲೆ ಹಾಸಿಗೆ ಹಿಡಿದು ಮೇಲೇಳದಂತೆ
ಮನೆ ತುಂಬ ಅಳು, ಮಲಗಿದ ಶವದೆದುರು
ತಲೆ ಚಚ್ಚಿಕೊಳ್ಳುವ ಮುದಿ ಹೆಂಡತಿ ಮಕ್ಕಳು
ಸೊಸೆಯಂದಿರು ಮೊಮ್ಮಕ್ಕಳು ಬಂಧು ಗೆಳೆಯರು,
ಶವಕ್ಕೆ ಎಳ್ಳು ನೀರು ಬಿಟ್ಟು ಸಿದಿಗೆ ಹೊತ್ತು
ನಡೆದಾಗ ಬಿದ್ದು ಬಿದ್ದು ಉರುಳಾಡಿದಳು ಅಜ್ಜಿ
ನನ್ನನ್ನು ಕರಕೊಂಡು ಹೋಗಿರಿ ಯಾಕೆ ಬದುಕಲಿ ಎಂದು,
ಚಿತೆಯ ಮೇಲೆ ಶವವಿರಿಸಿ ಕಟ್ಟಿಗೆ ಜೋಡಿಸಿ
ಬೆಂಕಿ ಇಕ್ಕುವಾಗ ನೆರೆದವರ ಬಾಯಲ್ಲಿ ನಿಟ್ಟುಸಿರು
ಬದುಕೊಂದು ನೀರಗುಳ್ಳೆ ಎಂದು;
ಧಗಧಗ ಉರಿದು ತಲೆ ಠಪ್ಪೆಂದ ಮೇಲೆ ಮರಳಿದೆ ಮನೆಗೆ
ಸ್ನಾನ ಮಾಡಿ ವಿಷಾದದ ಚಹ ಕುಡಿದೆ
ಎದುರು ಮನೆ ಮೌನದ ಹಾಗೆ.

ತಿಂಗಳಾಯಿತು ಮೊನ್ನೆ ಮಳೆ ಸುರಿಯಿತು
ಗುಡಿಸಲುಗಳು ತೇಲಿ ಹೋಗುವ ಹಾಗೆ
ನಿನ್ನೆ ಮತ್ತದೇ ಮಸಣಕ್ಕೆ ಹೋಗಿದ್ದೆ
ಸ್ವಚ್ಛವಾಗಿತ್ತು ನೆಲ, ಇಲ್ಲಿ ಶವ ಸುಟ್ಟಿದ್ದರೆಂಬ
ಕುರುಹು ಕೂಡ ಇಲ್ಲದ ಹಾಗೆ,
ಮೊಳಕೆಯೊಡೆದ ಗರಿಕೆ ನಸುನಗುತ್ತಿತ್ತು-
ಚಲಿಸುತ್ತಿದ್ದ ಸೂರ್ಯ ಮೆಲ್ಲಗೆ ನೆತ್ತಿಯ ಮೇಲೆ.
ಮರಳಿ ಮನೆಗೆ ಬಂದು ನೋಡುತ್ತೇನೆ
ಎದುರು ಮನೆ ತುಂಬ ಕಿಲಕಿಲ ನಗು
ವಾರದ ಹಿಂದೆ ಹುಟ್ಟಿದ ಮೊಮ್ಮಗನನ್ನು ಮುತ್ತುಗರೆಯುತ್ತ
ಎತ್ತಿಕೊಂಡ ಅಜ್ಜಿಯ ಮುಖದ ತುಂಬ ಜೀವಕಳೆ
ತಲೆ ಬೋಳಿಸಿಕೊಂಡ ಮಗ ಕೂಡ ತನ್ನ ಕುಡಿಗೆ
ಹೆಸರಿಡುವ ಹರ್ಷದಲ್ಲಿ ಓಡಾಡುತ್ತಲಿದ್ದ ಓಣಿ ಸಾಲದೆಂಬ ಹಾಗೆ.



• ಜಗದೀಶ ಮಂಗಳೂರಮಠ



ಕಂಬನಿ
ಒರೆಸಿದ
ಕೈ

# ಮೀರಾ ಮಹಾದೇವನ್

೧೯೭೧ನೇ ಇಸವಿಯ ಒಂದು ದಿನ. ಹೊಸ ದೆಹಲಿಯ ಪಿ.ಡಬ್ಲ್ಯು.ಡಿ. ಆಫೀಸಿನಲ್ಲಿ, ಹತ್ತಿ ಸೀರೆ ಉಟ್ಟ ದೊಡ್ಡ ದೊಡ್ಡ ಕಂಗಳ ಸ್ವಲ್ಪ ದಪ್ಪವೇ ಎನ್ನಬಹುದಾದ ಒಬ್ಬಾಕೆ ಪ್ರವೇಶಿಸಿದರು. ಆಗ, ಅಲ್ಲಿ ಚೀಫ್ ಇಂಜನಿಯರ್ ಆಗಿ ಸೇವೆ ಸಲ್ಲಿಸುತ್ತಿದ್ದ ಎನ್.ಎಸ್.ಎಲ್. ರಾವ್ ಅವರು, ಬಿರುಗಾಳಿಯಂತೆ ಒಳಪ್ರವೇಶಿಸಿದ ಆಕೆಯ ರಭಸವನ್ನು ಕಂಡು ಅಪ್ರತಿಭರಾದರು ! ಆಕೆ, "ನನ್ನ ಹೆಸರು ಮೀರಾ ಮಹಾದೇವನ್ ! ನಿಮ್ಮಲ್ಲಿ ಸೇವೆ ಸಲ್ಲಿಸುತ್ತಿರುವ ಬಡ ಕೆಲಸಗಾರರ ಪುಟ್ಟ ಮಕ್ಕಳಿಗಾಗಿ, ನಾನಿಲ್ಲಿ ಶಿಶುವಿಹಾರಗಳನ್ನು ನಡೆಸುತ್ತಿದ್ದೇನೆ. ನಾನೆಷ್ಟು ಪ್ರಯತ್ನಪಟ್ಟರೂ, ನಿಮ್ಮ ಇಲಾಖೆ ನೆರವು ನೀಡುತ್ತಿಲ್ಲ. ನಿಮ್ಮವರ ಈ ಅಸಹಕಾರದಿಂದ ನಾನು ದಿಕ್ಕೆಟ್ಟಿದ್ದೇನೆ," ಎಂದು ಪಟಪಟನೆ ಮಾತಾಡಿದರು. ಕೋಪದಿಂದ, ಅವಮಾನಿತರಾದ ರಾಯರು, "ಶಿಶುವಿಹಾರ ನಡೆಸಲು ನನಗೆ ಸರಕಾರದಿಂದ ಆಜ್ಞೆ ಬಂದಿಲ್ಲ. ಈ ಬಗ್ಗೆ ನಾನೆಂದೂ ತಲೆ ಕೆಡಿಸಿಕೊಳ್ಳಲಾರೆ," ಎಂದರು.

---

● ತಾರಾ ಎ. ಕಿಣಿ

"ಮಾತು ಆಮೇಲೆ, ಕೃತಿ ಮೊದಲು. ಒಮ್ಮೆ ನನ್ನೊಡನೆ ಬನ್ನಿರಿ," ಎಂದು ಆಜ್ಞಾಪಿಸುವ ಧಾಟಿಯಲ್ಲಿ ಹಟಮಾರಿ ಮೀರಾ ನುಡಿದಾಗ, ದಾರಿ ಕಾಣದ ಇಂಜನಿಯರ್ ಸಾಹೇಬರು, ಆಕೆಯನ್ನು ಹಿಂಬಾಲಿಸಲೇ ಬೇಕಾಯಿತು. ಇಲಾಖೆಯ ವತಿಯಿಂದ ಕಟ್ಟಲ್ಪಡುತ್ತಿದ್ದ, ಅಪೂರ್ಣವಾದ ದೊಡ್ಡ ಕಟ್ಟಡದ ಧೂಳು ತುಂಬಿದ ಕೊಠಡಿಗಳಲ್ಲಿ ಆ ಶಿಶುವಿಹಾರಗಳು ನಡೆಯುತ್ತಿದ್ದವು! ತಾಯಿ ತಂದೆಯರು, ಮೈ ಹಿಡಿ ಮಾಡಿ ಇಡೀ ದಿನ ದುಡಿತದಲ್ಲಿದ್ದಾಗ, ಎಳೆಯ ಕಂದಮ್ಮಗಳು, ಬಿಸಿಲು ಮಳೆಗಳಿಂದ ಮಾತ್ರ ರಕ್ಷಣೆ ನೀಡಬಲ್ಲ, ಸಿಮೆಂಟು ಹುಡಿ ಧೂಳಿನಲ್ಲಿ ಹೊರಳಾಡುತ್ತಿದ್ದವು! ಕೆಲವು ಆಡುತ್ತಿದ್ದರೆ, ಹಲವು ಅಳುತ್ತಿದ್ದವು! ಕೆಲವೇ ಕೆಲವು ಎಳೆಯ ಕಂದಮ್ಮಗಳು, ಅಂಥಲ್ಲಿಯೂ ಸುಖವಾಗಿ ಚಿಂದಿ ಬಟ್ಟೆಗಳಲ್ಲಿ, ಮಲಗಿ, ನಿದ್ರಿಸುತ್ತಿದ್ದವು! ಈ ಪುಟ್ಟ ಜೀವಗಳು, ಬಾಳಿನ ಎಲ್ಲ ಭೀಕರ ರೋಗಗಳಿಗೆ ತುತ್ತಾಗುವುದಲ್ಲದೇ ಶೇಖರಿಸಿಡಲ್ಪಟ್ಟ ನೀರಿನ ಟಾಕಿಗಳಲ್ಲಿ ಮುಳುಗಿಯೋ ಭಾರವಾದ ತೊಲೆಗಳ ಅಡಿಯಲ್ಲಿ ಅಪ್ಪಚ್ಚಿಯಾಗಿಯೋ ಸಾವನ್ನಪ್ಪುವುದು ಆಗೀಗ ನಡೆಯುವ ಸಂಗತಿ ಎಂಬುದನ್ನು ರಾವ್ ಅವರೂ ಅರಿತವರಾಗಿದ್ದರು. ಆದರೆ ಮೀರಾ ಈ ಕರುಣಾಜನಕ ದೃಶ್ಯವನ್ನು ವಿವರಿಸಿ ತೋರಿಸುವಾಗ ಇಂಜನಿಯರ್ ಸಾಹೇಬರು ಕರಗಿ ನೀರಾದರು. ಕೂಡಲೇ ಮೀರಾರವರಿಗೆ ಬೇಕಾದ ಸಹಾಯ ನೀಡುವಂತೆ ತಮ್ಮ ಇಲಾಖೆಯ ಅಧಿಕಾರಿಗಳಿಗೆ ರಾವ್ ಆಜ್ಞೆ ಮಾಡಿದರು.

ಇಂದು, ಶ್ರೀಮತಿ ಮೀರಾ ಮಹಾದೇವನ್‌ರ 'ಚಲಿಸುವ ಶಿಶುವಿಹಾರಗಳು' ಅತ್ಯಂತ ಜನಪ್ರಿಯವಾಗಿವೆ. ಕೆಳದರ್ಜೆಯ ದುಡಿವ ತಾಯಂದಿರ ಮಕ್ಕಳಿಗಾಗಿ ಇರುವ ಈ ಚಲಿಸುವ ಶಿಶುವಿಹಾರಗಳು ಆರೋಗ್ಯ ಧಾಮ ಮತ್ತು ಮನರಂಜನೆ ವಿಭಾಗಗಳನ್ನು ಒಳಗೊಂಡಿವೆ. ಆರೋಗ್ಯಕರ ಸ್ವಚ್ಛ ವಾತಾವರಣದಲ್ಲಿ, ನಲಿದಾಡುವ ಬಡ ಮಕ್ಕಳನ್ನು ಕಂಡಾಗ, ಎದೆ ತುಂಬಿ ಬರುತ್ತದೆ. ದೆಹಲಿ, ಪುಣೆ, ಮುಂಬೈ ಇತ್ಯಾದಿ ಮಹಾನಗರಗಳಲ್ಲಿ ಇಂಥ ಶಿಶುವಿಹಾರಗಳಲ್ಲಿ ೩೮೦೦ಕ್ಕೂ ಹೆಚ್ಚು ಮಕ್ಕಳನ್ನು ಜೋಪಾನವಾಗಿ ನೋಡಿಕೊಳ್ಳಲಾಗುತ್ತಿದೆ. ಈ ಶಿಶುವಿಹಾರಗಳಿಗಾಗಿ ಖರ್ಚಾಗುವ ವಾರ್ಷಿಕ ಮೊತ್ತ ೮೦ ಲಕ್ಷ ರೂಪಾಯಿಗಳು. ಈ ಮಕ್ಕಳ ಆರೋಗ್ಯ ಪರಿಶೀಲನೆಗೆ, ವಿದ್ಯಾಭ್ಯಾಸಕ್ಕೆ, ಆಹಾರ ವಿಹಾರಗಳ ವ್ಯವಸ್ಥೆಗೆ ೩೬ ಜನ ಅಹೋರಾತ್ರಿ ದುಡಿಯುತ್ತಿದ್ದಾರೆ. ಜೇನು ಬಳಗದಂತೆ ಒಗ್ಗಟ್ಟಿನಿಂದ ದುಡಿಯುತ್ತಿರುವ ಇವರೆಲ್ಲಾ ಸೇವಾ ಮನೋಭಾವದವರೇ.

೧೯೨೯ರ ಡಿಸೆಂಬರ್ ೫ ರಂದು ಕರಾಚಿಯಲ್ಲಿ ಜನಿಸಿದ ಮೀರಾಳ ನಿಜ ನಾಮಧೇಯ ಮರಿಯಂ ಎಂದು. ತಂದೆ ಆರೋನ್ ಜಾಕೋಬ್. ಬಂದರು ಸಂಸ್ಥೆಯ ಓರ್ವ ನಿಷ್ಠಾವಂತ ಅಧಿಕಾರಿ ಆತ. ಲಂಚಪಡೆದು ಲಕ್ಷಗಟ್ಟಲೆ ಗಳಿಸುವ ನೂರಾರು ಅವಕಾಶಗಳಿದ್ದರೂ ಒಮ್ಮೆಯೂ ಅದಕ್ಕಾಗಿ ಬಾಯ್ಬಿಟ್ಟವರಲ್ಲ. ಒಂದೇ ಒಂದು ಪೈಸೆ ಲಂಚಪಡೆದವರಲ್ಲ. ನಿರ್ಲಿಪ್ತರಾಗಿದ್ದು, ದುಡಿತ ಬಾಳಿನ ಧರ್ಮವೆಂಬಂತೆ ಬದುಕಿದವರು. ತಂದೆಯಂತೆ ಮಗಳು.

ಆಕೆಯ ಆತ್ಮೀಯ ಬಾಲ್ಯ ಸ್ನೇಹಿತೆ ಡಾಯನಾ ಬೆಂಜಮಿನ್ ಹೀಗೆನ್ನುತ್ತಾರೆ- "ಮೀರಾ, ದೃಢ ಮನೋಭಾವದ, ಕೆಚ್ಚಿನ ಹುಡುಗಿಯಾಗಿದ್ದಳು. ಎಲ್ಲರನ್ನೂ, ತನ್ನ ಇಚ್ಛೆಗೆ ಮಣಿಯುವಂತೆ ಮಾಡುವ ಶಕ್ತಿ ಅವಳಿಗಿತ್ತು. ಎಲ್ಲರನ್ನೂ ತನ್ನ ನಿರ್ಭೀತ ಮಾತುಗಳಿಂದ, ಅಯಸ್ಕಾಂತದಂತೆ ಸೆಳೆಯುತ್ತಿದ್ದಳು. ಸಹಜವಾಗಿ, ವಿದ್ಯಾರ್ಥಿ ಜೀವನದಲ್ಲಿ, ಇವಳೇ ನಮ್ಮ ನಾಯಕಿಯಾಗಿದ್ದಳು."

ಭಾರತದ ವಿಭಜನೆಯ ನಂತರ ಜಾಕೋಬ್, ಪಾಕಿಸ್ತಾನದ ಕರಾಚಿ ಬಿಟ್ಟು ಭಾರತಕ್ಕೆ ಬಂದರು. ಪುಣೆಯಲ್ಲಿ ಒಂದು ಸೈಕಲ್ ಅಂಗಡಿ ಹಾಕಿ, ಕೈಯ್ಯಲ್ಲಿದ್ದ ಕಾಸು ಕಳಕೊಂಡರು. ಈ ಅಸಹಾಯಕ ಕುಟುಂಬ ಪುಣೆಯಿಂದ ಮುಂಬಯಿಗೆ ಬಂತು. ಆಗ ೧೮ರ ಯುವತಿ ಮೀರಾ. ಮುಂಬಯಿಯ ಸಂಸ್ಥೆಯೊಂದರಲ್ಲಿ ಸ್ಟೆನೋ ಆಗಿ ಕೆಲಸ ಮಾಡುತ್ತ ಉಳಿದ ವೇಳೆಯಲ್ಲಿ ಒಂದು ಹಿಂದೀ ರಾಜಕೀಯ ವಾರ ಪತ್ರಿಕೆ ನಡೆಸಲು ಆರಂಭಿಸಿದರು.

೧೯೫೫ರಲ್ಲಿ ಮೀರಾ ಮುಂಬಯಿಯ ಪತ್ರಿಕೋದ್ಯಮಿ ಟಿ.ಕೆ. ಮಹಾದೇವನ್ನರನ್ನು ವಿವಾಹವಾದರು. ಜ್ಯೂ ಜನಾಂಗಕ್ಕೆ ಸೇರಿದ ಅವರ ಕುಟುಂಬ

ಈ ಅಂತರ್‌ಜಾತೀಯ ವಿವಾಹಕ್ಕೆ ಸಮ್ಮತಿಸಲಿಲ್ಲ. ಆದರೆ ಹಟಮಾರಿ ಮೀರಾ, ಈ ವಿರೋಧಕ್ಕೆ ಸೊಪ್ಪು ಹಾಕಲಿಲ್ಲ. ಮೂರು ವರ್ಷಗಳ ಬಳಿಕ, ಈ ದಂಪತಿಗಳು ತಮ್ಮ ಪುತ್ರ ಉಪಮನ್ಯುವಿನೊಡನೆ ದೆಹಲಿ ಸೇರಿದರು. ವೈವಾಹಿಕ ಜೀವನದ ಪೂರ್ವಾರ್ಧವನ್ನು ಮೀರಾ ತಮ್ಮ ಮಕ್ಕಳ ಲಾಲನೆ-ಪಾಲನೆ ಮತ್ತು ಲೇಖನ ಬರೆಯುವಿಕೆಯಲ್ಲೇ ಕಳೆದರು. ಇದೇ ಕಾಲದಲ್ಲಿ, ಆಕೆ ಸುಂದರವಾದ ಎರಡು ಕಾದಂಬರಿಗಳನ್ನು ಹಿಂದೀ ಭಾಷೆಯಲ್ಲಿ ರಚಿಸಿದರು. ಈ ಕಾದಂಬರಿಗಳ ವಸ್ತು ಆಕೆಯ ಜೀವನಾನುಭವವನ್ನೇ ಆಧರಿಸಿದ್ದು. ಮುಂಬಯಿಯ ದುಡಿವ ಕನ್ಯೆಯರ ಬಾಳು ಮತ್ತು ಇಸ್ರೇಲಿನ ಜ್ಯೂ ಜನಾಂಗದವರು ತಮ್ಮ ದೇಶ ತೊರೆದು, ಹೊಟ್ಟೆಪಾಡಿಗಾಗಿ ದೂರ ದೇಶಗಳಲ್ಲಿ ನೆಲೆಸಿದಾಗ, ನೀರಿನಿಂದ ಹೊರಬಿದ್ದ ಮೀನಿನಂತೆ ಚಡಪಡಿಸು ವುದನ್ನು ಮೀರಾ ತನ್ನ ಈ ಎರಡು ಕಾದಂ ಬರಿಗಳಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಮೀರಾ ಅವರ ಬಾಳ ಬಾನನ್ನು ಸಂಕಷ್ಟದ ಮೋಡಗಳು ಕವಿದಿದ್ದವು. ೧೯೬೦ರ ಕೊನೆಗೆ ಮೀರಾ ತನ್ನ ಮನಃಶಾಂತಿಯನ್ನು ಕಳಕೊಂಡರು. "ಆಕೆ ತುಂಬಾ ಚೆನ್ನಾಗಿ ಬರೆಯುತ್ತಿದ್ದರೂ, ಲೇಖಕಿಯಾಗಿ ಉಳಿಯಲು ಹುಟ್ಟಿರಲಿಲ್ಲ. ತನ್ನ ಬಾಳ ಗುರಿ ಸೇರಲು, ಆಕೆ ಲೇಖನಿ ಕೆಳಗಿಡಬೇಕಾಯ್ತು," ಎನ್ನುತ್ತಾರೆ ಈ ಶಿಶು ವಿಹಾರಗಳ ಇಂದಿನ ಸಂಚಾಲಕಿ ದೇವಿಕಾ ಸಿಂಗ್.

ಒಂದು ಅವಕಾಶ ತಾನಾಗಿಯೆ ಒದಗಿಬಂತು. ೧೯೬೮ರಲ್ಲಿ ಮಹಾತ್ಮಾ ಗಾಂಧೀ ಶತಾಬ್ದಿ ಸಂಘವು, ಮೀರಾ ಅವರನ್ನು ತನ್ನ ಸದಸ್ಯೆಯನ್ನಾಗಿ ಮಾಡಿಕೊಂಡಿತು. ತನ್ನ ಮನೆಯಿಂದ ಪ್ರತಿ ದಿನ ಒಳದಾರಿಯೊಂದರ ಮೂಲಕ ಸಾಗುತ್ತಿದ್ದ ಮೀರಾ, ಸಂಘವನ್ನು ಸೇರಬೇಕಾದರೆ ಒಂದು ಕರುಣಾಜನಕ ದೃಶ್ಯವನ್ನು ಕಾಣುವಂತಾಯ್ತು. ಒಂದು ಬೃಹತ್



ಬಹು ಅಂತಸ್ತಿನ ಕಟ್ಟಡ ನಿರ್ಮಾಣದಲ್ಲಿ ನೂರಾರು ಹೆಂಗಸರು ದುಡಿಯುತ್ತಿದ್ದರು. ಇನ್ನೂ ಅಪೂರ್ಣವಾದ ಕೆಳಗಿನ ಹಂತದ ಕಟ್ಟಡದಲ್ಲಿ ಶಿಶುಗಳೂ ಇದ್ದವು. ಅರೆನಗ್ನಾವಸ್ಥೆಯಲ್ಲಿರುವ ನೂರಾರು ಬಾಲಕ ಬಾಲಕಿಯರು, ಸಿಂಬಳವನ್ನು ಒರೆಸುತ್ತಾ, ಧೂಳು ತುಂಬಿದಪುಟ್ಟ ಕೈಗಳಿಂದ, ಒಬ್ಬರಿಗೊಬ್ಬರು, ತಲೆಯಲ್ಲಿ ತುಂಬಿರುವ ಹೇನುಗಳನ್ನು ತೆಗೆಯುತ್ತಿರುವ ದೃಶ್ಯ! ಆಗತಾನೇ ಪುಟ್ಟ ಹೆಜ್ಜೆ ಇಟ್ಟು ನಡೆಯಲು ಕಲಿತ ಮಕ್ಕಳನ್ನು ಬೀಳದಂತೆ ಅಲ್ಲಲ್ಲಿ ಕಂಬಗಳಿಗೂ, ಮರದ ತೊಲೆಗಳಿಗೂ ಕಟ್ಟಿಹಾಕಿರುವ ದೃಶ್ಯ! ರೋಗಗ್ರಸ್ತ ಶಿಶುಗಳು ಮಲಗಿದ್ದಲ್ಲೇ ಅವುಗಳನ್ನು ನೊಣಗಳು ಮುತ್ತಿರುವ ದೃಶ್ಯ! ಅವುಗಳ ಕರುಣಾಜನಕ ಆಕ್ರಂದನದ ದೃಶ್ಯ! ಈ ದೃಶ್ಯಗಳು ಮೀರಾ ಅವರ ಮನಸ್ಸಿನಲ್ಲೊಂದು ದೃಢ ಸಂಕಲ್ಪ ಮೂಡಿಸಿದವು.

ಇದಕ್ಕಿಂತ ಮೊದಲು, ಹಲವಾರು ಸಲ ಇಂಥ ದೃಶ್ಯಗಳನ್ನು ಕಂಡಿದ್ದರೂ ಮೀರಾ ಅವರ ಮನಸ್ಸು ಹೀಗೆ ಕಲಕಿರಲಿಲ್ಲ. ಒಮ್ಮೆ ಒಂದು ದೃಶ್ಯವನ್ನು ಕಂಡರೆ, ಮರುದಿನವೇ ಅದು ಮನೋಪಟಲದಿಂದ ಮಾಯವಾಗಲು ಪ್ರಾರಂಭಿಸುತ್ತದೆ. ಆದರೆ, ಹಲವು ದಿನಗಳವರೆಗೆ ಒಂದೇ ದೃಶ್ಯವನ್ನು ಪುನಃ ಪುನಃ ಕಂಡಾಗ, ಈ ಕಗ್ಗಂಟನ್ನು ಬಿಡಿಸುವುದು ಹೇಗೆ? ಎಂದು ಮನಸ್ಸು ಚಿಂತಿಸುವುದು ಸಹಜ. ಈ ಸಮಸ್ಯೆಯನ್ನು ಬಗೆ ಹರಿಸಲು ಮೀರಾ ಕಾರ್ಯೋನ್ಮುಖರಾದರು. ತತ್ಕಾಲಕ್ಕೆ ಸಣ್ಣ 'ಬೇಬಿ ಕ್ರೆಶ್' ಒಂದನ್ನು, ಈ ಮಕ್ಕಳಿಗಾಗಿ ಶುರು ಮಾಡಲು ಮೀರಾ ನಿರ್ಧರಿಸಿದರು. ಹೀಗೆ, ಮಾಡುವುದರಿಂದ ಕಟ್ಟಡ ಕೆಲಸ ಮಾಡುವ ತಾಯಂದಿರು, ತಮ್ಮ ಮಕ್ಕಳ ಚಿಂತೆ ಇಲ್ಲದೇ ನೆಮ್ಮದಿಯಿಂದಲೂ, ಒಮ್ಮನದಿಂದಲೂ ದುಡಿಯಬಹುದಾಗಿತ್ತು.

ಭಾರತದ ಮಿಲಿಯಾಂತರ ಕೂಲಿ ಕೆಲಸದವರ ಮಕ್ಕಳನ್ನು ಕುರಿತಂತೆ ಮೀರಾ ತೆಗೆದುಕೊಂಡ ನಿರ್ಧಾರ ಈ ನಿಟ್ಟನಲ್ಲಿ ಪ್ರಥಮ ಹೆಜ್ಜೆಯಾಗಿತ್ತು. ಹಳ್ಳಿಗಳಲ್ಲಿ ಮಳೆಗಾಲದಲ್ಲಿ ತಮ್ಮದೇ ಹೊಲಗಳಲ್ಲಿ ದುಡಿವ ರೈತಾಪಿ ಜನರು, ಉಳಿದ ದಿನಗಳಲ್ಲಿ ನೀರಿನ ಅಭಾವದಿಂದ ಬೇಸಾಯ ಮಾಡಲಾರದೇ, ಸಂಸಾರ ನಿರ್ವಹಣೆಗೆ ಬೇರೆ ದಾರಿ ಕಾಣದೇ ಮುಂಬಯಿಯಂಥ ದೊಡ್ಡ ನಗರಗಳಿಗೆ ವಲಸೆಬರುತ್ತಾರೆ. ಬೇರೆ ಕೆಲಸ ಗೊತ್ತಿಲ್ಲದ ಕಾರಣ ಕಟ್ಟಡ ನಿರ್ಮಾಣದ ಕೂಲಿಗಳಾಗಿ ಸೇರಿ ದುಡಿಯಬೇಕು. ಯಾವ ಸಂಘಟನೆಯನ್ನು ಅರಿಯದ ಇವರು, ಪ್ರತಿ ವರ್ಷ ಬೇರೆ ಬೇರೆ ಕಂಟ್ರಾಕ್ಟರರ ಕೈಕೆಳಗೆ ದುಡಿಯುತ್ತಾ, ಒಂದು ಕಡೆಯ ನಿರ್ಮಾಣ ಮುಗಿದಾಗ ಇನ್ನೊಂದೆಡೆಗೆ ಗಂಟು ಮೂಟೆ ಕಟ್ಟಿ ಹೋಗುತ್ತಿದ್ದರು. ತಮ್ಮ ಸಂಸಾರ ಉಳಿಯಲು ಯಾವ ನೆಲೆಯೂ ಇರದ ಇವರು ತಾವು ದುಡಿಯುತ್ತಿರುವ ಅರೆಬರೆ ಕಟ್ಟಡದಲ್ಲೆ ಸಂಸಾರ ಹೂಡುತ್ತಿದ್ದರು. ಅಲ್ಲಿಯ ಕೆಲಸ ಮುಗಿಯುವವರೆಗೆ ಅದೇ ಅವರ ಪಾಲಿನ ಮನೆ. ಸಾವು ನೋವುಗಳೂ, ಬಸಿರು ಬಾಣಂತನಗಳೂ, ರೋಗ ರುಜಿನಗಳೂ ಇಲ್ಲೇ ನಡೆಯುತ್ತಿದ್ದವು. ಬಹುತೇಕ ಹಸುಳೆಗಳು ಬಹು ಬೇಗನೇ ಸಾವನ್ನಪ್ಪುತ್ತಿದ್ದವು.

ಶಿಶುವಿಹಾರಗಳನ್ನು ಹೇಗೆ ನಡೆಸುವುದು ಎಂಬ ನೀಲಿ ನಕಾಶೆ ಮನದಲ್ಲಿ ಮೂಡದಿದ್ದರೂ ಮೀರಾ ಈ ಸಾಹಸ ಸಾಗರಕ್ಕೆ ಹಾರಿದರು. ಗಾಂಧೀ ಶತಾಬ್ದಿ ಸಂಘದ ಕಾರ್ಯದರ್ಶಿಯನ್ನು ಕಾಡಿ ಬೇಡಿ ಆತನಿಂದ ಒಂದು ಡೇರೆಯನ್ನು ಪಡೆದರು. ಸ್ನೇಹಿತೆಯರಿಂದ ೩೦೦೦ ರೂಪಾಯಿ ದಾನರೂಪವಾಗಿ ಬಂತು. ಆ ಹಣದಿಂದ, ಓರ್ವ ಆಯಾಳನ್ನು ನೇಮಿಸಿ, ಕೆಲವು ತೊಟ್ಟಿಲುಗಳನ್ನೂ, ಸೋಪು, ಬಾತ್ ಟಬ್, ಟವೆಲುಗಳನ್ನೂ ಕೊಂಡುಕೊಂಡು ಭಾರತದ ಮೊದಲ ಬಡ ಮಕ್ಕಳ 'ಬೇಬಿ ಕ್ರೆಶ್' ತೆರೆದರು.

ಆದರೆ ಬಡ ತಾಯಂದಿರು, ಈ ಅಪರಿಚಿತೆಗೆ ತಮ್ಮ ಮಕ್ಕಳನ್ನು ವಹಿಸಲು ಒಪ್ಪಲೇ ಇಲ್ಲ. ಅವರನ್ನು ತುಂಬಾ ಕಷ್ಟಪಟ್ಟು ಒಪ್ಪಿಸಿ, ಕೆಲಮಕ್ಕಳನ್ನು ಕರೆತಂದರೂ, ಈ ಕೊಳಕು ಪಿಳ್ಳೆಗಳನ್ನು ಮುಟ್ಟಿ ಸ್ನಾನ ಮಾಡಿಸಲು ಆಯಾ ಒಪ್ಪಲಿಲ್ಲ! ಈ ಘಟನೆಗಳಿಗೆ ಕಿರೀಟವಿಟ್ಟಂತೇ ಡೇರೆ ಗಾಳಿ ಮಳೆಗೆ ಕುಸಿದು ಬಿತ್ತು!

ಇಷ್ಟೆಲ್ಲಾ ಆದರೂ ಮೀರಾ ಹತಾಶರಾಗಿ ಕೈಚೆಲ್ಲಿ ಕೂರಲಿಲ್ಲ. ಮೊದಲು ನೇಮಿಸಿದ ಆಯಾಳನ್ನು ಬಿಟ್ಟು, ಸೇವಾ ಮನೋಭಾವದ ಇನ್ನೊಬ್ಬ ಆಯಾಳನ್ನು ನೇಮಿಸಿದರು. ಪ್ರತಿ ದಿನವೆಂಬಂತೆ ಕಟ್ಟಡದ ಕೆಲಸ ಸಾಗುವಲ್ಲಿ ತೆರಳಿ, ಒಂದೆರಡು

ತಾಸುಗಳ ಕಾಲ, ಅಲ್ಲಿಯ ಕೆಲಸಗಾರರೊಡನೆ ಮಾತಾಡಿ, ಅವರ ವಿಶ್ವಾಸ ಸಂಪಾದಿಸಿದರು. ಕೆಲಸ ನಡೆವ ವೇಳೆಯಲ್ಲಿ, ತಮ್ಮ ಮಕ್ಕಳನ್ನು ಶಿಶುವಿಹಾರದಲ್ಲಿ ಬಿಡಲು ಅವರನ್ನು ಒಪ್ಪಿಸಿದರು. ಈ ವೇಳೆಗೆ ಸರಿಯಾಗಿ ಒಂದು ಯು.ಎಸ್.ಏಡ್ ಕಟ್ಟಡವನ್ನು ನಿರ್ಮಾಣಗೊಳಿಸುತ್ತಿದ್ದ ಅಮೆರಿಕನ್ ಎಂಜಿನಿಯರ್ ಒಬ್ಬರು ಬಳಿಯಲ್ಲ ಇದ್ದ ಒಂದು ಪುಟ್ಟ ಸುಧಾರಿತ ಕಟ್ಟಡದಲ್ಲಿ 'ಬೇಬಿ ಕ್ರೆಶ್' ಶುರುಮಾಡಲು ಮೀರಾ ಅವರನ್ನು ಆಮಂತ್ರಿಸಿ ಆರ್ಥಿಕ ವ್ಯವಸ್ಥೆಯನ್ನು ಮಾಡಿದರು. ಬಳಿಕ ಒಂದೇ ವರ್ಷದ ಅವಧಿಯಲ್ಲಿ, ಇಂಡೋ-ಜರ್ಮನ್ ಸೋಶಿಯಲ್ ಸರ್ವೀಸ್ ಸೊಸೈಟಿಯಿಂದ ಮೀರಾ ಅವರಿಗೆ ಕರೆ ಬಂತು! ಇದಲ್ಲದೇ, ಕೆನಡಾದ ಹೈ ಕಮೀಷನ್ ಕಟ್ಟಡವು ನಿರ್ಮಾಣ ಹಂತದಲ್ಲಿದ್ದಾಗ ಅಲ್ಲಿ 'ಬೇಬಿ ಕ್ರೆಶ್' ನಡೆಸಲು ಕೆನೇಡಿಯನ್ ಅಧಿಕಾರಿಗಳಿಂದ ಬೇಡಿಕೆ ಬಂತು.

ಹೀಗೆ ೧೯೬೯ರ ವೇಳೆಗೆ, ೨೪೦ ಬಡಮಕ್ಕಳನ್ನು ವಾರದಲ್ಲಿ, ೬ ದಿನಗಳ ಕಾಲ, ಸ್ವಚ್ಛವಾಗಿಟ್ಟು, ಒಳ್ಳೆಯ ಆಹಾರ ನೀಡಿ ನೆಮ್ಮದಿಯಿಂದ ಆಟ ಆಡಿ ಇರುವಂಥ ಒಂದು ವ್ಯವಸ್ಥೆಯನ್ನು ಮೀರಾ ಕಲ್ಪಿಸಿಕೊಟ್ಟರು. ಹಸುಳೆಗಳಿಗಂತೂ ಒಳ್ಳೆಯ ವ್ಯವಸ್ಥೆಯಾಯಿತು. ಆದರೆ ಶೈಶವ ದಾಟಿದ ಬಾಲಕ ಬಾಲಿಕಾ ಸಮೂಹಕ್ಕೆ ಬರಲಿರುವ ಭವಿಷ್ಯಕ್ಕಾಗಿ, ವಿದ್ಯಾಭ್ಯಾಸವು ಅತಿ ಅಗತ್ಯವಾಗಿತ್ತು. ಈ ಯೋಜನೆಯಿಂದ ಕಂಗೆಟ್ಟ ಮೀರಾ ಅವರಿಗೆ, ಕಗ್ಗತ್ತಲಲ್ಲೊಂದು ಮಿನುಗು ತಾರೆಯಂತೆ ಆಶಾಕಿರಣವೊಂದು ಗೋಚರಿಸಿತು. ಭಾರತದ ಪಾರ್ಲಿಮೆಂಟು, ಯಾವುದೇ ಕೆಲಸ ನಡೆವಲ್ಲಿ ೨೦ಕ್ಕಿಂತ ಮಿಗಿಲಾಗಿ ಸ್ತ್ರೀಯರು ದುಡಿಯುತ್ತಿದ್ದರೆ, ಅಲ್ಲೊಂದು ಶಿಶುವಿಹಾರ ತೆಗೆಯಲೇಬೇಕು ಎಂದು ಸುಗ್ರೀವಾಜ್ಞೆ ಹೊರಡಿಸಿತು. ಆದರೆ ಖರ್ಚಿಗೆ ಹೆದರಿದ ಕಂಟ್ರಾಕ್ಟರರು ಬಡ ಮಕ್ಕಳಿಗಾಗಿ ಯಾವ ವ್ಯವಸ್ಥೆಯನ್ನೂ ಕೈಗೊಳ್ಳುತ್ತಿರಲಿಲ್ಲ. ಬುದ್ಧಿವಂತೆ ಮೀರಾ, ಪ್ರತಿಯೊಂದು ಕೆಲಸದ ಸೈಟಿನಲ್ಲಿ ತಾನೇ ವ್ಯವಸ್ಥೆ ಮಾಡಿ ಶಿಶುವಿಹಾರದ ಉದ್ಘಾಟನಾ ಸಮಾರಂಭಕ್ಕೆ ಆರೋಗ್ಯ ಮಂತ್ರಿಯನ್ನೇ ಕರೆದು ವಸ್ತು ಸ್ಥಿತಿ ಅರಿವು ಮಾಡಿಸುತ್ತಿದ್ದರು. ಈ



"ಮಾನ್ಯ ಮಂತ್ರಿಗಳು ತಮ್ಮಲ್ಲಿ ಕಷ್ಟ ಕಾರ್ಪಣ್ಯಗಳನ್ನು ಹಂಚಿಕೊಳ್ಳಲು ಬಂದಿದ್ದಾರೆ ದಯವಿಟ್ಟು ಸಹಕರಿಸಿ....."

ಉಪಾಯ ಫಲಿಸಿತು. ಛೀಮಾರಿ ಹಾಕಿಸಿಕೊಳ್ಳುವುದಕ್ಕಿಂತ, ಮೀರಾಗೆ ಸಹಾಯ ನೀಡುವುದೇ ಮೇಲೆಂಬ ಅರಿವು ಮೂಡಿದ ಕಂಟ್ರಾಕ್ಟುದಾರರು ಮೀರಾಗೆ ಉದಾರ ನೆರವು ನೀಡಲು ಪ್ರಾರಂಭಿಸಿದರು.

ಪ್ರತಿಯೊಂದು 'ಬೇಬಿ ಕ್ರೆಶ್'ನಲ್ಲಿ ಮೂರರಿಂದ ಆರರ ವಯೋಮಿತಿಯೊಳಗಿನ ಮಕ್ಕಳಿಗಾಗಿ ಕಿಂಡರ್ ಗಾರ್ಟನ್ ಕ್ಲಾಸಿನ ವ್ಯವಸ್ಥೆಯಾಯಿತು. ಆರರಿಂದ ೧೨ ವರ್ಷದೊಳಗಿನ ಮಕ್ಕಳಿಗಾಗಿ ಶಾಲೆಯ ವ್ಯವಸ್ಥೆಯೊಡನೆ ಧರ್ಮಾರ್ಥ ಪುಸ್ತಕ, ಬಟ್ಟೆಬರೆ, ಮತ್ತು ಊಟದ ವ್ಯವಸ್ಥೆಯೂ ಆಯಿತು. ರಾತ್ರಿಯಾದೊಡನೆ ಈ ಶಿಶುವಿಹಾರಗಳು ವಯಸ್ಕರ ಶಾಲೆಗಳಾಗಿ ಕೆಲಸ ಮಾಡುತ್ತಿದ್ದವು.

ಈಗ, ಸರಕಾರದ ದೇಣಿಗೆ, ಕಂಟ್ರಾಕ್ಟರರ ದೇಣಿಗೆ, ದಯಾಳು ಶ್ರೀಮಂತರು ಮತ್ತು ಸಮಾಜ ಕಲ್ಯಾಣ ಸಂಸ್ಥೆಗಳ ದೇಣಿಗೆ ಬಂದರೂ ಖರ್ಚು ನಿಭಾಯಿಸುವುದೇ ಕಷ್ಟವೆನಿಸಿತು. ಹೀಗಾಗಿ ಮೀರಾ ಮಿಲ್ಲುಗಳ ಮಾಲಿಕರಿಗೆ, ದುಂಬಾಲು ಬಿದ್ದರು. ಬಟ್ಟೆ-ಬರೆ, ಸಕ್ಕರೆ, ಹಾಲುಗಳ ಹೊಳೆ ಹರಿದು ಬರತೊಡಗಿತು. ಏತನ್ಮಧ್ಯೆ ಮಕ್ಕಳಿಂದಲೇ ಬಿಡಿಸಲ್ಪಟ್ಟ ಚಿತ್ರಗಳೂ ಮಾರಲ್ಪಡತೊಡಗಿದವು.

ಹೀಗೆ ಎಲ್ಲಾ ತರದ ವ್ಯವಸ್ಥೆಗಳನ್ನು ಚತುರ

ಮತಿ ಮೀರಾ ಮಾಡಿದರೂ ಮಕ್ಕಳ ಮನೋವಿಕಾಸವನ್ನು ಅರಿತವರೂ, ಕಲಿತವರೂ ಬಡಮಕ್ಕಳಿಗಾಗಿ ದುಡಿಯಲು ಮುಂದೆ ಬರಲಿಲ್ಲ. ಈಗ ಮೀರಾ ಮಕ್ಕಳ ಮನೋವಿಕಾಸದ ಬಗ್ಗೆ ಏನೂ ಅರಿಯದ ಮಹಿಳೆಯರಿಗೆ ತರಬೇತಿ ನೀಡಿ ಅವರ ಸಹಾಯ ಪಡೆದರು.

ಜೇನಿನಂತೆ ದುಡಿಯುತ್ತಿದ್ದ ಮೀರಾಗೆ, ಆಲಸಿಗರನ್ನು ಕಂಡರಾಗುತ್ತಿರಲಿಲ್ಲ. ಶೀಘ್ರ ಕೋಪಿಯಾದ ಅವರು ಅಂಥವರನ್ನು ಚೆನ್ನಾಗಿ ಬೈದು ಕೆಲಸದಿಂದ ವಜಾ ಮಾಡಿ ಬಿಡುತ್ತಿದ್ದರು. ಒಂದು ಕಟ್ಟಡದ ಕೆಲಸ ಮುಗಿಸಿ, ಇನ್ನೊಂದು ಕಟ್ಟಡದ ಕೆಲಸದ ಸಲುವಾಗಿ ಕೆಲಸಗಾರರು ತೆರಳಿದಾಗ, ಈ ಶಿಶುವಿಹಾರವೂ ಅವರೊಡನೇ ತೆರಳುತ್ತಿತ್ತು. ಆದುದರಿಂದ ಮೀರಾ ಅವರ ಶಿಶುವಿಹಾರಗಳು 'ಚಲಿಸುವ ಶಿಶುವಿಹಾರ'ಗಳೆಂದೇ ಪ್ರಸಿದ್ಧಿಯನ್ನು ಪಡೆದಿವೆ.

ತನ್ನ ಈ ಚಲಿಸುವ ಶಿಶುವಿಹಾರದ ಸಿಬ್ಬಂದಿಯ ಬಗ್ಗೆ, ಮೀರಾಗೆ ಅಪಾರ ಪ್ರೀತಿ. ಅಷ್ಟೇ ಸಹಾನುಭೂತಿ. ಹೆಚ್ಚಿನವರು ಕೇವಲ ಮಧ್ಯಮ ವರ್ಗದವರಾಗಿದ್ದು, ಅಂತಹರ ಸಮಸ್ಯೆಗಳನ್ನು ಮೀರಾ ಚೆನ್ನಾಗಿ ಅರ್ಥ ಮಾಡಿಕೊಳ್ಳುತ್ತಿದ್ದರು. ಎಲ್ಲರ ಎಲ್ಲಾ ಬಗೆಯ ಸಮಸ್ಯೆಗಳನ್ನು ತನ್ನ ಕೈಲಾದಷ್ಟು ನೀಗಿಸುವ ಮೀರಾ, ಈ ಶಿಶುವಿಹಾರಗಳೆಂಬ ಸಂಸ್ಥೆಗಳ ಪಾಲಿಗೆ ಮಾತ್ರವಲ್ಲ, ಅದಕ್ಕೆ ಸಂಬಂಧಿಸಿದ ಪ್ರತಿಯೊಬ್ಬ ಸದಸ್ಯನ ಪಾಲಿಗೂ ಕಲ್ಪತರುವಾಗಿದ್ದರು.

ಅಗತ್ಯ ಬಂದಾಗ ಈ ಶಿಶುವಿಹಾರದ ನೆಲಗುಡಿಸುತ್ತಿದ್ದ ಮೀರಾ, ಕೆಲವು ಸಲ ಆ ಕೊಳಕು ಮಕ್ಕಳ ಮೈ ತೊಳೆದು ಶುಚಿ ಮಾಡುತ್ತಿದ್ದರು. ಯಾವ ಕೆಲಸವಾದರೂ, ಅಸಹ್ಯಪಟ್ಟುಕೊಳ್ಳದೇ, ಸ್ವಸಂತೋಷದಿಂದ ತಾವೇ ಕೈಯಾರೆ ಮಾಡುತ್ತಿದ್ದರು. ಒಮ್ಮೆ ಸರಕಾರೀ ಅಧಿಕಾರಿಯೊಬ್ಬರು ದೇಣಿಗೆ ಪಡೆಯಲು ಈ ಸಂಸ್ಥೆ ಅರ್ಹವಾಗಿದೆಯೇ ಎಂಬುದನ್ನರಿಯಲು ಅನಧಿಕೃತ ಭೇಟಿ ನೀಡಿದರು. ಅಲ್ಲಿ ಕಂಡುಬಂದ ದೃಶ್ಯ ಅವರನ್ನು ತಲೆಬಾಗಿಸುವಂತೆ ಮಾಡಿತು. ಮೀರಾ ತಾವೇ ಬಟ್ಟೆ ರಾಶಿ ಒಗೆಯುತ್ತಿದ್ದರು. ಇದನ್ನು ಕಂಡು ಮೌನವಾಗಿ ಹಿಂತೆರಳಿದ ಆ ವ್ಯಕ್ತಿ, ಹೀಗೆಂದು ರಿಪೋರ್ಟ್ ಬರೆದರು- "ಸಂಚಾಲಕಿ ಮೀರಾ ಮಹಾದೇವನ್ ಓರ್ವ ಮಹಾನ್ ವ್ಯಕ್ತಿ. ಮಕ್ಕಳ ಅಭಿವೃದ್ಧಿಗಾಗಿ ನೀಡಲ್ಪಟ್ಟ ಸರಕಾರದ ದೇಣಿಗೆಯ ಪ್ರತಿಯೊಂದು ಪೈಸೆಯನ್ನೂ ಇವರು ಸದುಪಯೋಗಿಸುತ್ತಾರೆ. ಈ ಅಪೂರ್ವ ವ್ಯಕ್ತಿಯ ಸೇವೆ ಗಮನಿಸಿ, ಸರಕಾರವು ತನ್ನ ದೇಣಿಗೆಯನ್ನು ಇನ್ನೂ ಹೆಚ್ಚಿಸ ಬೇಕಾಗಿ ಅಭಿಪ್ರಾಯಪಡುತ್ತೇನೆ."

೧೯೭೦ ರಿಂದ ಮೀರಾರವರ ಶಿಶುವಿಹಾರಗಳು ಭದ್ರವಾಗಿ ತಳವೂರಿದವು. ದೇಣಿಗೆಗಳು ಎಲ್ಲಿಂದಲೋ ನದಿಗಳಂತೆ ಹರಿದು ಬರಲಾರಂಭಿಸಿದವು. ಆರ್ಥಿಕ ಭದ್ರತೆಯಿಂದ ಉತ್ತೇಜನ ಪಡೆದ ಮೀರಾ, ಇನ್ನೂ ಹೆಚ್ಚಿನ ಹುರುಪಿನಿಂದ ದುಡಿಯಲಾರಂಭಿಸಿದರು. ಆಕೆಯ ದುಡಿತದ ವೈಖರಿಗೆ ನಾಚಿದ ಸಹೋದ್ಯೋಗಿಗಳು ಶಕ್ತಿಮೀರಿ ಶ್ರಮಿಸಲಾರಂಭಿಸಿದರು. ಚಲಿಸುವ ಶಿಶುವಿಹಾರಗಳು ಮುಂಬಯಿ ಮಾತ್ರವಲ್ಲ ದೆಹಲಿಯ ಕೊಳಗೇರಿಗಳಲ್ಲೂ ಸ್ಥಾಪಿಸಲ್ಪಟ್ಟವು. ಮೀರಾರಿಂದ ಪ್ರಭಾವಿತರಾದ ಪರದೇಶದವರು ತಮ್ಮ ತಮ್ಮ ದೇಶದ ಪ್ರತಿನಿಧಿಗಳನ್ನು ಆಕೆಯ ಬಳಿ ಕಳಿಸುತ್ತಿದ್ದರು. ಬಂದವರು ಮೀರಾರಿಂದ ಕಾರ್ಯ ಸಂಘಟನೆಯ ಗುಟ್ಟನ್ನರಿತು ಹಿಂತೆರಳುತ್ತಿದ್ದರು. ಯುನಿಸೆಫ್ ಮತ್ತು ವಾಯ್ ಡಬ್ಲ್ಯುಸಿಎಗಳು ಸಹ ಆಕರ್ಷಿತವಾದವು.

ತಾನು ಪಡೆದ ಪ್ರಶಂಸೆಯಿಂದ ಹೆಮ್ಮೆ ಪಟ್ಟುಕೊಂಡರೂ ಮೀರಾ ಇದು ಬೃಹತ್ ಭಾರತಕ್ಕೆ ತನ್ನ ಅಳಿಲ ಸೇವೆ ಎಂಬುದನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದರು. ದೇಶದ ಮೂಲೆಮೂಲೆಗಳಲ್ಲಿ ಇಂತಹ ಕಾರ್ಯಗಳು ನಡೆದಾಗಲೇ ದೇಶದ ಉದ್ಧಾರ ಎಂಬುದನ್ನು ಅರಿತಿದ್ದರು. ಸಾವಿರಾರು ಮಂದಿ ಕೆಲಸಗಾರ ದಂಪತಿಗಳು ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ನಿರಾಳವಾಗಿರುವಂತೆ ಮಾಡಿದ ಮೀರಾ ಈ ತನ್ನ ಕೆಲಸದಿಂದ ಧನ್ಯತಾಭಾವವನ್ನು ಪಡೆದಿದ್ದರು.

೧೯೭೫ರಲ್ಲಿ, ಅವಿಶ್ರಾಂತ ದುಡಿಮೆಯಿಂದ ಬಳಲಿದ ಮೀರಾರ ಅಶಕ್ತ ದೇಹವನ್ನು 'ಕ್ಯಾನ್ಸರ್' ಕಾಯಿಲೆ ನಿಧಾನವಾಗಿ ಆಕ್ರಮಿಸಿತು. ಪರಿಣಿತ ಡಾಕ್ಟರರು ನಿರಾಶಾದಾಯಕವಾಗಿ ರಿಪೋರ್ಟ್ ಕೊಟ್ಟರೂ ಧೃತಿಗೆಡದ ಮೀರಾ ದುಡಿಯುತ್ತಲೇ ಮುಂದೆ ಸಾಗಿದರು. ೧೯೭೭ರಲ್ಲಿ ಆದಾಗಲೇ

ಮೂರು ಸಲ ಆಪರೇಶನ್ ಮಾಡಲ್ಪಟ್ಟ ಮೀರಾರ ದೇಹಸ್ಥಿತಿ ಶೋಚನೀಯವಾಯಿತು. ಹಲವು ಸಲ ರೇಡಿಯೇಶನ್ ಚಿಕಿತ್ಸೆಯ ಬಳಿಕ ಮೀರಾರ ಕೃಶಕಾಯದಲ್ಲಿ ಮನೆಬಿಟ್ಟು ಹೊರಗೆ ಹೋಗುವಷ್ಟು ತ್ರಾಣವಿರಲಿಲ್ಲ. ಪಾರ್ಥನ ಕುದುರೆಗಳ ಲಗಾಮು ಹಿಡಿದ ಕೇಶವನು ಹೇಗೆ ಕೊನೆಯವರೆಗೆ ಕುರುಕ್ಷೇತ್ರದ ಯುದ್ಧ ಭೂಮಿಯನ್ನು ತನ್ನ ನಿಯಂತ್ರಣದಲ್ಲಿರಿಸಿದ್ದನೋ ಹಾಗೆಯೇ ಹಾಸಿಗೆಯಲ್ಲಿ ಮಲಗಿದ್ದುಕೊಂಡೇ ಮೀರಾ ತನ್ನ ಕಾರ್ಯವನ್ನು ಮುಂದುವರಿಸಿದರು. ಚಲಿಸುವ ಶಿಶುವಿಹಾರಗಳ ಪತ್ರಿಕೆಯ ವಾರ್ಷಿಕ ಸಂಪುಟ ಒಂದು ಹೊರ ಬರಲಿತ್ತು. ಅದಕ್ಕೆ ನೀಡಬೇಕಾದ ವಿನ್ಯಾಸ, ಭಾವಚಿತ್ರಗಳು, ಹಾಗೂ ಲೇಖನಗಳನ್ನು ಕುರಿತು ಸೂಚನೆಗಳನ್ನು ನೀಡುತ್ತಲೇ ಇದ್ದರು ಮೀರಾ! ಆಕೆ ಮಲಗಿದ್ದಲ್ಲಿಂದ ಕಾಲಲ್ಲಿ ತೋರಿದ್ದನ್ನು ತಲೆಯ ಮೇಲೆ ಹೊತ್ತು, ಒಂದು ಕೂದಲೆಳೆಯಷ್ಟು ವ್ಯತ್ಯಾಸವಾಗದಂತೆ ದುಡಿಯುತ್ತಿದ್ದ ಎಲ್ಲಾ ಸಹೋದ್ಯೋಗಿಗಳಿಗೂ ಚೆನ್ನಾಗಿ ಅರಿವಿತ್ತು: ಈ ಬೃಹತ್ ಸಂಪುಟ, ಅಚ್ಚಿನ ಮನೆಯಿಂದ ಹೊರಬರುವಾಗ, ಎಲ್ಲರ ಮೆಚ್ಚಿನ ಮೀರಾ, ತನ್ನ ಬಾಳ ಬಾಗಿಲು ಮುಚ್ಚುವರೆಂದು. ಮುಂಬಯಿ ಶಿಶುವಿಹಾರಗಳ ಕಾರ್ಯದರ್ಶಿ ರುಕ್ಮಿಣಿ ಮಹಾದೇವನ್, ಮೀರಾರವರ ಕೊನೆಯ ಮಾತುಗಳನ್ನು ಕಂಬನಿದುಂಬಿ ಹೀಗೆನ್ನುತ್ತಾರೆ- "ದೂರದಿಂದ ಬಡತನ ಕಂಡು ಕಾಣದಂತೆ ಹೋಗುವುದು ಸುಲಭ. ಆದರೆ, ಈ ಬಡತನದ ಭೂತ ತೊಲಗಬೇಕಾದರೆ, ನಮ್ಮ ದೇಶದ ಪ್ರತಿಯೊಬ್ಬ ಪ್ರಜೆ, ಬಡತನಕ್ಕೆ ತನ್ನ ಬೆನ್ನುದೋರದೇ ಅದರೊಡನೆ ಹೋರಾಡಲೇಬೇಕು." ಉದಾಹರಣೆ ಎಂಬಂತೆ ಮೀರಾ ತಾನೇ ಈ ಬಡತನದ ಭೂತದೊಡನೆ ಕೊನೆಯತನಕ ಹೋರಾಡಿದರು. ಕೇವಲ ಎಂಟೇ ಎಂಟು ವರ್ಷಗಳಲ್ಲಿ ಶಿಶುವಿಹಾರವನ್ನು ಸಣ್ಣದೊಂದು ಡೇರೆಯ ರೂಪದಿಂದ, ಯಾರಿಂದಲೂ ಅಲುಗಾಡಿಸಲಾರದ ಬೃಹತ್ ಸಂಸ್ಥೆಯನ್ನಾಗಿರಿಸಿದರು ಮೀರಾ. ಜುಲೈ ೨೨, ೧೯೭೭ರಂದು ತನ್ನ ೪೮ನೇ ವರ್ಷದಲ್ಲಿ ಮೀರಾ ಎಂಬ ಧ್ರುವನಕ್ಷತ್ರ ಅಸ್ತಂಗತವಾಯಿತು.

ಪ್ರತಿ ಜೀವವೂ ದೇವರ ಕೊಡುಗೆ ಎಂಬ ನುಡಿಯನ್ನು ಚೆನ್ನಾಗಿ ಅರಿತು ಬಡವರ ಬಾಳು ಬೆಳಗಲು ಶ್ರಮಿಸಿದ ಮೀರಾರ ಹೆಸರು ಭಾರತದಲ್ಲಿ ಅನೇಕರಿಗೆ ಇನ್ನೂ ಗೊತ್ತಿಲ್ಲ!

---



# ಅಚ್ಚಳಿಯದ ಪುಟಗಳು

## ನೂರು ರೂಪಾಯಿಗೆ ಚೆಕ್ಕು !

ವಿದ್ಯಾರ್ಥಿಗಳನ್ನು ಮಕ್ಕಳಂತೆ ನೋಡಿ ಕೊಳ್ಳುತ್ತಿದ್ದರು ಎ.ಆರ್. ಕೃಷ್ಣಶಾಸ್ತ್ರಿಗಳು. ಅವರ ಹೃದಯವಂತಿಕೆಯನ್ನು ತೋರುವ ಈ ಕೆಳಗಿನ ಪ್ರಸಂಗ "ಎ.ಆರ್.ಕೃ. ಜೀವನ-ಸಾಧನೆ" (ಸಂಪಾದಕರುಃ ಡಾ. ಹಾ.ಮಾ. ನಾಯಕ ಮತ್ತು ಡಾ. ಎಚ್. ತಿಪ್ಪೇರುದ್ರಸ್ವಾಮಿ, ಪ್ರಕಾಶಕರುಃ ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ ಮೈಸೂರು, ಮೊದಲ ಮುದ್ರಣಃ ೧೯೭೦, ಬೆಲೆಃ ರೂ. ೧೫) ಎಂಬ ಪುಸ್ತಕದಲ್ಲಿ ಡಾ. ಕೆ.ಎಂ. ಕೃಷ್ಣರಾವ್ ಅವರ 'ಶಾಸ್ತ್ರಿಗಳ ಶಿಷ್ಯವಾತ್ಸಲ್ಯ'ಎಂಬಲೇಖನದಿಂದಆಯ್ದದ್ದು.

ಅಂತಿಮ ಆನರ್ಸ್ ಪರೀಕ್ಷೆಗೆ ಹಣ ಕಟ್ಟುವ ಸಮಯ. ನಾನೇನೋ ನಮ್ಮ ತಂದೆಯವರು ಕಳಿಸಿಕೊಟ್ಟ ಹಣವನ್ನು ಕಟ್ಟಿ ನನ್ನ ಕೆಲಸ ಪೂರೈಸಿಬಿಟ್ಟೆ. ಆದರೆ ನನ್ನ ಸ್ನೇಹಿತನ ತೀರ್ಥರೂಪರು ದಿವಂಗತರಾಗಿದ್ದು, ಅವನಿಗೆ ಆ ಪರೀಕ್ಷೆಗೆ ಹಣ ತುಂಬಲು ಯಾರೂ ಇಲ್ಲದೆ, ಈ ವರ್ಷ ಪರೀಕ್ಷೆಗೇ ಹೋಗುವುದು ಬೇಡ ಎಂದು ಆತ ಬಂದು, ಅದನ್ನು ನನಗೆ ತಿಳಿಸಿ, ಕ್ಲಾಸಿಗೆ ಬರುವುದನ್ನು ನಿಲ್ಲಿಸಿಬಿಟ್ಟ. ನನಗೆ ಅವನ ಪರೀಕ್ಷೆಗೂ ಹಣ ಕಟ್ಟುವಷ್ಟು ಅನುಕೂಲ ವಿರಲಿಲ್ಲ.

ಕೃಷ್ಣಶಾಸ್ತ್ರಿಗಳಿಗೆ ಈ ವಿಷಯ ತಿಳಿದು ಅವರು ನನ್ನನ್ನು ಕರೆದು ಅವನ ಬಗ್ಗೆ ವಿಚಾರಿಸಿದರು. "ಅವನು ಪರೀಕ್ಷೆಗೆ ಕೂಡುವುದಿಲ್ಲವಂತೆ- ಹಣ ಇಲ್ಲವಂತೆ- ಓದಿಯೂ ಇಲ್ಲವಂತೆ," ಎಂದು ನಾನು ವರದಿ ಮಾಡಿದೆ.

"ನೀನು ಹೇಗಾದರೂ ಮಾಡಿ ಅವನನ್ನು ಇಂದು ಸಂಜೆಯೇ ನನ್ನ ಬಳಿಗೆ ಕರೆದುಕೊಂಡು ಬರಬೇಕು," ಎಂದು ಪ್ರೀತಿಯಿಂದ ಅಪ್ಪಣೆ ಮಾಡಿದರು. ನಾನು ನನ್ನ ಸ್ನೇಹಿತ ಓಡಾಡುವ ಕಡೆಗಳಲ್ಲೆಲ್ಲ ಹುಡುಕಿ ಅಂತೂ ಪತ್ತೆ ಮಾಡಿ ಗುರುಗಳು ಹೇಳಿದ್ದನ್ನು ಅವನಿಗೆ ತಿಳಿಸಿದ.

"ಈಗ ನಾನು ಅವರನ್ನು ನೋಡೋಕೆ ಬರಲ್ಲ," ಎಂದು ಹಠಹಿಡಿದ. ನಾನು ಅವನ ಮನವೊಲಿಸಿ ಶಾಸ್ತ್ರಿಗಳ ಎದುರಿಗೆ ತಂದು ನಿಲ್ಲಿಸಿದೆ. ಶಾಸ್ತ್ರಿಗಳು ಮೊದಲು ಗಡುಸಾಗಿಯೇ ಇದ್ದರು. "ಹಣ ಇಲ್ಲ, ಪರೀಕ್ಷೆಗೆ ಕಟ್ಟುವುದಿಲ್ಲ ಎಂದು ತಲೆತಪ್ಪಿಸಿಕೊಂಡು ತಿರುಗಿದರೆ ಹೇಗೆ ? ಇದು ಜವಾಬ್ದಾರಿಯ ವರ್ತನೆಯೆ ? ನಾವೆಲ್ಲ ಇರುವುದು ಏಕೆ ? ಒಂದು ವಾರದಿಂದ ಕ್ಲಾಸಿಗೂ ಚಕ್ಕರ್ ಹಾಕುತ್ತಿದ್ದೀಯಂತಲ್ಲ. ಇದರಿಂದ ಬಂದ ಭಾಗ್ಯವೇನು ?" ಎಂದೆಲ್ಲಾ ಆಕ್ಷೇಪಿಸಿದರು. ಅವನು ಮಾತ್ರ ಯಾವುದಕ್ಕೂ ಉತ್ತರ ಕೊಡದೆ ಸುಮ್ಮನಿದ್ದ.

"ಎಷ್ಟಯ್ಯ ಪರೀಕ್ಷೆಗೆ ದುಡ್ಡು ?"

"ಅರವತ್ತು ರೂಪಾಯಿ ಸಾರ್," ಅಂತ ನಾನೇ ಹೇಳಿದೆ.

"ಇಲ್ಲಾ ಸಾರ್, ನನಗೆ ಖಂಡಿತ ಹಣ ಬೇಡ," ಎಂದು ನನ್ನ ಗೆಳೆಯ ತಕ್ಷಣ ಹೇಳಿದ.

"ಹಾಗಾದ್ರೆ ಮತ್ತೇನು ಮಾಡ್ತೀಯಾ ?" ಎಂದು ಕನ್ನಡಕವನ್ನು ಮೂಗಿಗೆ ಏರಿಸಿ, ಪೆನ್ ಹಿಡಿದು ಸರಸರನೆ ನೂರು ರೂಪಾಯಿಗೆ ಚೆಕ್ ಬರೆದು ಅವನಿಗೆ ಕೊಟ್ಟರು !

"ನಿನಗೆ ನನ್ನಿಂದ ಧರ್ಮಾರ್ಥವಾಗಿ ಹಣ ಪಡೆಯಲು ಇಷ್ಟವಿಲ್ಲದೆ ಹೋದರೆ ಚಿಂತೆಯಿಲ್ಲ.

ಇದನ್ನ ಸಾಲ ಅಂತ ತಗೋ. ಪರೀಕ್ಷೆ ಪಾಸು ಮಾಡಿ ಕೆಲಸ ಸಿಕ್ಕ ಮೇಲೆ ನನಗೆ ಈ ಹಣವನ್ನು ಹಿಂದಕ್ಕೆ ಕೊಡು. ಗೊತ್ತಾಯಿತ ? ಈಗಲೇ ಹೋಗಿ ಪರೀಕ್ಷೆಗೆ ಕಟ್ಟಬೇಕು. ಓದುವುದಕ್ಕೆ ಇನ್ನೂ ಕಾಲಾವಕಾಶ ಇದೆ. ನಾಳೆ ಸಂಜೆ ಬಂದು ಪರೀಕ್ಷೆಗೆ ಹಣ ಕಟ್ಟಿದ್ದಕ್ಕೆ ರಸೀತಿ ತೋರಿಸಬೇಕು. ತಿಳೀತ ? ಸರಿ, ಹೋಗಿ,'' ಎಂದು ನಸುನಗುತ್ತ ನಮ್ಮನ್ನು ಕಳಿಸಿದರು.

ಸಂಗ್ರಹ: **ಎಸ್.ವಿ. ರಾಮಚಂದ್ರ**

---

# 'ದುರ್ಗಾಸ್ತಮಾನ'

**ಕನ್ನಡದ ಕಟ್ಟಾಳುಗಳಲ್ಲೊಬ್ಬರಾದ ಕಾದಂಬರಿಕಾರ ತ.ರಾ.ಸು. ಅವರು ಐತಿಹಾಸಿಕ ಕಾದಂಬರಿಗಳನ್ನು ಇಂದಿನ ಸ್ಥಿತಿಗೂ ಪ್ರಸ್ತುತವೆನಿಸುವಂತೆ ಬರೆಯುವಲ್ಲಿ ಸಿದ್ಧಹಸ್ತರು. ಅವರ 'ದುರ್ಗಾಸ್ತಮಾನ' (ಪ್ರಕಾಶಕರು: ಕಾವ್ಯಾಲಯ, ಜಯನಗರ, ಮೈಸೂರು-೧೪. ಪ್ರಥಮ ಮುದ್ರಣ: ೧೯೮೨ ನವೆಂಬರ್)ದ ಪುಟಗಳು ತುಂಬ ಮಹತ್ವದವು.**

ಆ ಸಂಜೆ ಉತ್ಸವಾಂಬಾ ದೇವಾಲಯದ ಎದುರಿನ ಮೂರು ರಸ್ತೆಗಳು ಕೂಡುವ ಪ್ರದೇಶದಲ್ಲಿ ಕಿಕ್ಕಿರಿದು ನೆರೆಯಿತು ಚಿತ್ರದುರ್ಗದ ಜನ.... ದೇವಾಲಯದ ಪಾರ್ಶ್ವದ ಸರಳವೇದಿಕೆಯ ಮೇಲಿರಿಸಿದ ರಾಜಾಸನದಲ್ಲಿ ಕುಳಿತ ನಾಯಕರು, ತಮ್ಮನ್ನು ಕಾಣುತ್ತಿದ್ದಂತೆಯೇ ಜಯಘೋಷ ಮಾಡಿದ ಜನತೆಗೆ ಎದ್ದು ನಿಂತು ಹೇಳಿದರು,

"ನಾವೆಲ್ಲರೂ ಒಂದಾಗಿ ಶತ್ರುವನ್ನು ಎದುರಿಸಬೇಕಾದ ಈ ಹೊತ್ತಿನಲ್ಲಿ ಯಾರೋ ಬಹುಸಣ್ಣ ಜನ ನಮ್ಮನಮ್ಮಲ್ಲಿ 'ಹಿಂದೂ-ಮುಸ್ಲಿಂ' ಎಂಬ ಭೇದಭಾವನೆಯ ವಿಷಬೀಜ ಬಿತ್ತುತ್ತಿದ್ದಾರೆ ಎಂದು ಕೇಳಿದೆವು. ನಿಮ್ಮ ಕಿವಿಗೂ ಈ ಕೆಟ್ಟ ಮಾತು ಬಿದ್ದಿರಬೇಕು... ಆದ್ದರಿಂದ ನಿಮ್ಮನ್ನೊಂದೇ ಪ್ರಶ್ನೆ ಕೇಳಲು ನಾವಿಲ್ಲಿಗೆ ನಿಮ್ಮನ್ನು ಕರೆಸಿರುವುದು. ಮನಬಿಚ್ಚಿ ಹೇಳಿ. ನೀವು ಹಿಂದುಗಳೋ, ಮುಸ್ಲಿಮರೋ, ಬ್ರಾಹ್ಮಣರೋ, ನಾಯಕರೋ ಅಥವಾ ನೀವೆಲ್ಲ ಜಾತಿಮತ ಭೇದವಿಲ್ಲದ ಈ ಚಿತ್ರದುರ್ಗದ ಮಕ್ಕಳೋ ?'' ಅರಸರ ಅಪ್ಪಣೆಯಂತಲ್ಲದೆ, ತಾಯಿ ತನ್ನ ಮಕ್ಕಳಿಗೆ ಕೇಳಿದ ಪ್ರಶ್ನೆಯಂತೆ ನಾಯಕರು ಕೇಳಿದ ಪ್ರಶ್ನೆಗೆ, ಕಿಕ್ಕಿರಿದು ನೆರೆದ ಜನತೆ ಕ್ಷಣಕಾಲ ಸುಮ್ಮನಿದ್ದು, ಬಳಿಕ ಒಕ್ಕೊರಲಿನಲ್ಲಿ ಉತ್ತರ ಕೊಟ್ಟಿತ್ತು- "ನಾವು ಚಿತ್ರದುರ್ಗದ ಮಕ್ಕಳು.''

ಹೊರಗೆ ರಣಕಾಳಿಯ ಪಿಶಾಚನರ್ತನ ವಿಕಟಾಟ್ಟಹಾಸದೊಂದಿಗೆ ಪ್ರಚಂಡ ತಾಂಡವ ವೇಗದಿಂದ ನಡೆದಿತ್ತು ಹೊರಗಿನ ಯುದ್ಧ. ತನ್ನ ಬಿಡಾರದೊಳಗೆ ನಿಸ್ತೇಜ ನೇತ್ರಗಳಿಂದ ದುರ್ಗದತ್ತಲೇ ನೋಡುತ್ತಿದ್ದ ಸರ್ದಾರ್‌ಖಾನ್ 'ಆಗಲಿಲ್ಲ ನನಗೆ ಜೀವದಾನ ಮಾಡಿದವರಿಗೆ ನಾನೇನೂ ಮಾಡಲಾಗಲಿಲ್ಲ' ಎಂದು ಚಿಂತಿಸುತ್ತಿರುವಾಗಲೇ, ಅವನ ಪರಿಚಾರಿಕೆಗೆಂದು ನಿಯಮಿತನಾಗಿದ್ದ ಮುಸ್ಲಿಂ ಆಳು ಒಳಬಂದು, ತಗ್ಗಿದ ದನಿಯಲ್ಲಿ, "ಖಾವಂದ್, ನಮಾಜಿನ ವೇಳೆಯಾಯಿತು,'' ಎಂದು ಹೇಳಿದ. ನಮಾಜು- ಆ ಹೆಸರು ಹೇಳುತ್ತಿದ್ದಂತೆಯೇ ಹಾವು ಕಡಿದಂತೆ ಮೆಟ್ಟಬಿದ್ದ ಸರ್ದಾರ್ ಖಾನ್, "ನಮಾಜು, ದುರ್ಗಕ್ಕೆ ದ್ರೋಹ ಬಗೆದ ಮುಸಲ್ಮಾನರಿಗೆ ಹೇಳು ನಮಾಜು ಮಾಡಲು. ನನ್ನ ಪಾಲಿಗೆ ಖುದಾ ಆಗಿದ್ದ ರಾಜಸಾಹೇಬರೊಂದಿಗೆ ಸಾಯುವುದೊಂದೇ ನಾನು ಮಾಡುವ ನಮಾಜು. ದುರ್ಗಕ್ಕೆ ದ್ರೋಹ ಬಗೆದವರು ಮಾಡುವ ನಮಾಜನ್ನು ನಾನಿನ್ನು ಮಾಡುವುದಿಲ್ಲ...''

"ಅದೇನಾದರೂ ಮಾಡಿ ಖಾವಂದ್, ಆದರೆ ನಮಾಜು ತೀರಿಸಿ ಹೋಗಿ. ತಾವು ಮುಸಲ್ಮಾನರು...''

"ಛೀ, ಜಾತಿಯ ಹೆಸರೆತ್ತಬೇಡ. ದ್ರೋಹಕ್ಕೆ ಮತ್ತೊಂದು ಹೆಸರಾಗಿ ಹೋಯಿತು ಜಾತಿ. ಆ ಕಳಂಕವನ್ನು ನನ್ನ ಮೈರಕ್ತದಿಂದ ತೊಳೆಯುವುದಷ್ಟೇ ನಾನು ಮುಸಲ್ಮಾನನಾಗಿ ಮಾಡಬೇಕಾದ ಕೆಲಸ...'' ಎಂದು ಹೇಳಿ ಅದುವರೆಗೂ ನಿರ್ಜೀವನಂತಿದ್ದ ಸರ್ದಾರ್ ಖಾನ್ ಹೊಸ ಜೀವ ಬಂದವನಂತೆ ಕೊಠಡಿಯಿಂದಾಚೆ ನಡೆದ.

ಸಂಗ್ರಹ: **ಎನ್.ಕೆ. ಸುಧೀಂದ್ರ**

# ಮೆಂತ್ಯದ ಮತ್ತೆ ಮತ್ತೆ

• ಕೃಷ್ಣ ಶ್ರೀನಿವಾಸ ಪಂಚಭಾವಿ
ಹಾಗೂ
• ಎಸ್. ಟಿ. ಪ್ರಭು

**ಸಂ**ಜೆ ಮನೆಗೆ ಬರುವ ದಾರಿಯಲ್ಲಿ ತರಕಾರಿ ಮಾರುಕಟ್ಟೆ ಪ್ರವೇಶಿಸುತ್ತೀರಿ. ಎಳೆಯ ಸವತೆಕಾಯಿ, ಈರುಳ್ಳಿ, ಹಸಿಮೆಣಸಿನಕಾಯಿ ಖರೀದಿಸಿದ ನಂತರ ಕಣ್ಣಿಗೆ ಬೀಳುತ್ತದೆ ದುಂಡೆಲೆಯ ಜವಾರಿ ಮೆಂತ್ಯದ ಸೊಪ್ಪು. ಬಾಯಿ ನೀರೂರುತ್ತದೆ. ಚಕೌರಿ ಮಾಡದೇ ಎರಡು ಸಿವುಡು ಮೆಂತ್ಯದ ಪಲ್ಯ ಖರೀದಿಸಿ ಕೈಚೀಲದೊಳಗಿರಿಸಿ ಮನೆಗೆ ಹೋದ ಮೇಲೆ ಅದರ ಪಚಡಿ ('ಸಲಾಡ್' ಎನ್ನಿ ಬೇಕಾದರೆ) ಮಾಡಿ ತಿಂದ ರುಚಿಯನ್ನು ದಾರಿಯಲ್ಲೇ ಅನುಭವಿಸುತ್ತ ಹೆಜ್ಜೆ ಹಾಕುತ್ತೀರಿ.

ಅಂದು ಎಂದಿಲ್ಲದ ಉಮ್ಮೇದಿ ನಿಮಗೆ. ಪೂರ್ಣಚಂದ್ರನ ಬೆಳದಿಂಗಳಲ್ಲಿ ಮನೆಯ ಟೆರೇಸಿನ ಮೇಲೋ ಅಂಗಳದ ಕೈತೋಟದಲ್ಲೋ ಕುಳಿತು ಬಿಸಿ ಬಿಸಿ ರೊಟ್ಟಿಯೊಂದಿಗೆ ಈ ಪಚಡಿಯನ್ನು ಸವಿಯುವ ಆತುರ.

ಆದರೆ ಸ್ವಲ್ಪ ತಡೆಯಿರಿ ! ಈ ಕೆಳಗಿನ ವಿಷಯ



# ಪಲ್ಯವನ್ನು ನೋಡಿ....

ಓದಿ. ಆಮೇಲೆಯೂ ನಿಮ್ಮ ಆತುರ ಹಾಗೇ ಉಳಿದರೆ ನೀವು ಅಭಿನಂದನೆಗೆ ಪಾತ್ರರು. ಇಲ್ಲದೇ ಹೋದರೆ ನಿಮ್ಮ ಆತುರಕ್ಕೆ ಭಂಗ ತಂದವೆಂದು ನಮ್ಮನ್ನು ದಯವಿಟ್ಟು ಶಪಿಸಬೇಡಿ.

ಮೆಂತ್ಯದ ಸೊಪ್ಪನ್ನು ತಂದು ಅದನ್ನು ಆರಿಸುವಾಗ ಎಲೆಗಳ ಮೇಲೆ ಅಡ್ಡಾದಿಡ್ಡಿಯಾಗಿ ಏನಾದರೂ ಬಿಳಿ ಗೀರುಗಳು ಕಂಡುಬರುತ್ತಿವೆಯೆ? ಗಮನಿಸಿಲ್ಲವೆ? ಮೇಲೆ ಕೊಟ್ಟಿರುವ ಚಿತ್ರ ನೋಡಿ. ಇದೇನು ಗೊತ್ತೆ? ಈ ಬಿಳಿ ಗೀರುಗಳು ಒಂದು ಸೂಕ್ಷ್ಮವಾದ ಕೀಟದ ಇರುವಿಕೆಯನ್ನು ಖಚಿತಪಡಿಸುತ್ತವೆ.

ಈ ಕೀಟದ ಹೆಸರು 'ಅಮೆರಿಕನ್ ಸರ್ಪೆಂಟೈನ್ ಲೀಫ್ ಮೈನರ್'. ಅಂದರೆ ಎಲೆಗಳ ಮೇಲೆ ಸರ್ಪಛಾಯೆಗಳನ್ನು ಮೂಡಿಸುವ ಎಲೆ ಸುರಂಗ ಕೊರೆಯುವ ಕೀಟ. ಈ ಕೀಟದ ವೈಜ್ಞಾನಿಕ ಹೆಸರು 'ಲಿರಿಯೊ ಮೈಝಾ ಟ್ರೈಫೋಲಿ' ಎಂದು. ನೊಣದ ವರ್ಗಕ್ಕೆ ಸೇರಿದ ಈ ಸೂಕ್ಷ್ಮ ಕೀಟವು ಭಾರತಕ್ಕೆ ಬಂದು ಬಹಳ ದಿನಗಳೇನೂ ಆಗಿಲ್ಲ. ಮೊನ್ನೆ ಮೊನ್ನೆ ೧೯೯೦ರ ಸುಮಾರಿಗೆ ಪಶ್ಚಿಮ ರಾಷ್ಟ್ರವೊಂದರಿಂದ ಭಾರತಕ್ಕೆ ಯಾವುದೇ ತೊಂದರೆ ಇಲ್ಲದೆ ಬಂದಿಳಿಯಿತು. (ಬಹುಶಃ ಸೇವಂತಿಗೆ ಜಾತಿಗೆ ಸೇರಿದ ಸಸ್ಯವೊಂದರ ಆಮದಿನಿಂದ ಬಂದಿರಬಹುದು.)

ಸರಿ, ಹೊಸ ಪರಿಸರದಲ್ಲಿ ಇದು ಅಲಸಂದೆ, ಹೆಸರು, ಅವರೆ, ಕುಂಬಳ, ಹೀರೆ, ಸವತೆ, ಹತ್ತಿ ಸೂರ್ಯಪಾನ ಮುಂತಾದ ಅಗಲವಾದ ಎಲೆಗಳುಳ್ಳ ಪೈರುಗಳ ಮೇಲೆ ಸರ್ಪಛಾಯೆಯನ್ನು ಮೂಡಿಸುತ್ತ ಲಂಗುಲಗಾಮಿಲ್ಲದೆ ಅಭಿವೃದ್ಧಿ ಹೊಂದತೊಡಗಿತು. ೧೯೯೨ರಲ್ಲಿ ಹೈಬ್ರಿಡ್ ಹತ್ತಿ ಬೆಳೆಯ ಮೇಲೆ ಈ ಕೀಟದ ಹಾವಳಿ ವಿಪರೀತವಾಗಿ ಕಂಡು ಬಂದುದರಿಂದ ರೈತರು ಭಯಭೀತರಾದರು. ಸರ್ಪರಾಜ ಯಾವುದೋ ಕಾರಣದಿಂದ ಸಿಟ್ಟಿಗೆದ್ದು ಪೈರುಗಳಿಗೆ ತೊಂದರೆ ಕೊಡುತ್ತಿದ್ದಾನೆಂದು ಎರಡೆರಡು ಸಲ ನಾಗರಪಂಚಮಿ ಆಚರಿಸಿದರು. (ಈ ಹಬ್ಬದ ಆಸುಪಾಸಿನಲ್ಲಿ ಪೈರುಗಳು ಆಗ ತಾನೇ ಬೆಳೆಯುವ ಹಂತದಲ್ಲಿರುತ್ತವೆ.) ಅಲ್ಲದೆ ಪೈರುಗಳ ಮೇಲೆ ಕೆಲ ಮುಗ್ಧ ರೈತರು ಹಾಲೆರೆದದ್ದೂ ಇದೆ. ಕಳೆದ ಎರಡು ವರ್ಷಗಳಿಂದ ಈ ಕೀಟ ಮೆಂತ್ಯ ಸೊಪ್ಪನ್ನು ಆವರಿಸಿಕೊಂಡಿದೆ.

ಪ್ರೌಢ ಕೀಟವು ಒಂದು ಸೂಕ್ಷ್ಮ ನೊಣವಾಗಿದ್ದು ನಮ್ಮ ಕಣ್ಣುಗಳಿಗೆ ಬೇಸಿಗೆಯಲ್ಲಿ ತೊಂದರೆ ಕೊಡುವ ನೊರಜಿಗಿಂತ (Eyefly) ಚಿಕ್ಕದಾಗಿರುತ್ತದೆ. ಕೆಂಡದಂತೆ ಕೆಂಪಾಗಿರುವ ಕಣ್ಣುಗಳಿರುವ ಈ ಕೀಟದ ಮೈಬಣ್ಣ ಕಪ್ಪು. ಕೇವಲ ಎರಡರಿಂದ ನಾಲ್ಕು ವಾರಗಳವರೆಗೆ ಬದುಕುವ ಈ ನೊಣವು ಎಲೆಗಳ ಪದರಿನಲ್ಲಿ ಸುಮಾರು ೨೫೦ರಷ್ಟು ಮೊಟ್ಟೆಗಳನ್ನಿಡುವದು. ಕೆಂಪು ಬಣ್ಣದ ಕೀಟಗಳು ಈ ಮೊಟ್ಟೆಗಳಿಂದ ಹೊರಬಂದು ಎಲೆಗಳಲ್ಲಿ ಸುರಂಗ ಕೊರೆಯುತ್ತ ಹಸಿರನ್ನು ಮೇಯುತ್ತ ಅಡ್ಡಾದಿಡ್ಡಿ ಸರ್ಪಛಾಯೆಗಳನ್ನು ಮೂಡಿಸುವವು. ಕೊನೆಗೆ ಬಿಳಿಯ ಗೀರಿನ ತುದಿಯಲ್ಲಿ ಪ್ರಶಸ್ತವಾದ ಜಾಗೆಯನ್ನು ಮಾಡಿಕೊಂಡು ಕೋಶಾವಸ್ಥೆಯನ್ನು ತಲುಪುತ್ತವೆ. ನಾಲ್ಕೈದು ದಿನಗಳ ನಂತರ ಪ್ರೌಢ

**ಈಗ ಐದು ವರ್ಷಗಳಿಂದ ಇದಕ್ಕೊಂದು ವಿಚಿತ್ರ ರೋಗವು ತಗಲಿಕೊಂಡಿದೆ.**

ಕೀಟವು ಕೋಶದಿಂದ ಹೊರಬರುವುದು. ಬಿಳಿಗೀರಿನ ಕೊನೆಗಿರುವ ಈ ವಿಸ್ತಾರವಾದ ಜಾಗೆಯು ಹಾವಿನ ಹೆಡೆಯ ಆಕಾರದಲ್ಲಿರುವುದರಿಂದಲೆ 'ಸರ್ಪೆಂಟೈನ್ ಲೀಫ್ ಮೈನರ್' ಎಂಬ ಅನ್ವರ್ಥಕ ಹೆಸರು. ಕೀಟ ಮಾಡಿದ ಈ ಸುರಂಗಗಳನ್ನು ಸೀಳಿ ಸೂಕ್ಷ್ಮದರ್ಶಕದಲ್ಲಿ ನೋಡಿದಾಗ ನೊಣದ ಕೀಡಾವಸ್ಥೆಗಳು, ಅವು ಹಾಕಿದ ಹಿಕ್ಕೆಗಳು, ಕಳಚಿದ ಪೊರೆಗಳು ಮತ್ತು ಕೋಶಗಳು ಕಂಡು ಬರುವವು.

ಸದ್ಯಕ್ಕೆ ಈ ಕೀಟದ ಬಾಧೆ ಮೆಂತ್ಯದ ಸೊಪ್ಪಿನ ಕೆಳಗಿನ ಎಲೆಗಳಿಗೆ ಮಾತ್ರ ಸೀಮಿತವಾಗಿದೆ. ಇಂತಹ ಎಲೆಗಳನ್ನು ಸೊಪ್ಪನ್ನು ಆರಿಸುವಾಗ ತೆಗೆದು ಎಸೆಯಬಹುದು. ಮೆಂತ್ಯದ ಗಿಡವೊಂದರಲ್ಲಿ ಸರಾಸರಿ ಶೇಕಡಾ ೨೮ರಷ್ಟು ಎಲೆಗಳು ಈ ಕೀಟದ ಬಾಧೆಗೆ ಒಳಪಟ್ಟಿರುವುದು ಕಂಡುಬಂದಿದೆ. ಇತರೇ ಸೊಪ್ಪಿನ ಪಲ್ಯಗಳಾದ ರಾಜಗಿರಿ, ಕಿರಕಸಾಲಿ, ಸಬ್ಬಸಿಗೆ ಮತ್ತು ಮೂಲಂಗಿ ಸೊಪ್ಪುಗಳೆಡೆಗೆ ಸದ್ಯ ಈ ಕೀಟಗಳು ಲಕ್ಷ್ಯ ಹರಿಸಿಲ್ಲ.

ಹತ್ತಿಯ ಪೈರಿನ ನಡುವೆ ಅಲ್ಲಲ್ಲಿ ಚೆಂಡು ಹೂವಿನ (Mari gold) ಗಿಡಗಳನ್ನು ನೆಟ್ಟಾಗ ಈ ಕೀಟವು ಕೇವಲ ಚೆಂಡು ಹೂವಿನ ಎಲೆಗಳ ಮೇಲೆ ಮಾತ್ರ ಕಂಡುಬಂದು ಹತ್ತಿ ಎಲೆಗಳು ರೋಗ ಮುಕ್ತವಾಗಿರುವುದು ಕಂಡುಬಂದಿದೆ. ಮೆಂತ್ಯದ ಸೊಪ್ಪನ್ನು ಈ ಕೀಟದ ಆಕ್ರಮಣದಿಂದ ಮುಕ್ತಗೊಳಿಸುವುದು (Trap cropping) ಸಾಧ್ಯವೆ ? ಎಂಬುದನ್ನು ಇನ್ನೂ ಸಂಶೋಧಿಸಬೇಕಾಗಿದೆ.

ಸಂಶೋಧನೆ ಫಲಪ್ರದವಾದಲ್ಲಿ ಪೇಟೆಯಲ್ಲಿ ಸೊಪ್ಪಿನಾಕೆ, "ಮೆಂತ್ಯೇಕ್ಕ ಲಿರಿಯೋಮೈಝಾ ಬಿದ್ದಿಲ್ರೀ ಸಾಹೇಬ್ರSS" ಎಂದು ಹೇಳುವ ಸಮಯವೂ ಬರಬಹುದು.



# ನೀವೆಷ್ಟು ಆತ್ಮವಿಶ್ವಾಸಿಗಳು?

• ಟಿ.ಬಿ. ಗುರುನಂಜಯ್ಯ






ನಿಮ್ಮನ್ನು ನೀವೇ
ನೋಡಿಕೊಳ್ಳಿ

ನಿಮ್ಮ 'ಆತ್ಮವಿಶ್ವಾಸ'ದ ಮಟ್ಟವೇನೆಂದು ಅರಿಯಲು ಇಚ್ಛಿಸುವಿರಾ?

ಹಾಗಿದ್ದಲ್ಲಿ ಮುಂದಿನ ಪುಟಗಳಲ್ಲಿ ಕೊಟ್ಟಿರುವ ಒಗಟಿನ ಪ್ರಶ್ನಾವಳಿಯನ್ನು ಒಮ್ಮೆ ಓದಿ.

ದೈನಂದಿನ ವ್ಯವಹಾರಗಳಲ್ಲಿ ಬರುವ ಸಂದರ್ಭಗಳನ್ನು ನೀವು ಯಾವ ರೀತಿ ನಿಭಾಯಿಸಬಹುದೆಂಬುದಕ್ಕೆ ನಾಲ್ಕು ವಿಧವಾದ ಉತ್ತರಗಳನ್ನು ಅಲ್ಲಿ ಸೂಚಿಸಲಾಗಿದೆ.

ನೀವು ಮಾಡಬೇಕಾದ್ದಿಷ್ಟೆ:

ಪ್ರತಿಯೊಂದು ಗುಂಪಿನ ಸೂಚಿತ ನಾಲ್ಕು ಉತ್ತರಗಳಲ್ಲಿ ಯಾವುದಾದರೂ ಒಂದನ್ನು ಆರಿಸಿ, ಉತ್ತರದ ಸಂಖ್ಯೆಯ ಚೌಕದಲ್ಲಿ (✓) ಈ ರೀತಿಯಾಗಿ ಗುರುತು ಮಾಡಿ

ಲೇಖನದ ಕೊನೆಯಲ್ಲಿ ಅವುಗಳಿಗೆ ಪ್ರತ್ಯೇಕವಾಗಿ ಮೌಲ್ಯದ ಅಂಕಿಗಳನ್ನು ನೀಡಲಾಗಿದೆ.

ಕೊಟ್ಟಿರುವ ಹತ್ತು ಸಮಸ್ಯೆಗಳ ಉತ್ತರಗಳಿಗೆ ಅಂತಿಮವಾಗಿ ನೀವು ಗಳಿಸಿದ ಮೊತ್ತವನ್ನು ಕಂಡುಕೊಂಡು, ನಿಮ್ಮ 'ಆತ್ಮವಿಶ್ವಾಸದ ಮಟ್ಟ'ವನ್ನು ನಿರ್ಧರಿಸಿಕೊಳ್ಳಿ.

ಒಂದು ವೇಳೆ ಆ ಮಟ್ಟ ಕಡಿಮೆ ಇದ್ದಲ್ಲಿ, ಮುಂದೆ ಅದನ್ನು ಸರಿಪಡಿಸಿಕೊಂಡು ಬದುಕಲು ಕಲಿಯುವುದು ಅಂತಹ ಕಷ್ಟದ ಕೆಲಸವೇನಲ್ಲ.

ನೀವೆಷ್ಟು ಪ್ರತ್ಯುತ್ಪನ್ನಮತಿಗಳು?

**೧. ಅಪ್ರಿಯ ಕಾರ್ಯವೊಂದನ್ನು ನಿರ್ವಹಿಸಬೇಕಾದ ಸಂದರ್ಭ ಬಂದಲ್ಲಿ, ನೀವು-.**

✓ಅ. ಆ ಕಾರ್ಯವನ್ನು ಸ್ವತಃ ನೀವೇ ನಿರ್ವಹಿಸಲು ಇಚ್ಛಿಪಡುತ್ತೀರಾ ?

ಆ. ಆ ಕಾರ್ಯವನ್ನು ನಿಮ್ಮಿಂದ ದೂರವಿರಿಸಿ ತಪ್ಪಿಸಿಕೊಳ್ಳಲು ಯತ್ನಿಸುವಿರಾ ?

ಇ. ಆ ಕೆಲಸವನ್ನು ಬೇರೊಬ್ಬ ವ್ಯಕ್ತಿಯಿಂದ ಏಕೆ ಮಾಡಿಸಬಾರದೆಂದು ಯೋಚಿಸುವಿರಾ ?

ಈ. ಆ ಕಾರ್ಯವನ್ನು ಬೇರೆಯವರೇ ಮಾಡಲಿ ಎಂಬ ಖಚಿತ ಅಭಿಪ್ರಾಯ ತಳೆಯುತ್ತೀರಾ ?

**೨. ನಿಮ್ಮನ್ನು ಇತರರು ಟೀಕಿಸುತ್ತಿದ್ದರೆ ನೀವು-**

✓ಅ. ಬೇಸರಪಟ್ಟುಕೊಳ್ಳುವಿರಾ ?

ಆ. ಟೀಕೆ ತಪ್ಪೆಂದು, ಟೀಕಿಸಿದವರಿಗೆ ಮನವರಿಕೆ ಮಾಡುವ ಪ್ರಯತ್ನ ಮಾಡುವಿರಾ ?

ಇ. ಇಂತಹ ಟೀಕೆಗಳಿಂದ ಪಾಠ ಕಲಿಯುವಿರಾ ?

ಈ. ನಿಮ್ಮ ಮೂರ್ಖತನಕ್ಕಾಗಿ ಸಂತಾಪಪಡುವಿರಾ ?

**೩. ಈಗ ನಿಮಗೆ ಸಿಗುತ್ತಿರುವ ಸಂಬಳ 'ಕಡಿಮೆ' ಎನಿಸಿದ್ದರೆ, ನೀವು-**

ಅ. ನಿಮ್ಮ ಮಾಲಿಕರನ್ನು ಸಂಬಳ ಜಾಸ್ತಿ ಮಾಡಿರಿ ಎಂದು ನೇರವಾಗಿ ಕೇಳುವಿರಾ ?

✓ಆ. ಈ ಬಗ್ಗೆ ಮೌನವಾಗಿರಲು ಇಚ್ಛಿಸುವಿರಾ ?

ಇ. ಸಮಯ ಕಾದು ಮಾಲಿಕರ ಮೇಲೆ ಯಾವ ರೀತಿಯಲ್ಲಾದರೂ ಅದನ್ನು ಬಿಂಬಿಸಲು ಇಚ್ಛಿಸುತ್ತೀರಾ ?

ಈ. ಸಂಬಳ ಕಡಿಮೆ ಎಂದು ನಿಮ್ಮಷ್ಟಕ್ಕೆ ನೀವೇ ಕೊರಗುವಿರಾ ?

**೪. ನೀವಿತ್ತ ಯಾವುದಾದರೂ ಸಲಹೆ, ಸೂಚನೆಯನ್ನು ಇತರರು ಸ್ವೀಕರಿಸದಿದ್ದಲ್ಲಿ, ಆಗ ನೀವು-**

ಅ. ಅವರು ನಿಮ್ಮ ಸಲಹೆಯನ್ನು ಏಕೆ ಒಪ್ಪಿಕೊಳ್ಳಲು ಆಸಕ್ತಿ ತೋರಿಸಲಿಲ್ಲ ಎಂಬುದರ ಕಾರಣ ಕಂಡುಕೊಳ್ಳಲು ಯತ್ನಿಸುವಿರಾ ?

ಆ. ನಿಮಗೆ ಬೇಸರವಾಗುವುದೆ ?

ಇ. ಆ ಸಲಹೆಯನ್ನು ಮತ್ತೊಮ್ಮೆ ಸೂಕ್ತ ರೀತಿಯಲ್ಲಿ ತಿಳಿಸಲು ಪ್ರಯತ್ನಿಸುವಿರಾ ?

✓ಈ. ಸಲಹೆಯನ್ನು ಒಪ್ಪುವ ಅಥವಾ ತಿರಸ್ಕರಿಸುವ ತೀರ್ಮಾನವನ್ನು ಅವರಿಗೆ ಬಿಡುತ್ತೀರಾ ?

**೫. ನಿಮಗೆ ಯಾವುದೇ ವ್ಯಕ್ತಿ ನಿಮ್ಮ ಮನಸ್ಸಿಗೆ ಕಿರಿಕಿರಿ ಎಂದು ಕಂಡುಬಂದಲ್ಲಿ, ಆಗ ನೀವು-**

✓ಅ. ನಿಮ್ಮದೇ ಧಾಟಿಯಲ್ಲಿ ಆ ವ್ಯಕ್ತಿಗೆ ಪ್ರತ್ಯುತ್ತರನೀಡಲು ಇಚ್ಛಿಸುತ್ತೀರಾ ?

ಆ. ಅಂತಹ ವ್ಯಕ್ತಿಯಿಂದ ದೂರವಿರಲು ಇಚ್ಛಿಸುತ್ತೀರಾ ?

ಇ. ಅದರಿಂದ ನಿಮ್ಮ ಮನಸ್ಸಿಗೆ ಬೇಸರವಾಗುತ್ತದೆಯೇ ?

ಈ. ಆ ವ್ಯಕ್ತಿಯನ್ನು ಕಂಡು ಚರ್ಚಿಸಿ ಕಾರಣವನ್ನು ತಿಳಿದುಕೊಳ್ಳಲು ಯತ್ನಿಸುವಿರಾ ?

**೬. ನಿಮಗೆ ಅರ್ಥವಾಗದಂತಹ ಕತೆಯೊಂದನ್ನು ಯಾರಾದರೂ ಹೇಳಿದರೆ, ಆಗ ನೀವು-**

ಅ. ಕತೆಯ ಬಗ್ಗೆ ಅವಹೇಳನ ಮಾಡುತ್ತಿರುವವರ ಗುಂಪಿನಲ್ಲಿ ಸೇರಿ ಅವರ ಸಂಗಡ ನೀವೂ ನಗುತ್ತೀರಾ ?

ಆ. ಅದೊಂದು ಕೆಟ್ಟ ಜೋಕೆಂದು ಅವನಿಗೆ ತಿಳಿಸುವಿರಾ ?

ಇ. ನಿಮಗೆ ಕತೆ ಅರ್ಥವಾಗಲಿಲ್ಲ ಎಂದು ಅವನಿಗೆ ನೇರವಾಗಿ ಹೇಳುವಿರಾ ?

ಈ. ಕತೆಯನ್ನು ಕೇಳಿ ಮೂರ್ಖನಾದೆನೆಂದು ಪರಿತಪಿಸುವಿರಾ ?

**೭. ನೀವು ಮಾಡಿದ ಯಾವುದೋ ಒಂದು ತಪ್ಪನ್ನು ಬೇರೆಯವರು ಎತ್ತಿ ತೋರಿಸಿದಲ್ಲಿ, ಆಗ ನೀವು-**

ಅ. ಅದನ್ನು ಅಲ್ಲಗಳೆದು, ನಿಮ್ಮನ್ನು ಸಮರ್ಥಿಸಿಕೊಂಡು, ತಪ್ಪೇ ಮಾಡಿಲ್ಲ ಎನ್ನುವಿರಾ ?

ಆ. ಅಪರಾಧಿ ಮನೋಭಾವದಿಂದ ನರಳುತ್ತೀರಾ ?

ಇ. ತಪ್ಪು ಮಾಡುವುದು ಮಾನವನ ಸ್ವಭಾವವೆಂದು ಸಮಾಧಾನಪಟ್ಟುಕೊಳ್ಳುವಿರಾ ?

ಈ. ಹಾಗೆ ಹೇಳಿದ ವ್ಯಕ್ತಿಯ ಬಗ್ಗೆ ತಿರಸ್ಕಾರ ಭಾವನೆ ತಳೆಯುವಿರಾ ?

**೮. ನಿಮ್ಮ ನೆಚ್ಚಿನ ಸ್ನೇಹಿತನೋರ್ವ ಯಾವುದೋ ಒಂದು ತಪ್ಪೆಸಗಿದಾದ್ದಲ್ಲಿ, ಆಗ ನೀವು-**

ಅ. ನೀನು ಮಾಡಿದ್ದು ತಪ್ಪೆಂದು ನೇರವಾಗಿ ನಿಮ್ಮ ಸ್ನೇಹಿತನಿಗೆ ಹೇಳುವಿರಾ ?

ಆ. ಆ ಬಗ್ಗೆ ಏನೂ ಹೇಳದಿರಲು ಇಚ್ಛಿಸುತ್ತೀರಾ ?

ಇ. ನಿಮ್ಮ ಸ್ನೇಹಿತನಿಗೆ ಸಹಕಾರಿಯಾಗಿ ನಿಂತು ಮುಂದೆ ಚೆನ್ನಾಗಿ ಕಾರ್ಯ ನಿರ್ವಹಿಸಲು ಸಹಾಯ ಮಾಡುವಿರಾ ?

ಈ. ಆ ಸ್ನೇಹಿತನನ್ನು ದೂರ ಮಾಡುವಿರಾ ?

**೯. ನಿಮ್ಮ ಹಿರಿಯ ಅಧಿಕಾರಿಯ ಹತ್ತಿರ ಮಾತನಾಡುವಾಗ, ನೀವು-**

ಅ. ಆ ವ್ಯಕ್ತಿಯ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ ಮಾತನಾಡುತ್ತೀರಾ ?

ಆ. ಆಗ ನಿಮಗೆ ಕಸಿವಿಸಿ ಅಥವಾ ಕಿರಿಕಿರಿ ಎನಿಸುವುದೆ ?

ಇ. ಆಗ ನೀವು ನರ್ವಸ್ ಆಗುತ್ತೀರಾ ?

ಈ. ಅವರ ಸಾಂಗತ್ಯ ಅಥವಾ ಸಾಮೀಪ್ಯ ನಿಮಗೆ ಸಂತಸ ತರುವುದೆ ?

**೧೦. ನಿಮ್ಮ ಪರಿಚಯದ ವ್ಯಕ್ತಿಯೋರ್ವ ನಿಮ್ಮಿಂದ ಏನಾದರೂ ಸಹಾಯ ಬೇಡಿದಲ್ಲಿ, ಆಗ ನೀವು-**

ಅ. ಕೆಲವೊಮ್ಮೆ ಸಹಾಯ ಮಾಡಲು ಮತ್ತು ಕೆಲವೊಮ್ಮೆ ಸಹಾಯ ಮಾಡದಿರುವ ಇಚ್ಛೆಯುಳ್ಳವರಾಗಿರುತ್ತೀರಾ ?

ಆ. ಸಹಾಯ ಮಾಡದಿದ್ದಾಗ, ನಿಮ್ಮ ಆತ್ಮಸಾಕ್ಷಿ ಚುಚ್ಚುವುದೆ ?

ಇ. ಪ್ರತಿಫಲಾಪೇಕ್ಷಿಗಳಾಗಿ ಆತನಿಂದ ಮರುಸಹಾಯದ ನಿಬಂಧನೆ ಅಥವಾ ಕರಾರು ಹಾಕುತ್ತೀರಾ ?

ಈ. ನಿರಪೇಕ್ಷೆಯಿಂದ ಆತನಿಗೆ ನೆರವು ನೀಡಲು ಇಚ್ಛಿಸುವಿರಾ ?

# ‘ಆತ್ಮವಿಶ್ವಾಸ’ ಮಟ್ಟದ ಮಾಪನ

| | ಅ | ಆ | ಇ | ಈ |
|---|---|---|---|---|
| ೧. | ೧೦ | ೦ | ೫ | ೫ |
| ೨. | ೫ | ೦ | ೧೦ | ೦ |
| ೩. | ೧೦ | ೦ | ೦ | ೦ |
| ೪. | ೧೦ | ೦ | ೦ | ೦ |
| ೫. | ೦ | ೦ | ೦ | ೧೦ |
| ೬. | ೦ | ೦ | ೧೦ | ೦ |
| ೭. | ೦ | ೦ | ೧೦ | ೦ |
| ೮. | ೦ | ೦ | ೧೦ | ೦ |
| ೯. | ೦ | ೦ | ೦ | ೧೦ |
| ೧೦. | ೦ | ೦ | ೦ | ೦ |

**ನೀವು ನಿಮ್ಮ ಹತ್ತು ಉತ್ತರಗಳಿಂದ ೭೫ರಿಂದ ೧೦೦ ಅಂಕ ಗಳಿಸಿದ್ದಾದರೆ–**

ನೀವು ಮಾಡುವ ಎಲ್ಲ ಕಾರ್ಯಗಳಲ್ಲಿ ಆತ್ಮವಿಶ್ವಾಸ ತುಂಬಿತುಳುಕಿದೆ ಎಂದರ್ಥ. ಆದರೆ, ನಿಮ್ಮ ಮನೋಸ್ಥೈರ್ಯ, ಅಹಂಕಾರದಿಂದ ಕೂಡಿದೆ ಎಂದು ಭಾವಿಸಬೇಕಿಲ್ಲ. ನಿಮ್ಮ ಆತ್ಮವಿಶ್ವಾಸದ ಸಾಮರ್ಥ್ಯ ಸ್ವಾಭಾವಿಕವಾಗಿ ಬೆಳೆದು ಬಂದಿದೆ ಎಂದು ತಿಳಿಯಿರಿ. ನಿಮ್ಮನ್ನು ಎಲ್ಲರೂ ಗೌರವಿಸುತ್ತಾರೆ.

**೫೦ರಿಂದ ೭೫ ಮಾತ್ರ ಗಳಿಸಿದ್ದಲ್ಲಿ–**

ನೀವು ಸ್ವಾಭಾವಿಕವಾಗಿ ಮನೋಸ್ಥೈರ್ಯ ಉಳ್ಳವರು, ನಿಜ. ಆದರೆ, ಕೆಲವು ಸಂದರ್ಭಗಳಲ್ಲಿ ನಿಮ್ಮ ಆತ್ಮವಿಶ್ವಾಸದ ಬಗ್ಗೆ ನಿಮಗೇ ಆ ಕ್ಷಣದಲ್ಲಿ ಅನುಮಾನದ ಅನುಭವ ಉಂಟಾಗಬಹುದು.

**೨೪ರಿಂದ ೪೯ ಅಂಕ ಗಳಿಸಿದ್ದಾದಲ್ಲಿ–**

ಅನೇಕ ಸಂದರ್ಭಗಳಲ್ಲಿ ನಿಮಗೆ ಆತ್ಮವಿಶ್ವಾಸದ ಕೊರತೆ ಇರುವುದು ಖಂಡಿತ ನಿಜ. ಆದರೆ, ಸಾಧಾರಣವಾಗಿ ಕೆಲವು ಸಲ ಮನೋಸ್ಥೈರ್ಯ ತೋರಿ ನಿಭಾಯಿಸುತ್ತೀರಿ.

**೦–೨೪ ಅಂಕ ಗಳಿಸಿದಲ್ಲಿ–**

ನಿಮ್ಮ ಆತ್ಮವಿಶ್ವಾಸ ತೀರ ಕೆಳಮಟ್ಟದಲ್ಲಿದೆ ಎಂದು ತಿಳಿದು ಸುಧಾರಿಸಿಕೊಳ್ಳಲು ಯತ್ನಿಸಿ.

●



# 'ದುರ್ಗಂಧ ಶ್ವಾಸ'ಕ್ಕೆ ವಿದಾಯು ?

● ಶಂಸ ಐತಾಳ

ಎಲ್ಲರನ್ನೂ ಒಂದಲ್ಲ ಒಂದು ಸಮಯ ಕಾಡುವ ಪೀಡೆಯೇ 'ದುರ್ಗಂಧ ಶ್ವಾಸ' ಅಥವಾ 'ಹ್ಯಾಲಿಟೋಸಿಸ್.' ಇದಕ್ಕೆ ಕಾರಣಗಳೂ ಅನೇಕ: ಮದ್ಯಪಾನ, ತಂಬಾಕುಸೇವನೆ, ಧೂಮಪಾನ, ಕೃತಕ ದಂತ ಶ್ರೇಣಿಗಳ ಅಳವಡಿಕೆ, ಬಾಯಿಯೊಳಗೆ ಬ್ಯಾಕ್ಟೀರಿಯಾಗಳ ಬೆಳವಣಿಗೆ ಇತ್ಯಾದಿ. ಆದರೆ ದುರ್ಗಂಧ ಶ್ವಾಸಕ್ಕೆ ಇವಲ್ಲದೆ ಇತರ ಕೆಲವು ಆಶ್ಚರ್ಯಕರವಾದ ಕಾರಣಗಳೂ ಇಲ್ಲದೆ ಇಲ್ಲ.

ಮೊನ್ನೆ ಮೊನ್ನೆಯವರೆಗೂ ದುರ್ಗಂಧ ಶ್ವಾಸಕ್ಕೆ ಬಾಯಿಯ ಅನೈರ್ಮಲ್ಯವೇ ಕಾರಣ ಎಂದು ಅನೇಕ ವೈದ್ಯರು ಭಾವಿಸಿದ್ದರು. ಆದರೆ ಇತ್ತೀಚೆಗೆ ಬೇರೆ ಬೇರೆ ಕಾರಣಗಳೂ ತಿಳಿದುಬಂದಿವೆ. ಹಾಗೂ ಇದರ ನಿವಾರಣೆಗೆ ವೈದ್ಯರು ಕೂಡ ಹೊಸ ಹೊಸ ಪರಿಹಾರಮಾರ್ಗಗಳನ್ನು ಕಂಡುಹುಡುಕುತ್ತಿದ್ದಾರೆ.

ಲಾಲಾರಸದ ಪ್ರವಾಹ ನಿಧಾನಗೊಂಡಾಗ, ದುರ್ಗಂಧಶ್ವಾಸ ಉಂಟಾಗುವುದು ಸಾಮಾನ್ಯ. ನಮ್ಮ ಬಾಯಿಯೊಳಗೆ ನಾವು ಸೇವಿಸುವ ಆಹಾರದ ತುಣುಕುಗಳಿಂದ ಪೋಷಣೆ ಪಡೆಯುವ ಬ್ಯಾಕ್ಟೀರಿಯಗಳು ತುಂಬಿರುತ್ತವೆ. ಇವು 'ಹೈಡ್ರೋಜನ್ ಸಲ್ಫೈಡ್' ಮತ್ತು 'ಮಿಥಿಲ್ ಮರ್ಕಾಪ್ಟನ್' ಎಂಬೆರಡು ಅನಿಲಗಳನ್ನು ವಿಸರ್ಜಿಸುತ್ತವೆ. ಹೈಡ್ರೋಜನ್‌ಸಲ್ಫೈಡ್ ಕೊಳೆತ ಮೊಟ್ಟೆಗಳ ವಾಸನೆಯನ್ನೂ ಮಿಥಿಲ್ ಮರ್ಕಾಪ್ಟನ್ ಕೊಳಚೆಪ್ರದೇಶಗಳ ದುರ್ವಾಸನೆಯನ್ನೂ ಹೊಂದಿರುವುದರಿಂದ ಬಾಯಿಯಲ್ಲಿ ಬ್ಯಾಕ್ಟೀರಿಯಾಗಳ ಸಂತತಿ ವೃದ್ಧಿಯಾದಂತೆಲ್ಲ ದುರ್ಗಂಧ ಶ್ವಾಸದ ಪೀಡೆ ಉಲ್ಬಣಗೂ

---

**ಆಧಾರ: 'ರೀಡರ್ಸ್‌ಡೈಜೆಸ್ಟ್' ೧೯೯೪ರ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾದ ಮೇರಿ ಮುರ್ರೆ ಅವರ ಲೇಖನ.**

ಳ್ಳುತ್ತದೆ.

ಬ್ಯಾಕ್ಟೀರಿಯಗಳು ವರ್ಧಿಸುವುದು ನಿರ್ವಾತ ಪ್ರದೇಶಗಳಲ್ಲಿ. ಬಾಯಿಯೊಳಗಿನ ಆಕ್ಸಿಜನ್ ಸಮೃದ್ಧ ಲಾಲಾರಸ ಬ್ಯಾಕ್ಟೀರಿಯಾಗಳು ಅಲ್ಪ ಸಂಖ್ಯೆಯಲ್ಲಿರುವಂತೆ ನಿಗಾವಹಿಸುತ್ತಿರುತ್ತವೆ. ಆದರೆ ನಾವು ನಿದ್ರಿಸಿದಾಗ, ಲಾಲಾರಸದ ಪ್ರವಾಹ ಸಹಜವಾಗಿ ನಿಧಾನಗೊಳ್ಳುತ್ತದೆ; ತತ್ಪರಿಣಾಮವಾಗಿ ಸಲ್ಫರ್-ಉತ್ಪಾದಕ ಬ್ಯಾಕ್ಟೀರಿಯಗಳ ಸಂಖ್ಯೆ ಅಧಿಕವಾಗಿ, ಅವುಗಳದೇ ಮೇಲುಗೈ ಆಗಿ, ಬೆಳಿಗ್ಗೆ ಏಳುವಾಗ ನಮ್ಮ ಬಾಯಿಯಿಂದ ಗಬ್ಬುನಾತ ಹೊಡೆಯುತ್ತದೆ.

ಕುಡಿತ, ಹಸಿವಿನ ತೀವ್ರತೆ, ಅತಿ ಮಾತನಾಡುವುದು, ಉಸಿರು ಕಟ್ಟಿಕೊಂಡ (ನೆಗಡಿ ಪೀಡಿತ) ಮೂಗು, ವ್ಯಾಯಾಮದ ಅಥವಾ ಶ್ರಮದಾಯಕ ಕೆಲಸದ ಕಾಲದಲ್ಲಿ ಬಾಯಿಯಿಂದ ಉಸಿರಾಡುವುದು- ಹೀಗೆ ಬಾಯಿಯ ತೇವವನ್ನು ಒಣಗಿಸುವ ಯಾವುದೇ ಸನ್ನಿವೇಶವೂ ದುರ್ಗಂಧ ಶ್ವಾಸಕ್ಕೆ ನಾಂದಿಯಾಗಬಹುದು.

ವ್ಯಕ್ತಿಗೆ ವಯಸ್ಸಾದಂತೆ ಲಾಲಾರಸದ ಉತ್ಪಾದನೆ ಕಡಿಮೆಯಾಗುವುದು ಸಾಮಾನ್ಯ. ಆದ್ದರಿಂದಲೇ ಕಿರಿಯರಿಗಿಂತ ಹೆಚ್ಚು ಬಾಧೆಯನ್ನು ಹಿರಿಯರು ದುರ್ಗಂಧ ಶ್ವಾಸದಿಂದ ಅನುಭವಿಸುತ್ತಾರೆ. ಸಮೃದ್ಧ ಪ್ರಮಾಣದ ಲಾಲಾರಸವನ್ನು ಉತ್ಪಾದಿಸುವ ಹಾಗೂ ಸಾಪೇಕ್ಷವಾಗಿ ಕಡಿಮೆ ಸಂಖ್ಯೆಯ ಬ್ಯಾಕ್ಟೀರಿಯಗಳಿಂದ ತುಂಬಿದ ಬಾಯಿಯಿರುವ ಕಂದಮ್ಮಗಳ ಮತ್ತು ಚಿಕ್ಕಮಕ್ಕಳ ಬಾಯಿ, ಉಸಿರುಗಳು ದುರ್ಗಂಧಯುಕ್ತವಾಗಿರುವುದಿಲ್ಲ.

ಬಾಯಿ ಒಣಗುವುದರಿಂದ ಉಂಟಾಗುವ ದುರ್ಗಂಧ ಶ್ವಾಸವನ್ನು ಸುಲಭವಾಗಿ ನಿವಾರಿಸಬಹುದು. ತಿನ್ನುವುದು ಅಥವಾ ಕುಡಿಯುವುದರಿಂದಲೇ ಲಾಲಾರಸ ಪ್ರವಹಿಸತೊಡಗಿ ಹಲವು ಬ್ಯಾಕ್ಟೀರಿಯಗಳು ನಾಶವಾಗುತ್ತವೆ. ಬೆಳಿಗ್ಗೆ ಉಪಾಹಾರ ಸೇವಿಸಿದ ಅನಂತರ ವಾಸನೆ ಕಡಿಮೆಯಾಗಲು ಇದೇ ಕಾರಣ.

ತೀವ್ರ ದುರ್ಗಂಧ ಶ್ವಾಸ ಪೀಡಿತರು ಆಗಾಗ ಮಿಠಾಯಿ ಮೊದಲಾದ ಸಿಹಿತಿಂಡಿಗಳನ್ನು ತಿನ್ನುತ್ತಿರುವುದು ಅಥವಾ ನೀರು ಇಲ್ಲವೆ ಟೀ-ಕಾಫಿ ಇತ್ಯಾದಿ ಪೇಯ ಕುಡಿಯುತ್ತಿರುವುದು ಒಳ್ಳೆಯದು. ಇವೆಲ್ಲಕ್ಕಿಂತ ಲಿಂಬೆಹಣ್ಣಿನ ಶರಬತ್ತು ಹೆಚ್ಚು ಪರಿಣಾಮಕಾರಿ ಎನ್ನುತ್ತಾರೆ ಕೆನಡಾದ ಟೊರಾಂಟೋದಲ್ಲಿರುವ 'ಫ್ರೆಷ್ ಬ್ರೆತ್ ಕ್ಲಿನಿಕ್'ನ ಸಹಸಂಸ್ಥಾಪಕರಲ್ಲೊಬ್ಬರಾದ ಆನ್ನೆ ಬಾಸಿ.

ಬ್ರಷ್‌ನಿಂದ ಆಗಾಗ ಹಲ್ಲುಜ್ಜಿಕೊಳ್ಳುವುದರಿಂದ ಹಾಗೂ ಪದೇ ಪದೇ ಬಾಯಿತೊಳೆದುಕೊಳ್ಳುತ್ತಿರುವುದರಿಂದ ಕೂಡ ಬ್ಯಾಕ್ಟೀರಿಯಗಳ ಅಭಿವೃದ್ಧಿಯನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಬಹುದು. ಆಹಾರದ ತುಣುಕುಗಳು ಹಲ್ಲುಗಳ ನಡುವೆ ಸೇರಿಕೊಂಡು ಬೆಳೆಯದಂತೆ ಎಚ್ಚರವಹಿಸಬೇಕಾದುದೂ ಅವಶ್ಯಕ. ಏಕೆಂದರೆ ಅಂಥ ತುಣುಕುಗಳು ದುಷ್ಟ ಬ್ಯಾಕ್ಟೀರಿಯಗಳಿಗೆ 'ಟಾನಿಕ್' ಇದ್ದಂತೆ.

ಮುಖಮಾರ್ಜನ ಮಾಡಿಕೊಂಡ ಸುಮಾರು ಒಂದು ಗಂಟೆಯವರೆಗೆ ಬ್ಯಾಕ್ಟೀರಿಯಗಳು ಉತ್ಪನ್ನವಾಗುವುದಿಲ್ಲ ಎಂದು ಈಚಿನ ಸರ್ವೇಕ್ಷಣೆಯೊಂದರಿಂದ ತಿಳಿದುಬಂದಿದೆ. ಈಚೆಗೆ ಮಾರುಕಟ್ಟೆಗೆ ಬಂದ ಕೆಲವು ಟೂತ್‌ಪೇಸ್ಟ್‌ಗಳೂ ದುರ್ಗಂಧಶ್ವಾಸ ನಿವಾರಣೆಗೆ ಉಪಯುಕ್ತವಾಗಿವೆ. ಆದರೆ ಬ್ರಷ್ ಬ್ಯಾಕ್ಟೀರಿಯಗಳಿರುವ ಎಲ್ಲ ಸ್ಥಳಗಳನ್ನು ತಲುಪದಿರುವುದೇ ಸಮಸ್ಯೆಯ ಸಂಗತಿ. ಏಕೆಂದರೆ ಹೆಚ್ಚಿನ ಬ್ಯಾಕ್ಟೀರಿಯಗಳು ನಾಲಿಗೆಯ ಅಥವಾ ದವಡೆಯ ಲೋಳೆಯಂತಹ ಪದರಗಳ ಕೆಳಗೆ ಅವಿತುಕೊಂಡಿರುತ್ತವೆ.

ಬೆಳ್ಳುಳ್ಳಿಯ ಸೇವನೆ ದುರ್ಗಂಧ ಶ್ವಾಸಕ್ಕೆ ಇನ್ನೊಂದು ಕಾರಣ. ಬೆಳ್ಳುಳ್ಳಿ ತಿಂದಾಗ ಹೊಟ್ಟೆಯಲ್ಲಿ ದುರ್ವಾತ ಉತ್ಪತ್ತಿಯಾಗುತ್ತದೆಂಬ ಸಾಮಾನ್ಯ ಕಲ್ಪನೆ ತಪ್ಪು. ಬದಲಾಗಿ ಬೆಳ್ಳುಳ್ಳಿ ಸೇವಿಸಿದಾಗ ಅದರಲ್ಲಿರುವ ಗಂಧಕದ ಅಂಶಗಳು ರಕ್ತಪ್ರವಾಹವನ್ನು ಸೇರಿ, ಅಲ್ಲಿಂದ ಶ್ವಾಸಕೋಶವನ್ನು ತಲುಪಿ, ನಾವು ನಿಶ್ವಾಸದ ಮೂಲಕ ಹೊರಬಿಡುವ ವಾಯು ದುರ್ಗಂಧಯುಕ್ತವಾಗುತ್ತದೆ. ಬೆಳ್ಳುಳ್ಳಿ ಹೊಟ್ಟೆಯನ್ನು ಸೇರದೆಯೂ ದುರ್ಗಂಧ ಶ್ವಾಸಕ್ಕೆ ಕಾರಣವಾಗಬಹುದೆಂದು ಅಧ್ಯಯನವೊಂದು ತೋರಿಸಿದೆ. ಹನ್ನೆರಡು ವರ್ಷ ವಯಸ್ಸಿನ ಬಾಲಕನ ಪಾದಗಳಿಗೆ ಬೆಳ್ಳುಳ್ಳಿಯನ್ನು ಉಜ್ಜಿದಾಗ ಅದರ ವಾಸನೆ ಅವನ ರೋಮಕೂಪಗಳ

ಮೂಲಕ, ಶ್ವಾಸಕೋಶಕ್ಕೆ ಪ್ರಯಾಣ ಬೆಳಸಿ ನಿಃಶ್ವಾಸಿತ ವಾಯು ದುರ್ಗಂಧಯುಕ್ತವಾಯಿತು.

ಆಹಾರ-ಪಾನೀಯಗಳಿಂದ ಸಂಭವಿಸುವ ದುರ್ಗಂಧ ಶ್ವಾಸಕ್ಕೆ ಯಾವುದೇ ಖಚಿತ ಚಿಕಿತ್ಸೆಯಿಲ್ಲ. ದುರ್ಗಂಧ ಕ್ರಮೇಣ ಕಡಿಮೆಯಾಗುವುದನ್ನು ಕಾಯುವುದೊಂದೇ ಉಳಿದ ಮಾರ್ಗ. ಪಾನೀಯಗಳನ್ನು ಹೆಚ್ಚು ಹೆಚ್ಚು ಸಲ ಕುಡಿಯುತ್ತಿರುವುದರಿಂದ ಕೆಲಮಟ್ಟಿನ ಪರಿಹಾರ ಸಿಗಬಹುದಷ್ಟೆ.

ಬೆಳ್ಳುಳ್ಳಿಯಂತಹ ಆಹಾರಗಳ ಸೇವನೆಯೇ ದುರ್ಗಂಧ ಶ್ವಾಸಕ್ಕೆ ಕಾರಣವಾಗಿದ್ದರೆ ಅಂಥ ಆಹಾರ ಪದಾರ್ಥಗಳಿಂದ ದೂರವಿರಲು ಪ್ರಯತ್ನಿಸಿ; ಅಥವಾ ಸೇವಿಸಲೇಬೇಕೆನಿಸಿದರೂ ಅವುಗಳ ಬಳಕೆಯ ಪ್ರಮಾಣವನ್ನು ಕಡಿಮೆಮಾಡಿ. ಪೆಪ್ಪರ್‌ಮಿಂಟ್ ಮೊದಲಾದ ಸಿಹಿಪದಾರ್ಥಗಳನ್ನು ಹೆಚ್ಚು ಬಳಸಿ.

'ಟ್ರೈಮಿಥೈಲಾಮಿನ್ಯುರಿಯ' ಎಂಬ ಅಪೂರ್ವ ಜೀವದ್ರವ್ಯದ ಕೊರತೆಯಿರುವ ವ್ಯಕ್ತಿಗಳು ದುರ್ಗಂಧ ಶ್ವಾಸಕ್ಕೆ ಬಹುಬೇಗ ಬಲಿಯಾಗುತ್ತಾರೆ. ಇವರ ಶ್ವಾಸ ಮೀನಿನ ವಾಸನೆ ಹೊಂದಿರುತ್ತದೆ. ಮೊಟ್ಟೆಗಳು, ಹುರುಳಿಕಾಯಿಯಂತಹ ಕೆಲವು ತರಕಾರಿಗಳು ಮತ್ತು ಕೋಲೀನ್ ಅಧಿಕಪ್ರಮಾಣದಲ್ಲಿರುವ ಯಾವುದೇ ಆಹಾರ ಸೇವನೆಯಿಂದಲೂ ಶ್ವಾಸ ಮೀನಿನ ವಾಸನೆ ಹೊಂದಬಹುದು.

ಮಾನವನ ದೊಡ್ಡ ಕರುಳಿನಲ್ಲಿ ಕೋಲೀನ್ ಅಂಶ 'ಟ್ರೈಮಿಥೈಲಾಮಿನ್' (ಟಿಎಮ್‌ಎ) ಆಗಿ ಪರಿವರ್ತನೆಗೊಳ್ಳುತ್ತದೆ. ಸಾಮಾನ್ಯವಾಗಿ ಜೀರ್ಣ

ಕಾರಕ ಕಿಣ್ವಗಳು ಟಿಎಮ್‌ಎಯನ್ನು ವಾಸನಾರಹಿತ ವಸ್ತುಗಳನ್ನಾಗಿ ಮಾಡುತ್ತವೆ. ಆದರೆ ಕೆಲವು ವ್ಯಕ್ತಿಗಳಲ್ಲಿ ಈ ನಿರ್ದಿಷ್ಟ ಕಿಣ್ವಗಳ ಕೊರತೆಯಿರುತ್ತದೆ. ಅಂಥ ವ್ಯಕ್ತಿಗಳಲ್ಲಿ ಟಿಎಮ್‌ಎಯ ಪರಿವರ್ತನೆ ನಡೆಯದೆ, ಅವರ ಶ್ವಾಸವಷ್ಟೇ ಅಲ್ಲ, ಬೆವರು-ಮೂತ್ರಗಳೂ ಮೀನಿನ ದುರ್ವಾಸನೆಯನ್ನು ಹೊರಸೂಸುತ್ತವೆ.

ಕೆಲವು ವಿಧದ ಪಥ್ಯಗಳಿಂದಲೂ ದುರ್ಗಂಧ ಶ್ವಾಸ ಉಂಟಾಗಬಹುದು. ಆದ್ದರಿಂದ ತೂಕ ಇಳಿಸಿಕೊಳ್ಳುವ ಅಥವಾ ಇತರ ಯಾವುದೇ ನಿರ್ದಿಷ್ಟ ಉದ್ದೇಶದಿಂದ ಪಥ್ಯಮಾಡುತ್ತಿರುವಾಗ ಬಾಯಿಯ ನೈರ್ಮಲ್ಯದತ್ತ ಹೆಚ್ಚು ಎಚ್ಚರಿಕೆ ವಹಿಸಿ ಹಾಗೂ ಪಾನೀಯಗಳನ್ನು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಸೇವಿಸುತ್ತಿರಿ.

ದುರ್ಗಂಧ ಶ್ವಾಸ ಸಾಮಾನ್ಯ ಪೀಡೆಯಾಗಿರುವುದರಿಂದ ಅದರ ಬಗ್ಗೆ ವ್ಯಥಾ ಚಿಂತಿಸುತ್ತ ಕುಳಿತುಕೊಳ್ಳಬೇಡಿ. ಏಕೆಂದರೆ ಇದಕ್ಕೆ ಶಾಶ್ವತವಾದ ಯಾವ ಪರಿಹಾರವೂ ಇಲ್ಲ. ಎಂತಹ ಆರೋಗ್ಯಶಾಲಿ ವ್ಯಕ್ತಿಯೇ ಆಗಿರಲಿ, ಅವನು ಯಾವಾಗಲೋ ಒಮ್ಮೆ ಇದ್ದಕ್ಕಿದ್ದಂತೆ ದುರ್ಗಂಧ ಶ್ವಾಸದ ಪೀಡೆಗೆ ಒಳಗಾಗಬಹುದು. ಆದ್ದರಿಂದ ಅದರ ಬಗ್ಗೆ ಯಾವುದೇ ಅತಿರಂಜಿತ ಕಲ್ಪನೆ ಮಾಡುವುದು ಯುಕ್ತವಲ್ಲ. ''ದುರ್ಗಂಧ ಶ್ವಾಸ ಚಿಕಿತ್ಸೆಗಾಗಿ ನನ್ನಲ್ಲಿಗೆ ಬರುವವರಲ್ಲಿ ಸುಮಾರು ಅರ್ಧದಷ್ಟು ಮಂದಿಗೆ ನಿಜವಾಗಿ ಆ ಸಮಸ್ಯೆಯಿರುವುದೇ ಇಲ್ಲ,'' ಎನ್ನುತ್ತಾರೆ ರಿಕ್ಟರ್. ಹಲವು ಸಂದರ್ಭಗಳಲ್ಲಿ ತಮ್ಮ ಬಾಯಿಯಿಂದ ವಾಸನೆ ಹೊರಹೊಮ್ಮುತ್ತಿದೆ; ಉಸಿರು ದುರ್ಗಂಧ ಸೂಸುತ್ತಿದೆ ಎಂಬ ಭ್ರಮೆಯಿಂದ ಕೂಡಿದವರೇ ಹೆಚ್ಚು ಸಮಸ್ಯೆಗೆ ಕಾರಣವಾಗುತ್ತಾರೆ.

ದುರ್ಗಂಧ ಶ್ವಾಸ ಚಿಕಿತ್ಸೆಗೆ ಆಧುನಿಕ ವೈದ್ಯರೂ ದಂತವೈದ್ಯರೂ ಹೊಸ ಹೊಸ ವಿಧಾನಗಳನ್ನೂ ರೂಪಿಸುತ್ತಿದ್ದಾರೆ. ಮಾರ್ವಿನ್ ಕೊಹೆನ್ ಈಚೆಗೆ 'ಹ್ಯಾಲಿಟೋಸಿಸ್ ಕ್ಲಿನಿಕ್' ಒಂದನ್ನು ತೆರೆದಿದ್ದಾರೆ. ಮೊತ್ತಮೊದಲು ಅವರು ರೋಗಿಗಳಿಗೆ ಹಲ್ಲುಗಳನ್ನೂ ನಾಲಗೆಯನ್ನೂ ಸ್ವಚ್ಛಗೊಳಿಸುವ ಬಗ್ಗೆ ತಿಳಿವಳಿಕೆ ನೀಡುತ್ತಾರೆ. ಅನಂತರ, ಕಮ್ಮಿ ಪ್ರಮಾಣದ ಕ್ಲೋರಿನ್ ಡಯಾಕ್ಸೈಡ್‌ನಿಂದ ಕೂಡಿದ ದ್ರವವೊಂದನ್ನು ಅವರು ರೋಗಿಯ ಬಾಯಿಯೊಳಗೆ ಚಿಮುಕಿಸುತ್ತಾರೆ. ಹಳದಿ ಬಣ್ಣದ ಈ ದ್ರವಕ್ಕೆ ಯಾವುದೇ ರುಚಿಯಿರುವುದಿಲ್ಲ. (ಕ್ಲೋರಿನ್ ಡಯಾಕ್ಸೈಡ್‌ಯುಕ್ತವಾದ ಈ ರುಚಿರಹಿತ ದ್ರವವನ್ನು ಸಾಮಾನ್ಯವಾಗಿ ಬ್ಯಾಕ್ಟೀರಿಯಗಳನ್ನು ಕೊಲ್ಲುವ ಉದ್ದೇಶದಿಂದ ಈಜುಕೊಳಗಳಲ್ಲಿ ಬಳಸುತ್ತಾರೆ. ಜಲಮಂಡಳಿಯವರು ಕೂಡ ಕುಡಿಯುವ ನೀರಿನ ಶುದ್ಧೀಕರಣಕ್ಕಾಗಿ ಈ ದ್ರವವನ್ನು ಬಳಸುವುದುಂಟು.) ಅನಂತರ ಅವರು ಇಂಗ್ಲೀಷ್ 'ಟಿ' ಅಕ್ಷರದ ಆಕೃತಿಯ ಪ್ಲಾಸ್ಟಿಕ್ ಉಜ್ಜುಸಾಧನವೊಂದರಿಂದ ಹಲ್ಲುಜ್ಜಿಕೊಳ್ಳುವಂತೆ ರೋಗಿಗೆ ತಿಳಿಸುತ್ತಾರೆ. ಹೀಗೆ ಬ್ಯಾಕ್ಟೀರಿಯಗಳನ್ನು ನಾಶಪಡಿಸಿದ ಅನಂತರ, ಒಂದು ಪ್ಲಾಸ್ಟಿಕ್ ಉಜ್ಜುಸಾಧನ ಹಾಗೂ ಒಂದಿಷ್ಟು ಕ್ಲೋರಿನ್ ಡಯಾಕ್ಸೈಡ್‌ಯುಕ್ತ ದ್ರವದೊಂದಿಗೆ ರೋಗಿಯನ್ನು ಅವರು ಮನೆಗೆ ಕಳಿಸುತ್ತಾರೆ.

ದುರ್ಗಂಧ ಶ್ವಾಸದಿಂದ ಪ್ರಾಣಾಪಾಯವಿಲ್ಲ ನಿಜ. ಹಾಗೆಂದು ಅದನ್ನು ಕಡೆಗಣಿಸಲೂಬಾರದು. ಕೆಲವೊಮ್ಮೆ ದುರ್ಗಂಧ ಶ್ವಾಸವೇ ರೋಗಗಳಿಗೆ ಪೀಠಿಕೆಯಾಗಬಹುದು. ದುರ್ಗಂಧಶ್ವಾಸಕ್ಕೆ ಮುಖ್ಯ ಬಾಯಿ ಒಣಗುವಿಕೆ ಇತರ ಅನೇಕ ಕಾಯಿಲೆಗಳ ಸಂಕೇತವೂ ಹೌದು. ಆದ್ದರಿಂದ ಇದರ ಪೀಡೆ ತೀವ್ರವಾಗಲು ಅವಕಾಶಮಾಡಿಕೊಡಬೇಡಿ.

ದುರ್ಗಂಧ ಶ್ವಾಸವುಂಟಾಗದಂತೆ ತಡೆಯುವ ಯಾವುದೇ ಔಷಧಗಳು ಮಾರುಕಟ್ಟೆಯಲ್ಲಿ ಸಿಗುವುದಿಲ್ಲವೆಂಬುದನ್ನು ಮರೆಯಬೇಡಿ; ಖೋಟಾ ವೈದ್ಯರ ಮೋಸದ ಜಾಲಕ್ಕೆ ಬಲಿಯಾಗಬೇಡಿ.

ಕೆಲವು ಮಹಿಳೆಯರು ಮುಟ್ಟಿನ ಅವಧಿಯಲ್ಲಿ ದುರ್ಗಂಧ ಶ್ವಾಸದ ಪೀಡೆಗೆ ತುತ್ತಾಗುವುದುಂಟು. ಇದಕ್ಕೆ ಅವರಲ್ಲಿ ಉಂಟಾಗುವ ಹಾರ್ಮೋನ್‌ಗಳ ಬದಲಾವಣೆಯೇ ಕಾರಣ. ಇದು ಅಸಹಜವೇನೂ ಅಲ್ಲ. ಹಾರ್ಮೋನುಗಳ ಬದಲಾವಣೆಯಿಂದ ಬ್ಯಾಕ್ಟೀರಿಯಗಳ ಸಂಖ್ಯೆ ಹೆಚ್ಚಾಗುವುದು ತೀರಾ ಸ್ವಾಭಾವಿಕ.

ಶ್ವಾಸ ದುರ್ಗಂಧಯುಕ್ತವಾದಾಗ ಧೈರ್ಯಗೆಡಬೇಕಾಗಿಲ್ಲ. ಸ್ವಲ್ಪ ಪ್ರಯತ್ನ ಮಾತ್ರದಿಂದಲೇ ದುರ್ಗಂಧ ಶ್ವಾಸಕ್ಕೆ ವಿದಾಯ ಹೇಳುವುದು ಖಂಡಿತವಾಗಿ ಸಾಧ್ಯ. ●

# ಸಾಕ್ಷಿ

## 'ಗಂಗಾ' ಪಾದೇಕಲ್

ಪುಸ್ತಕ ವಿಭಾಗ

ಕಮಲಮ್ಮನ ಅಂತ್ಯಸಂಸ್ಕಾರ ಮುಗಿಸಿದ ಜನ್ನಯ್ಯ ಹಾಗೂ ಸುಧಾಕರ ಮರಳಿ ಮನೆ ಸೇರಿದಾಗ ಆಗಲೆ ರಾತ್ರಿ ಒಂಭತ್ತು ದಾಟಿತ್ತು. ಬೆಳಗಿಂದಲೂ ಓಡಾಡಿ ದಣ'ದಿದ್ದ ಜನ್ನಯ್ಯ, ಮನೆ ತಲಪಿದಾಕ್ಷಣ ಬಚ್ಚಲು ಸೇರಿ ಸ್ನಾನ ಮುಗಿಸಿಯೇ ಬಂದರು. ಇನ್ನು ಒಂದಿಷ್ಟು ತಿಂದು ಹಾಸಿಗೆ ಕಾಣುವ ತವಕ ಅವರಿಗೆ. ಎಂದೇ ಚಾವಡಿಯಲ್ಲಿ ಇನ್ನೂ ಮಂಕನಂತೆ ಕೂತಿದ್ದ ಸುಧಾಕರನಲ್ಲಿ ಸ್ನಾನ ಮಾಡಿ ಬರಲು ಸೂಚಿಸಿದಾಗ ಹೇಳಿದನವ, "ನನಗೇನೂ ಬೇಡ ಮಾವ, ನೀವು ಉಂಡುಬಿಡಿ."

ಅಳಲು ತುಂಬಿದ ಆ ದನಿ ಜನ್ನಯ್ಯನವರನ್ನು ಸಂಕಟಕ್ಕೆ ನೂಕಿತಾದರೂ ಕರ್ತವ್ಯ ಮರೆಯದೆ ಬೋಧಿಸಿದರು, "ಹಾಗೆಂದರೆ ಹೇಗಪ್ಪ ? ನಿನ್ನಮ್ಮನಿಗೆ ಸಾಯುವ ವಯಸ್ಸಲ್ಲ ನಿಜವೇ. ಆದರೆ ಯಮನಿಗೆ ಅದರ ಪರಿವೆ ಇಲ್ಲ. ಅವ ಕರೆದಾಗ ಹೋಗಲೇಬೇಕಲ್ಲ ?"

"ಅದೇನೋ ನನಗೆ ತಿಳಿಯದು ಮಾವ," ಸುಧಾಕರ ತೀರಾ ಖಿನ್ನನಾಗಿ ಹೇಳಿದ, "ನನಗೆ ಕಾಣುವುದೊಂದೇ. ಇಷ್ಟು ವರ್ಷ ಯಾರ್‍ಯಾರ ಮನೆ ಜೀತ ಮಾಡಿ ನನ್ನನ್ನು ಸಾಕಿದ ಅಮ್ಮ ಇದೀಗ ನನ್ನ ಓದು ಮುಗಿಯುತ್ತ ಬಂದಾಗಲೆ ಹೋಗಬೇಕೆ ? ಒಂದು ದಿನ, ಒಂದೇ ಒಂದು ದಿನ ಕೂಡ ಅವಳನ್ನು ಸುಖವಾಗಿಟ್ಟುಕೊಳ್ಳಲು ನನ್ನಿಂದಾಗಲಿಲ್ಲವಲ್ಲ ?" ಹೇಳಹೇಳುತ್ತ ಅವನು ಎಳೆ ಮಗುವಿನಂತೆ ಅತ್ತೇಬಿಟ್ಟ.

ಜನ್ನಯ್ಯ ಈಗ ಮೂಕರಾದರು. ಏನು ಹೇಳಬೇಕಿದ್ದಕ್ಕೆ ? ಅವನಂದಿದ್ದೆಲ್ಲವೂ ಸತ್ಯವೇ. ಆತ ತಮ್ಮಲ್ಲಿಯೇ ಚಿಂತಿಸುತ್ತಿದ್ದಾಗ ಅಲ್ಲಿಯೇ ಇದ್ದು ಆ ಎಲ್ಲ ಮಾತುಗಳನ್ನು ಕೇಳಿಸಿಕೊಂಡಿದ್ದ ಪಾರ್ವತಮ್ಮ ಸುಧಾಕರನ ಹತ್ತಿರ ಹೋಗಿ ಅವನ ತಲೆ ಸವರುತ್ತ ನುಡಿದರು, "ನೋಡು ಸುಧಾ, ನಿನ್ನಮ್ಮ ಕಷ್ಟ ಎಂದಳು ಸರಿಯೆ. ಆದರೆ ಆ ಮರಣವಿದೆಯಲ್ಲ ? ಅದು ಸುಖ ಮರಣ. ನೇರ ಎದ್ದು ಹೋದಂತೆ ಹೋದಳಲ್ಲ, ಅಂತಹ ಭಾಗ್ಯ ಎಲ್ಲರಿಗೂ ಸಿಕ್ಕೀತೆ ? ಹುಂ ಏಳು. ಹೋಗಿ ಮಿಂದು ಬಾ. ನೀನು ಉಣ್ಣದೆ ಇದ್ದರೆ ಕಮಲಮ್ಮನಿಗೆ ಶಾಂತಿ ಸಿಗಲಿಕ್ಕಿಲ್ಲ."

ಆ ಮಾತು ಸುಧಾಕರನ ಮನಸ್ಸನ್ನು ತಟ್ಟಿರ

ಬೇಕು. ಎಂದೇ ಅವನು ಎದ್ದು ಸ್ನಾನಕ್ಕೆ ಹೊರಟ. ನಂತರ ಊಟದ ಶಾಸ್ತ್ರವೂ ಆಗಿ ಅವನು ತನ್ನ ಮನೆಗೆ ಹೋದ ಮೇಲೆ ಜನ್ನಯ್ಯನವರೂ ಮಲಗಿಕೊಂಡರು. ಆದರೆ ಶರೀರ ದಣಿದಿದ್ದರೂ ಮನಸ್ಸು ಆ ಸಾವಿನ ಕುರಿತೇ ಚಿಂತಿಸುತ್ತಿತ್ತಾಗಿ ತಕ್ಷಣ ನಿದ್ದೆ ಬರಲಿಲ್ಲ.

ಅಲ್ಲ, ಮನುಷ್ಯಾವಸ್ಥೆ ಎನ್ನುವುದು ಇದ ಕ್ಕೆಯೋ ಏನೋ? ಬೆಳಗ್ಗೆ ಎಂದಿನಂತೆ ವಾಸ್ತೇವರಲ್ಲಿಗೆ ಅಡಿಗೆ ಕೆಲಸಕ್ಕೆ ಹೊರಟ ಕಮಲಮ್ಮ ಮಧ್ಯಾಹ್ನ ಇದ್ದಕ್ಕಿದ್ದಂತೆ ಮರಣಿಸಿದಳೆಂದರೆ? ಒಳಗೆ ಅನ್ನ ಬಸಿದಿಟ್ಟು ಮೇಲೆದ್ದವಳು ಹಾಗೇ ಎದೆಗೆ ಕೈ ಇಟ್ಟುಕೊಂಡು ಮೋರೆ ಕಿವಿಚಿ ಕುಸಿದಳೆಂದೂ, ತಕ್ಷಣವೆ ಮುಂದಿನ ಬೀದಿಯಲ್ಲಿದ್ದ ವೈದ್ಯರನ್ನು ಕರೆದು ತಂದಾಗ ಆಕೆ ಹೃದಯಾಘಾತದಿಂದ ಸತ್ತಿರುವಳೆಂದೂ ತಿಳಿಯಿತಾಗಿ ವಾಸ್ತೇವರ ಮಗ, ಸುದ್ದಿ ಹೇಳಲು ಬಂದವನು ವಿವರಿಸಿದ್ದಾಗ ತಮಗೆ ನಂಬಲು ಆಗಿರಲೇ ಇಲ್ಲ ಆಗಿರಲಿಲ್ಲ. ಹಾಗೆಂದರೂ ಆದದ್ದು ಸತ್ಯವೇ ಆಗಿತ್ತಲ್ಲ. ಎಂದೇ ಮುಂದೆ ನಡೆಯಬೇಕಾಗಿದ್ದಕ್ಕೆ ಗಮನಹರಿಸಿದ್ದಾಗಿತ್ತು. ಆದರೂ ನಗರದಲ್ಲಿ ಓದುತ್ತಿದ್ದ ಅವಳ ಒಬ್ಬನೇ ಮಗನಿಗೆ ತಂತಿ ನೀಡಿ, ಅವನು ಬಂದು ಹೆಣ ಎತ್ತಿ ಒಪ್ಪ ಮಾಡಿ, ಎಲ್ಲ ಒಂದು ಹಂತಕ್ಕೆ ಬಂದಾಗ ರಾತ್ರಿಯಾಗಿತ್ತು ಅಲ್ಲವೆ? ಒಳಗೇ ಚಿಂತಿಸುತ್ತಿದ್ದ ಜನ್ನಯ್ಯನವರಿಗೆ ಸುಧಾಕರನ ಆ ಮಾತುಗಳೆಲ್ಲ ನೆನಪಾದವು. ನಿಜವೆ, ಅವನ ಓದು ಮುಗಿಯಲಿಕ್ಕಿದ್ದುದು ಇದೊಂದೇ ವರ್ಷ. ಇಷ್ಟು ವರ್ಷ ಮಗನ ಏಳಿಗೆಗಾಗಿ ಕಾದವಳಿಗೆ ಈ ಒಂದು ವರ್ಷ ಹೆಚ್ಚಾಯಿತೆ? ಆದರೆ ಹಾಗೆಂದುಕೊಳ್ಳುತ್ತಿದ್ದಾಗಲೆ ಆಗ ತಾವೇ ಹೇಳಿದ ಮಾತುಗಳೂ ನೆನಪಾಗಿ ಆಯುಸ್ಸಿನ ಮಿತಿ ಬಲ್ಲವರಾರು? ಎಂದೂ ಕಂಡಿತು. ಜತೆಗೆಯೆ ಸುಧಾಕರನ ಅಳಲು ಸ್ಮರಣೆಗೆ ಬಂದು, ಅದಕ್ಕೆ ಹಿನ್ನೆಲೆಯಾಗಿದ್ದ ಕಮಲಮ್ಮನ ಬದುಕಿನ ವಿವರಗಳನ್ನು ಮನಸ್ಸು ನೆನೆದುಕೊಂಡಿತು.

ತಮ್ಮ ತಾಯಿಯ ಕಡೆಯಿಂದ ದೂರದ ಸಂಬಂಧಿ ಆಗಿದ್ದ ಕಮಲಮ್ಮ ಈಗ ೧೫ ವರ್ಷಗಳಿಗೂ ಹಿಂದೆ ತಮ್ಮಲ್ಲಿಗೆ ಬಂದು ಆಶ್ರಯ ಬೇಡಿದ್ದಳು. ಅಪಾಪೋಲಿ ಎನ್ನಿಸಿಕೊಂಡಿದ್ದ ಅವಳ ಗಂಡ ಊರು ಬಿಟ್ಟು ಓಡಿದ್ದ ಸುದ್ದಿ ಆಗಲೇ ತಮಗೆಲ್ಲ ತಿಳಿದದ್ದು. ಸುಧಾಕರನಿಗಾಗ ನಾಲ್ಕು ವರ್ಷವಿದ್ದೀತು. ಹೆತ್ತವರನ್ನು ಮೊದಲೆ ಕಳೆದುಕೊಂಡಿದ್ದ ಆಕೆ, ಗಂಡನ ಆಸರೆಯೂ ಇಲ್ಲದ ಕಷ್ಟಕ್ಕೆ ಬಿದ್ದುದನ್ನು ನೋಡಲಾಗದೆ ಹೇಳಿದ್ದರು ತಮ್ಮ ತಾಯಿ, "ಜನ್ನಾ, ನಮ್ಮ ಆ ಕೊಟ್ಟಿಗೆಯಲ್ಲಿ ಸೌದೆ ಹಾಕುತ್ತಿದ್ದ ಕೋಣೆ ಉಂಟಲ್ಲ. ಅದನ್ನವಳಿಗೆ ಕೊಡೋಣ. ಅಲ್ಲಿದ್ದರೆ ಯಾರ ಭಯವೂ ಬೇಕಿಲ್ಲ. ಆದರೆ ಅವಳ ಅನ್ನ ಮಾತ್ರ ಅವಳೇ ದುಡಿದುಕೊಳ್ಳಬೇಕು." ಅಮ್ಮ ಅಷ್ಟು ಹೇಳಿದೊಡನೇ ಹೇಗೆ ಅತ್ತಿದ್ದಳಲ್ಲವೆ ಆ ಹೆಣ್ಣು? ಹಳೇ ನೆನಪಿನಿಂದ ಆವರದೆ ಭಾರವಾಯಿತು.

ಅಮ್ಮ ಹಾಗಂದಿದ್ದು ಯೋಚಿಸಿಯೇ ಆಗಿತ್ತು. ಸಂಬಂಧಿಯಾಗಿದ್ದ ಕಮಲಮ್ಮನನ್ನು ಮನೆ ಒಳಗೇ ಕೆಲಸಕ್ಕಿಟ್ಟುಕೊಳ್ಳುವುದು ಆಕೆಗೆ ಬೇಕಿರಲಿಲ್ಲ. ಕಮಲಮ್ಮನಾದರೂ ಅಷ್ಟೇ. ಸಿಕ್ಕಿದ ಅನುಕೂಲಕ್ಕೆ ಕೃತಜ್ಞೆ ಆಗಿರುತ್ತಲೆ ತನ್ನ ಅನ್ನ ತಾನೇ ದುಡಿಯಲಾರಂಭಿಸಿದ್ದಳು. ಮೊದಮೊದಲಿಗೆ ಕರೆದಲ್ಲಿಗೆ ಹೋಗಿ ಅಡಿಗೆ, ತಿಂಡಿ ಕೆಲಸ. ಬಿಡುವಿದ್ದಾಗ ಹಪ್ಪಳ, ಸಂಡಿಗೆ, ಉಪ್ಪಿನಕಾಯಿ ಹಾಕಿ ಮಾರುವುದು, ಮೆಣಸಿನಪುಡಿ ಕುಟ್ಟಿ ಕೊಡುವುದು ಹೀಗೇ ಕೆಲಸ ಮಾಡುತ್ತ ಸುಧಾಕರನನ್ನು ಶಾಲೆಗೂ ಸೇರಿಸಿದ್ದಳು. ಆಮೇಲೆ ವಾಸ್ತೇವರಲ್ಲಿ ಖಾಯಂ ಅಡಿಗೆ ಕೆಲಸ ಸಿಕ್ಕಿತ್ತು. ಇಷ್ಟೆಲ್ಲ ಆದಾಗ ತಮ್ಮಲ್ಲೂ ಹಲವಾರು ಬದಲಾವಣೆಗಳಾಗಿದ್ದವು. ತಮ್ಮ ಸಂಸಾರವೂ ಬೆಳೆದಿತ್ತು. ತಾಯಿ ಭಗವಂತನ ಪಾದ ಸೇರಿದ್ದರು. ಈ ಏರಿಳಿತಗಳಲ್ಲಿ ಸರಿಯಾಗಿ ಭಾಗವಹಿಸಿದ್ದಾಕೆ ಕಮಲಮ್ಮ. ಹೊರಗಿನ ಕೆಲಸಗಳಷ್ಟೇ ಇರಲಿ, ತಮ್ಮ ಮನೆ ಒಳಗೆ ಯಾವುದೇ ಕೆಲಸ ಆಗಿಲ್ಲವೆಂದರೆ ಕಮಲಮ್ಮ ಮಾಡಿ ಕೊಟ್ಟೇ ಸಿದ್ಧ. ಎಂದೇ ಇಷ್ಟು ವರ್ಷಗಳಲ್ಲಿಯೂ ಅವಳಿಂದ ತಮಗೆಲ್ಲ ಉಪಕಾರವೇ ಆಗಿತ್ತಲ್ಲದೆ, ಅಪಕಾರವಲ್ಲ. ನೆನೆಯುತ್ತಿದ್ದ ಜನ್ನಯ್ಯ ಯಾವಾಗ ನಿದ್ದೆಗೆ ಜಾರಿದ್ದರೋ?

ಮರು ಬೆಳಗ್ಗೆಯೆ ಮರಳಿ ನಗರಕ್ಕೆ ಹೊರಟ ಸುಧಾಕರ ತಮ್ಮಲ್ಲಿಗೆ ಬಂದಾಗ ಆಗಷ್ಟೆ ತಿಂಡಿ ತಿನ್ನಲು ಕೂತಿದ್ದ ಜನ್ನಯ್ಯ, "ಬಾ, ದೋಸೆ

ತಿನ್ನುವೆಯಂತೆ," ಎಂದು ಸ್ವಾಗತಿಸಿದರು.

ಹಾಗೆ ತಿಂಡಿ ಆದ ನಂತರ ಮೆಲ್ಲಗೆ ಹೇಳಿದನವ, "ಮಾವ, ಹನ್ನೊಂದನೆ ದಿನದ ಕರ್ಮಗಳಿಗೆ ಏನು ಮಾಡಲಿ ಎಂದು ಯೋಚಿಸುತ್ತಿದ್ದೇನೆ."

ತೀರಾ ಸಂಕೋಚದಿಂದ ಬಂದ ಆ ಮಾತುಗಳ ಹಿನ್ನೆಲೆ ತಕ್ಷಣವೆ ಜನ್ನಯ್ಯನವರಿಗೆ ತಿಳಿಯಿತಾಗಿ ಗಂಭೀರವಾಗಿ ನುಡಿದರಾತ, "ಅಯ್ಯೋ ಹುಚ್ಚಪ್ಪ, ಆ ದಿನಗಳ ಖರ್ಚಿಗೆ ನೀನೇನೂ ಯೋಚಿಸಬೇಕಿಲ್ಲ. ಅದಕ್ಕೆ ಬೇಕಾಗಿರುವ ಹಣ ನಿನ್ನಮ್ಮನೇ ಉಳಿಸಿಟ್ಟಿದ್ದಾಳೆ."

"ಹೌದ ?" ವಿಸ್ಮಯ, ಒಂದಷ್ಟು ವಿಷಾದಗಳಿಂದ ಸುಧಾಕರ ಕೇಳಿದಾಗ ಮತ್ತೆ ವಿವರಿಸಿದರು,

"ಹೂಂ, ನಿಮ್ಮ ಖರ್ಚು ಕಳೆದು ಉಳಿದ ಹಣವನ್ನೆಲ್ಲ ನನ್ನಲ್ಲಿ ಕೊಡುತ್ತಿದ್ದಳು. ಅದನ್ನೆಲ್ಲ ಹಾಗೇ ಬ್ಯಾಂಕಿಗೆ ಕಟ್ಟಿದ್ದೇನೆ. ಎಷ್ಟಿದೆಯೋ ನೋಡಿಲ್ಲ. ಆದರೂ ಒಂದೈದಾರು ಸಾವಿರ ಇದ್ದೀತೇನೋ ?"

ಈಗ ಸುಧಾಕರ ಏನೂ ಹೇಳಲಿಲ್ಲವಾದರೂ ಅವನ ಕಣ್ಣುಗಳಲ್ಲಿ ತಟ್ಟನೆ ನೀರುಕ್ಕಿತು. ಆ ಕಂಬನಿಯ ಹಿಂದಿನ ಭಾವನೆಗಳನ್ನು ಅರ್ಥವಿಸಿಕೊಂಡ ಜನ್ನಯ್ಯ ಮೃದುವಾಗಿ ಹೇಳಿದರು,

"ನೋಡಪ್ಪ, ಆ ಹಣ ನಿನಗಾಗಿ ನಿನ್ನಮ್ಮ ಉಳಿಸಿದ್ದು. ಕರ್ಮಗಳನ್ನು ಅದ್ದೂರಿಯಾಗಿ ಮಾಡ ಹೊರಟರೆ ಅದೆಲ್ಲ ಬೇಕಾದೀತು. ಆದರೆ ನಿನ್ನಮ್ಮನ ಆತ್ಮಕ್ಕೆ ತೃಪ್ತಿ ಆಗದು. ಎಂದೇ ಆ ದಿನ ಯಾವುದಾದರೂ ಪುಣ್ಯಕ್ಷೇತ್ರಕ್ಕೆ ಹೋಗಿ ಸರಳವಾಗಿ ವಿಧಿಗಳನ್ನು ಪೂರೈಸಿ ಬಾ. ಉಳಿದ ಹಣ ನಿನ್ನ ಮುಂದಿನ ಬದುಕಿಗಾಯಿತು. ಈಗ ನೀನು ಹೊರಡು. ನಾಡಿದ್ದು ಬರುವಾಗ ಎಲ್ಲ ಹಣ ತಂದಿಟ್ಟಿರುತ್ತೇನೆ. ಆಗದೆ ?"

ಅವರ ಮಾತಿಗೆ ಒಪ್ಪಿದ ಸುಧಾಕರ ನಂತರ ಹೊರಟಾಗ ಜನ್ನಯ್ಯನವರೂ ಎದ್ದು ಅಡಿಕೆ ಹೆಕ್ಕಲು ತೋಟಕ್ಕೆ ಇಳಿದರು.



ಎರಡು ದಿನಗಳ ತರುವಾಯ ಒಂದು ಬೆಳಗ್ಗೆ ಜನ್ನಯ್ಯ ಒಳಕೋಣೆಯಲ್ಲಿದ್ದ ತಮ್ಮ ಗಾದ್ರೆಜ್ ಬೀರುವಿನ ಬಾಗಿಲು ತೆರೆಯಲು ಹೋದರು. ಅದರೊಳಗಿನ ಲಾಕರಿನಲ್ಲಿ ಕಮಲಮ್ಮನ ಉಳಿಕೆ ಹಣದ ರಸೀದಿಗಳಿದ್ದವು. ಆಕೆ ಹಣ ನೀಡುತ್ತಿದ್ದುದಕ್ಕೆ ನಿಯಮಗಳೇನೂ ಇರಲಿಲ್ಲ ಹಾಗೂ ಒಮ್ಮೆ ಬ್ಯಾಂಕಿಗೆ ಹಾಕಲೆಂದು ಕೊಟ್ಟ ಹಣವನ್ನಾಕೆ ಮರಳಿ ಪಡೆದಿದ್ದೆಂಬುದೇ ಇರಲಿಲ್ಲ. ಹೀಗಾಗಿ ಆ ಬಗ್ಗೆ ಪಾಸ್‌ಬುಕ್ಕಿನ ಅವಶ್ಯಕತೆ ಜನ್ನಯ್ಯನವರಿಗೆ ಕಂಡಿರಲಿಲ್ಲ. ತಮ್ಮದೇ ಹೆಸರಿನಲ್ಲಿ ಪ್ರತ್ಯೇಕ ಖಾತೆ ತೆಗೆದು ಆಕೆಯ ಉಳಿತಾಯವನ್ನು ಬ್ಯಾಂಕಿಗೆ ಕಟ್ಟುತ್ತಿದ್ದ ಅವರು, ಸಮಯ ಬಿದ್ದರೆ ಇರಲಿ ಎಂದು ಆ ರಸೀದಿಗಳನ್ನೆಲ್ಲ ಜೋಪಾನವಾಗಿರಿಸಿದ್ದರು. ಇಂದೀಗ ಅವನ್ನೆಲ್ಲ ತೆಗೆದುಕೊಂಡು ಹೋಗಿ ಆ ಖಾತೆಯಿಂದ ಹಣ ತೆಗೆವ ಯೋಚನೆಯಲ್ಲಿದ್ದ ಅವರಿಗೆ, ರಸೀದಿಗಳನ್ನು ಹೊರಗೆ ತೆಗೆಯುತ್ತಿದ್ದಾಗ ಆಕೆಯ ಗಂಡನ ನೆನಪು ಹುಟ್ಟಿತು. ಆ ಕೆಟ್ಟ ಮನುಷ್ಯನಿಗೆ ಹೆದರಿಯೇ ಕಮಲಮ್ಮ ಈ ಕ್ರಮ ಅನುಸರಿಸಿದ್ದಲ್ಲವೆ ? ಎರಡು ವರ್ಷಗಳ ಕೆಳಗೆ ಆತ ಸತ್ತುಹೋದನೆಂಬ ಸುದ್ದಿ ತಿಳಿದಾಗ ಹೇಳಿದ್ದರು ತಾವು, "ಈತನಕ ಅವನೆಲ್ಲಿದ್ದನೋ ಏನೋ ? ಆದರೂ ಅವನಿಗೆ ಹೆದರಿಯೇ ಬದುಕಿದಿ. ಆಯಿತಲ್ಲ ? ಇನ್ನಂತೂ ಅವನ ಭಯವಿಲ್ಲ. ಆ ನಿನ್ನ ಹಣದ ಖಾತೆ ನಿನ್ನ ಹೆಸರಿಗೇ ಮಾಡೋಣ." ಆ ಸಲಹೆಗೆ ತಕ್ಷಣವೆ ಬಂದಿತ್ತು ವಿರೋಧ. "ಬೇಡಿ ಜನ್ನಣ್ಣ, ನನ್ನ ಸುಧಾ ಒಂದು ನೆಲೆಗೆ ಬರುವ ತನಕ ಅದು ಹಾಗೇ ಇರಲಿ." ಅದೇಕೆ ಹಾಗೆಂದು ಅಚ್ಚರಿಯಾಗಿ ಕೇಳಿದ್ದರೆ ಹೇಳಿದ್ದಳು ಇಳಿ ದನಿಯಲ್ಲಿ, "ಮತ್ತೇನೂ ಇಲ್ಲ, ಸುಧಾಗೆ ಈ ಹಣದ ಸಂಗತಿಯೇ ಗೊತ್ತಿಲ್ಲ. ಆದ್ದರಿಂದಲೆ ಬದುಕಿನಲ್ಲಿ ತಾನೇನೋ ಆಗಬೇಕೆಂಬ ಛಲ ಅವನಲ್ಲಿರುವುದು. ಆ ಹಣದ ವಿಚಾರ ತಿಳಿದರೆ ಕಷ್ಟಪಟ್ಟು ಈಗ ಓದುತ್ತಿರುವಂತೆ ಮುಂದೆಯೂ ಓದಿಯಾನೆನ್ನುತ್ತೀರಾ ?"

ನೆನೆಸುತ್ತ ಆತ ತಲೆದೂಗಿದರು. ಅವಳ ಮುಂದಾಲೋಚನೆ ಸರಿಯಾದದ್ದೇ. ಹಣ ಮನುಷ್ಯನ ಬುದ್ಧಿಯನ್ನು ಹಾಳುಮಾಡಿಬಿಡುತ್ತದೆ. ಅಂತೂ ಇದೀಗ ಸುಧಾಕರನ ಮುಂದಿನ ಬದುಕಿಗೆ ಎಷ್ಟು ನೆರವಾದೀತೋ ಈ ಮೊತ್ತ, ಆದರೆ ಅವನ

ತಲೆಬಿಸಿ ಇಲ್ಲದೆ ಅವಳ ಕರ್ಮಾಂತರ ಕಳೆವಂತೆ ಆಗಿದ್ದಂತೂ ನಿಜ. ಜನ್ನಯ್ಯ ಯೋಚಿಸುತ್ತ ಆ ವೇಳೆಗೆ ತೆಗೆದವುಗಳಲ್ಲದೆ, ಬೇರೆ ಯಾವುದೇ ರಸೀದಿ ಒಳಗೆ ಮೂಲೆಯಲ್ಲಿ ಉಳಿದಿರಬಹುದೇನೋ ಎಂದು ತಡಕಾಡುತ್ತಿದ್ದಾಗ ಸಿಕ್ಕಿತು ಆ ಗಂಟು. ಮತ್ತಗಿದ್ದ ಅದು ಬಟ್ಟೆಯದಿರಬೇಕೆಂದು ಅವರಿಗೆ ಅನ್ನಿಸುತ್ತಿದ್ದಾಗಲೆ ಅದಲ್ಲಿಗೆ ಹೇಗೆ ಬಂತೆಂಬ ವಿಚಾರವೂ ತಟ್ಟನೆ ಸ್ಮರಣೆಗೆ ನಿಲುಕಿತು. ಕಮಲಮ್ಮ ಈ ಮನೆಗೆ ಬಂದ ವರ್ಷವೇ ಆ ಗಂಟನ್ನು ತಮಗೆ ಇತ್ತು ಹೇಳಿದ್ದಳು, "ಇದು ನನ್ನ ಅತ್ತೆಯವರದ್ದಂತೆ. ಮಗ ಹಾಳುಗೇಡಿ ಎಂದು ಮಾವನವರು ನನಗೇ ಕೊಟ್ಟು ಜೀವಬಿಟ್ಟರು. ಹಾಗೆಂದು ನನ್ನಲ್ಲೂ ಇಟ್ಟುಕೊಳ್ಳುವಂತಿಲ್ಲ. ಅದು ನನ್ನಲ್ಲಿದ್ದರೆ ಯಾವತ್ತಾದರೂ ಅವರ ಕೈಗೆ ಸಿಕ್ಕಿ ಗಿರವಿ ಅಂಗಡಿ ಸೇರಿತು. ಹಾಗೆಂದು ನಿಮ್ಮಲ್ಲಿ ಕೊಡುತ್ತಿದ್ದೇನೆ ಅಣ್ಣ. ನಾಳೆ ಸುಧಾ ದೊಡ್ಡವನಾಗಿ ಲಗ್ನವೂ ಆಗುವಾಗ ಬೇಕಲ್ಲ ಸೊಸೆಗೆ." ಕೈಗೆ ಸಿಕ್ಕಿದ್ದನ್ನು ಮಾರಿ ತಿನ್ನದೆ, ವಂಶದ ಒಡವೆ ಎಂಬ ಭಕ್ತಿ-ಗೌರವಗಳಿಂದ ಅದನ್ನು ಕಾಪಿಡುವ ಅವಳ ಹೃದಯವಂತಿಕೆಗೆ ಮೆಚ್ಚುತ್ತಲೆ ಅದನ್ನತ್ತಿ ಲಾಕರಿನೊಳಗೆ ಇಟ್ಟುಬಿಟ್ಟಿದ್ದರು. ಆಮೇಲೆ ಕೆಲ ಸಮಯ ಅದರ ನೆನಪಿತ್ತಾದರೂ ಕ್ರಮೇಣ ಆ ವಿಚಾರ ಮರವೆಗೆ ಸಂದಿತು.

ಇಷ್ಟಕ್ಕೂ ಆ ಲಾಕರನ್ನು ತೆರೆಯುತ್ತಿದ್ದುದೇ ಯಾವಾಗಾದರೊಮ್ಮೆ. ತಮ್ಮ ಖಾಸಗಿ ಉಪಯೋಗಕ್ಕೆ ಬೇರೆಯೇ ಜಾಗ ಇತ್ತಲ್ಲ.... ಒಳಗೇ ತರ್ಕಿಸುತ್ತ ಜನ್ನಯ್ಯ ಗಂಟನ್ನು ಹೊರಗೆ ತೆಗೆದವರು, "ಒಳ್ಳೆಯದೇ ಆಯ್ತು. ಸುಧಾಕರನಿಗೆ ಹಣ, ಒಡವೆ ಎರಡನ್ನೂ ಒಟ್ಟಿಗೇ ಕೊಟ್ಟರಾಯಿತು" ಎಂದು ತಮ್ಮಲ್ಲಿಯೇ ಹೇಳಿಕೊಂಡರು. ಹಾಗೂ ಕೆಳಗಿಟ್ಟ ಬಟ್ಟೆಗಂಟು ಸ್ವಲ್ಪ ಭಾರವೆನ್ನಿಸಿತಾಗಿ ಕುತೂಹಲದಿಂದದನ್ನು ಬಿಚ್ಚಿದರು. ಒಳಗೆ ಇನ್ನೂ ಒಂದು ಪುಟ್ಟ ಚೀಲವಿತ್ತು. ಅದಕ್ಕೆ ಬಿಗಿಯಲಾಗಿದ್ದ ನಾರನ್ನು ಬಿಡಿಸಿ, ಒಳಗಿದ್ದುದನ್ನು ನೆಲಕ್ಕೆ ಸುರುವಿ ಹಾಗೇ ಕ್ಷಣ ಹೊತ್ತು ದಿಗ್ಭ್ರಾಂತರಾಗಿ ಕೂತುಬಿಟ್ಟರು. ಕೆಳಗೆ, ಕಿಟಕಿ ಬಾಗಿಲುಗಳಿಂದ ಬರುತ್ತಿದ್ದ ಬೆಳಕಿಗೆ ಮಿನುಗುತ್ತಿತ್ತು ಆ ಏಳೆಳೆಯ ಚಕ್ರಸರ ಹಾಗೂ ಕಾಸಿನ ಸರ. ಭ್ರಮಿಷ್ಠರಂತೆ ತುಸು ವೇಳೆ ಕೂತಿದ್ದ ಜನ್ನಯ್ಯ ನಂತರ ನಿಧಾನವಾಗಿ ಸರದ ಕಾಸುಗಳನ್ನು ಎಣ'ಸಿದರು. ಹನ್ನೊಂದಿತ್ತು. ಮತ್ತೆ ಈ ಚಕ್ರಸರದಲ್ಲಿ ಎಳೆಗೆ ಮೂರು ಪವನೇ ಇದ್ದೀತಷ್ಟೇ, ಎಷ್ಟು ದಪ್ಪವಿದೆ ಒಂದೊಂದೂ! ಅಷ್ಟು ಚಿನ್ನದ ಎದುರಿಗೆ ಏನೇನೋ ಯೋಚನೆಗಳು ಅವರೊಳಗೆ ತಾಕಲಾಟ ನಡೆಸಿದ್ದಂತೆ ಒಂದು ಸ್ವರ ಕೇಳಿದಂತಾಯಿತು- 'ಸುಧಾಕರನಿಗೆ ಇದೂ ತಿಳಿದಿರಲಿಕ್ಕಿಲ್ಲ.' ತಮ್ಮೊಳಗಿನ ಆ ದನಿಗೆ ತಾವೇ ಬೆಚ್ಚಿ ಹೆದರಿದವರಂತೆ ಎದ್ದು ಹೋಗಿ ಕಿಟಕಿ, ಬಾಗಿಲು ಮುಚ್ಚಿ ಮರಳಿದರು.



ಮುಂದೆ ಎರಡು ತಿಂಗಳು ಕಳೆದಾಗ ಬಂತು ಬೇಸಿಗೆ. ಆ ವೈಶಾಖದ ಕೊನೆಗೆ ಮಧ್ಯಮ ತರಗತಿಯ ಧಾರ್ಮಿಕ ಮನೋಭಾವದ ಜನ್ನಯ್ಯ ತಮ್ಮ ಒಬ್ಬಳೇ ಮಗಳು ಸರೋಜಳ ವಿವಾಹವನ್ನು ಅದ್ದೂರಿಯಾಗಿ ಮಾಡಿದರು. ಗಡದ್ದಾಗಿ ನಡೆದ ಆ ಮದುವೆಯಲ್ಲಿ ಮದುಮಗಳಿಗೆ ಹಾಕಿದ್ದ ಒಡವೆಗಳನ್ನು ಗಮನಿಸಿದ ಹಳ್ಳಿಯ ಹೆಂಗಸರೆಲ್ಲ 'ಹುಟ್ಟಿದರೆ ತಂದೆಗೆ ಒಬ್ಬಳೇ ಮಗಳಾಗಿ ಹುಟ್ಟಬೇಕಪ್ಪ. ಸರೋಜಳ ಅದೃಷ್ಟ ನೋಡು' ಎಂದೆಲ್ಲ ಆಡಿಕೊಂಡರು. ಈ ವಿವಾಹದಲ್ಲಿ ಸುಧಾಕರ ತನ್ನ ಶಕ್ತಿ ಮೀರಿ ಎಲ್ಲ ಕೆಲಸಗಳಿಗೂ ಸೇರಿ ದುಡಿದಿದ್ದ. ತನಗೆ ಇನಿತೂ ಸುಳಿವಿರದ ತನ್ನಮ್ಮನ ಉಳಿತಾಯವಾಗಿದ್ದ ಆ ಐದೂವರೆ ಸಾವಿರವನ್ನೂ ಜನ್ನಯ್ಯ ಹಾಗೇ ಅವನಿಗೆ ನೀಡಿದ್ದುದರ ಕೃತಜ್ಞತೆ ಆ ದುಡಿತದಲ್ಲಿತ್ತು. ಆ ಹಣದ ಬಹುಪಾಲು, ಕಮಲಮ್ಮನ ಕರ್ಮಾಂತರಗಳಿಗೂ, ನಂತರ ಅವನ ಓದು ಮತ್ತು ಉದರಂಭರಣಕ್ಕೂ ಖರ್ಚಾಗಿತ್ತಾದರೂ, ಅದು ಪೂರ್ತಿ ಖಾಲಿ ಆಗುವ ಮುನ್ನ ತಾನೊಂದು ಉದ್ಯೋಗ ಹುಡುಕಿಕೊಂಡೇನೆಂಬ ವಿಶ್ವಾಸ ಕೂಡ ಅವನಲ್ಲಿತ್ತು. ಡಿಗ್ರಿ ಮುಗಿಸಿ ಆ ವೇಳೆಗಾಗಲೇ ಕೆಲಸದ ಬೇಟೆ ಆಡುತ್ತಿದ್ದ ಅವನು, ತಾನು ಕೆಲವೊಂದು ಕಡೆ ಉದ್ಯೋಗಗಳಿಗೆ ಅರ್ಜಿ ಹಾಕಿರುವುದನ್ನು ಜನ್ನಯ್ಯ ದಂಪತಿಗೆ ತಿಳಿಸಿ, ಅವರ ಆಶೀರ್ವಾದಗಳನ್ನು ಪಡೆದುಕೊಂಡೇ ಅಲ್ಲಿಂದ

ಹೊರಟ. ಹಾಗೆ ಹೋದ ಆತ, ಮತ್ತೆ ಬಂದುದು ನಾಲ್ಕು ತಿಂಗಳ ನಂತರ.

ಆ ವೇಳೆಗೆ ಜನ್ನಯ್ಯನವರ ಸಂಸಾರದೊಳಗೂ ತುಸು ಕಿರಿಕಿರಿ ಆರಂಭವಾಗಿತ್ತು. ಆ ಕಸಿವಿಸಿಯ ಮೂಲ ಜಲಜ, ಆ ಕುಟುಂಬದ ಹಿರಿಸೊಸೆ. ಜನ್ನಯ್ಯನವರಿಗೆ ಮೂರು ಗಂಡು ಒಂದು ಹೆಣ್ಣು. ಸರೋಜಳ ಲಗ್ನದ ವೇಳೆಗಾಗಲೇ ಅವರ ಹಿರಿಮಗ ಸೀತಾರಾಮನ ಲಗ್ನವಾಗಿ ವರ್ಷ ದಾಟಿತ್ತು. ಹಾಗೂ ಮದುವೆಯಲ್ಲಿ ಅಂತಹ ಒಡವೆಗಳನ್ನೇನೂ ಸೊಸೆಗೆ ಜನ್ನಯ್ಯ ಹಾಕಿರಲಿಲ್ಲ. ಆ ಬಗ್ಗೆ ಜಲಜಳಿಗೆ ತುಸು ನಿರಾಶೆ ಆಗಿತ್ತಾದರೂ ಅದನ್ನು ಹೇಳಿಕೊಂಡಿರಲಿಲ್ಲ. ಆದರೆ ಯಾವಾಗ ಮಗಳಿಗೆ ಜನ್ನಯ್ಯ ಅಷ್ಟೆಲ್ಲ ಚಿನ್ನ ಹಾಕಿದರೋ ಆಗಿನಿಂದಲೇ ಸೊಸೆಯ ಆ ನಿರಾಶೆ, ಅಸಮಾಧಾನದ ರೂಪ ತಾಳಿತು. 'ಮನೆ ಒಳಗೆ ದುಡಿಯಲು ನಾನು, ಹೊರಗೆ ಹೇಗೂ ನೀವು ಇದ್ದೀರಲ್ಲ! ನಮಗೆ ಈ ಕತ್ತೆಚಾಕರಿ ಬಿಟ್ಟು ಬೇರೆನಿದೆ ? ಮಾವನವರಿಗೋ, ಬಾಕಿ ಇದ್ದವರಿಗೇ ಎಷ್ಟು ಮಾಡಿದರೂ ಸಾಲದು' ಎಂಬಿತ್ಯಾದಿಯಾಗಿ ಅವಳು ದುಸುಮುಸು ಮಾಡಿದರೆ ಕೇಳುತ್ತಿದ್ದ ಸೀತಾರಾಮನಿಗೂ 'ನಿಜವೇನೋ' ಎನ್ನಿಸತೊಡಗುತ್ತಿತ್ತು ಮತ್ತು ಅವನ ಆ ಅನ್ನಿಸಿಕೆಗೆ ಕಾರಣಗಳೂ ಇದ್ದವು.

ಸೀತಾರಾಮ ಕಲಿಯಲು ಅಂಥ ಚುರುಕಿನವನಾಗಿರಲಿಲ್ಲ. ಆದರೆ ತೋಟದ ಉಸ್ತುವಾರಿಗೆ ತಮ್ಮ ಜತೆಯಲ್ಲಿ ಒಬ್ಬ ಇದ್ದರೆ ಒಳಿತೇ ಆದೀತು ಎಂಬ ಭಾವನೆ ಹೊಂದಿದ್ದ ಜನ್ನಯ್ಯ, ಮಗನ ವಿಫಲತೆಗೆ ಬೇಸರಗೊಳ್ಳದೆ ಆತನ ಹೈಸ್ಕೂಲು ಮುಗಿದೊಡನೆ ಸ್ಕೂಲು ಬಿಡಿಸಿ ತೋಟದ ಕೆಲಸಗಳಿಗೆ ತರಬೇತು ನೀಡಲಾರಂಭಿಸಿದ್ದರು. ಓದು ಇಷ್ಟವಿಲ್ಲದ ರಾಮನಿಗೂ ಅದು ಖುಷಿ ಕೊಟ್ಟ ವಿಚಾರವೇ ಆಗಿತ್ತು. ಆದರೆ ಅವನ ತಮ್ಮಂದಿರಾದ ಶ್ರೀಧರ, ದಿವಾಕರ ಇಬ್ಬರೂ ಅವನಂತಿರದೆ ಓದಿನಲ್ಲಿ ಆಸಕ್ತಿ ಇದ್ದ ಹುಡುಗರಾಗಿದ್ದರು. ಅವರಿಬ್ಬರ ಬುದ್ಧಿವಂತಿಕೆಯನ್ನು ಜನ್ನಯ್ಯ ಗಮನಿಸಿದ್ದವರೆ!

ತಮಗಿರುವ ತೋಟದ ಉತ್ಪತ್ತಿ, ಮುಂದೆ ಮೂರು ಸಂಸಾರಗಳ ನಿರ್ವಹಣೆಗೆ ಸಾಲದೆಂಬ ಅರಿವಿದ್ದ ಆತ, ಆ ಕಾರಣದಿಂದಾಗಿಯೇ ಅವರಿಬ್ಬರ ಓದಿಗೆ ಉತ್ತೇಜನ ನೀಡಿದ್ದರು. ಹಾಗೂ ಅವರ ಆ ಕ್ರಮದಿಂದಾಗಿ ಇದೀಗ ಮಧ್ಯದ ಹುಡುಗ ಶ್ರೀಧರ ಕಾಲೇಜೊಂದರ ಉದ್ಯೋಗಿಯಾಗಿದ್ದರೆ, ಕಿರಿಯವ ಮೆರಿಟ್‌ನಲ್ಲಿ ಸೀಟು ಗಿಟ್ಟಿಸಿ ವೈದ್ಯಕೀಯ ಓದುತ್ತಿದ್ದ. ಹೀಗಿದ್ದಾಗಲೇ ಕಮಲಮ್ಮ ತೀರಿಕೊಂಡದ್ದು, ಸರೋಜಳ ವಿವಾಹ ನಡೆದಿದ್ದು.

ಕೆಲಸಕ್ಕಾಗಿ ಪ್ರಯತ್ನಿಸಿ ನಿರಾಶನಾದರೂ ಆ ವೇಳೆಗೆ ಕೆಲವು ಕಠೋರ ಸತ್ಯಗಳನ್ನು ಅರಗಿಸಿಕೊಂಡಿದ್ದ ಸುಧಾಕರ ಒಂದಾಸೆ ಹೊತ್ತು ಜನ್ನಯ್ಯನವರಲ್ಲಿಗೆ ಬಂದಾಗ ಮಧ್ಯಾಹ್ನವಾಗುತ್ತಿತ್ತು. ಆ ಬೆಳಗ್ಗೆಯಷ್ಟೇ ಜಲಜ ಎಬ್ಬಿಸಿದ ಕಿರಿಕಿರಿಯಿಂದ ತ್ರಸ್ತರಾಗಿದ್ದ ಜನ್ನಯ್ಯ ಚಾವಡಿಯಲ್ಲಿ ಕೂತು ಗಾಢಾಲೋಚನೆಗೆ ತೊಡಗಿದ್ದಾಗಲೇ ಸುಧಾಕರನೂ ಆಗಮಿಸಿದ. ತಮ್ಮ ಮನಸ್ಸು ಕೆಟ್ಟಿದ್ದರೂ ಮನೆ ಮರ್ಯಾದೆ ಮರೆಯದ ಜನ್ನಯ್ಯ ಅವನನ್ನು ಸ್ವಾಗತಿಸಿದರಲ್ಲದೆ, ಮಡದಿಯಲ್ಲಿ ಆಸರಿಗೆ ತರಲಿಕ್ಕೂ ಹೇಳಿದರು. ಆಕೆ ತುಸು ಹೊತ್ತಿನಲ್ಲಿಯೇ ತಂದಿತ್ತ ಶರಬತ್ತನ್ನು ಕುಡಿದ ಸುಧಾಕರ ವಿಷಯವನ್ನು ಹೇಗೆ ಎತ್ತಲಿ ? ಎಂದು ಯೋಚಿಸುತ್ತಿದ್ದಾಗ ಜನ್ನಯ್ಯನೇ ಪ್ರಶ್ನಿಸಿದರು,

"ಏನಾಯಿತು ನಿನ್ನ ಕೆಲಸದ ವಿಚಾರ ? ಎಲ್ಲಾದರೂ ಸಿಕ್ಕಿತೆ ?"

"ಇಲ್ಲ ಮಾವ, ಹೀಗೆಯೇ ಕುಳಿತನಾದರೆ ಅದು ಸಿಗುವಂತೆಯೂ ಇಲ್ಲ," ಖಿನ್ನನಾಗಿ ತಕ್ಷಣವೆ ಉತ್ತರಿಸಿದ ಅವನು, ನಂತರ ಆ ಕುರಿತು ತಾನು ಪಟ್ಟ ಪ್ರಯತ್ನ, ಹಾಕಿದ ಅರ್ಜಿ, ಮಾಡಿದ ದೊಡ್ಡ ಜನಗಳ ಭೇಟಿ ಎಲ್ಲವನ್ನೂ ಹೇಳಿ, ಕೊನೆಗೆ ಒಂದೆಡೆ ಕೆಲಸ ಸಿಗುವ ಅಂದಾಜು ಇದೆ ಎಂದೂ, ಆದರೆ ಸ್ವಲ್ಪ ತೊಂದರೆ ಇದೆ ಎಂದೂ ಹೇಳಿ ನಿಲ್ಲಿಸಿದ.

ಹಾಗೆ ಆತ ಅರ್ಧದಲ್ಲಿಯೆ ನಿಲ್ಲಿಸಿದಾಗ ಕೇಳಿದರು ಜನ್ನಯ್ಯ, "ಏನದು ತೊಂದರೆ ?"

"ಅದೇ..." ಸುಧಾಕರ ಹಾಗೆಂದವನು ಚಾವಡಿ ಗೋಡೆಗೊರಗಿ ನಿಂತು ತನ್ನತ್ತಲೇ ದೃಷ್ಟಿ ನೆಟ್ಟಿದ್ದ ಪಾರ್ವತಮ್ಮ ಹಾಗೂ ಜಲಜರನ್ನೊಮ್ಮೆ ನೋಡಿ ಸಂಕೋಚದಿಂದ ಹಿಡಿಯಾಗುತ್ತ ಇಳಿದನಿಯಲ್ಲಿ ನುಡಿದ.

"ಒಂದು ಹದಿನೈದು ಸಾವಿರ ಕೊಟ್ಟರೆ ಕೆಲಸ ನನಗೇ ಅಂತೆ. ಮಾವ, ನೀವು ಹೇಗಾದರೂ ಮಾಡಿ...." ಹೇಳುತ್ತಿದ್ದ ಅವನು ಮಾತಿನ ಮಧ್ಯೆಯೇ ಜಲಜ ಮೂತಿ ತಿರುವಿ ಒಳಗೆ ರಭಸದಿಂದ ಹೋಗಿದ್ದು ಗಮನಿಸಿ ಪೆಚ್ಚಾಗಿ ಅಲ್ಲಿಗೇ ನಿಲ್ಲಿಸಿಬಿಟ್ಟ. ಮುಂದೆ ಎರಡು ನಿಮಿಷ ಗಳು ಹಾಗೇ ಉರುಳಿದವು. ಆದರೆ ಮತ್ತೆ ದನಿ ಎತ್ತಲು ಸುಧಾಕರನಿಂದಾಗಲಿಲ್ಲ. ಹೀಗಿದ್ದರೂ ವಿಚಾರ ತಿಳಿದ ಕಾರಣ, ಮಾವ ಏನಾದರೂ ಹೇಳಿಯಾರೆಂದವನು ಜನ್ನಯ್ಯನವರತ್ತ ದೈನ್ಯದೃಷ್ಟಿ ಹೂಡಿದ್ದಾಗ ಕರೆದರು ಪಾರ್ವತಮ್ಮ "ಸುಧಾ ಕರಾ...."

ಆ ಕರೆಗೆ ತುಸು ಚಕಿತನಾದ ಅವನು, ಅವರತ್ತ ನೋಡಿದಾಗ ಗಂಭೀರರಾಗಿ ಪ್ರಶ್ನಿಸಿದರಾಕೆ, "ನಿನಗೆ ನಾವೇನಾದರೂ ಬಾಕಿ ನೀಡಲಿಕ್ಕಿದೆಯಾ ?"

"ಇಲ್ಲವಲ್ಲಾ ?" ಇಳಿದನಿಯಲ್ಲೇ ಉತ್ತರಿಸಿದ ಸುಧಾಕರ.

"ನೋಡು, ನಮ್ಮ ತಾಪತ್ರಯಗಳೇ ನಮಗೆ ಹಾಸಿಹೊದೆವಷ್ಟಿವೆ. ಹಾಗಾದರೂ ಇವರು ಅಲ್ಪ ಸ್ವಲ್ಪ ಕೊಡುತ್ತಿದ್ದರೋ ಏನೋ. ಆದರೆ ಮೊನ್ನೆ ತಾನೇ ಸರೋಜಳ ಮದುವೆ ಕಳೆದದ್ದು ನಿನಗೂ ತಿಳಿದ ವಿಚಾರವೇ."

"ನಿಜ ಅತ್ತೆ." ಈಗವನು ತೀರಾ ಹತಾಶನಾಗಿ ವಿವರಿಸಿದ, "ಆದರೆ ನನ್ನಂಥ ಹಿಂದುಮುಂದಿಲ್ಲ ದವನಿಗೆ ಸಾಲ, ಅದೂ ಹದಿನೈದು ಸಾವಿರ ಯಾರು ಕೊಟ್ಟಾರು ? ನೀವಾದರೆ ನನ್ನ ಬಂಧುಗಳು. ಎಳೆ ಯವನಿದ್ದಾಗಿನಿಂದಲೂ ನನ್ನ ಹೊಟ್ಟೆ-ನೆತ್ತಿ ನೋಡಿದ ಹಿತೈಷಿಗಳು...." ಹೇಳಹೇಳುತ್ತ ಅವನ ದನಿ ಕಂಪಿಸಿ ಕಣ್ಣಲ್ಲಿ ಪಸೆ ಊರಿದಾಗ ಪಾರ್ವತ ಮ್ಮನೂ ತುಸು ಕರಗಿದರು. ಬಹುಶಃ ಅವನು ಇನ್ನೊಮ್ಮೆ ಬೇಡಿಕೊಂಡಿದ್ದಲ್ಲಿ ಆಕೆ ಪೂರ್ತಿ ಮೃದು ವಾಗುತ್ತಿದ್ದರೋ ಏನೋ.

ಆದರೆ ಸೀತಾರಾಮನ ಪ್ರವೇಶದಿಂದಾಗಿ ಹಾಗಾಗಲಿಲ್ಲ. ಬರುವಾಗ ಜಲಜಳಿಂದ ವಿಚಾರ ತಿಳಿದು ಸಿಟ್ಟಾಗಿಯೇ ಬಂದಿದ್ದ ಅವನು, ಸುಧಾಕ ರನ ಕೊನೆ ಮಾತು ಕೇಳುತ್ತಲೂ ವ್ಯಂಗ್ಯವಾಗಿ ಹೇಳಿದ, "ಬಂಧುಗಳು ನಾವಾಗಿದ್ದಕ್ಕೇ ನಿನ್ನಮ್ಮ ಇಲ್ಲಿಟ್ಟ ಹಣ ನಿನಗೆ ಪೂರ್ತಿಯಾಗಿ ಸಿಕ್ಕಿತು. ಹಾಗೆಂದು ನೀನು ಇನ್ನೂ ಉಪದ್ರವ ಕೊಡಲು ಬರಬೇಡ ತಿಳಿಯಿತ ?"

ಸಾಕಷ್ಟು ಎತ್ತರದ ದನಿಯಲ್ಲಿ ಬಂದ ಆ ಮಾತುಗಳ ಖಾರ ಸುಧಾಕರನಿಗೆ ಸೋಕಿ ಅವನು ಕಂಗಾಲಾಗುತ್ತಿದ್ದಾಗ ಜನ್ನಯ್ಯ ಮೆಲ್ಲಗೆ ದನಿ ಎತ್ತಿ ದರು, "ಹಾಗಲ್ಲ ರಾಮು, ಅವನಾದರೂ ಏನು ಮಾಡಬೇಕು ಇಂತಹ ಪರಿಸ್ಥಿತಿಯಲ್ಲಿ ? ಏನೋ ಒಂದು ಆಸೆ ಇಟ್ಟುಕೊಂಡು ಬಂದ ಪಾಪ !"

ಅವರ ಆ ಮಾತುಗಳಿಂದ ಸುಧಾಕರನ ಖಿನ್ನತೆ ತುಸು ಮರೆಯಾಗಿ ಅಲ್ಲಿ ಆಸೆಯ ಕಿರಣವೊಂದು ಮೆಲ್ಲಗೆ ತಲೆ ಎತ್ತಿತಾದರೂ ಸೀತಾರಾಮ ಹಾರಿಸಿ ಬಿಟ್ಟ ಮಾತಿನ ಬಿರುಗಾಳಿ ಆ ಕಿರಣವನ್ನಲ್ಲಿಗೇ ಹೊಸಕಿ ಹಾಕಿತು. "ಪಾಪವಂತೆ ಪಾಪ. ಅಪ್ಪಾ, ನೀವು ಸುಮ್ಮನಿರುತ್ತೀರೋ ಇಲ್ಲವೋ ? ಈವರ ಗಿನ ನಿಮ್ಮ ಕಾರುಭಾರಿನಲ್ಲಿ ಇವನಿಗೂ, ಆ ಸತ್ತ ಕಮಲಮ್ಮನಿಗೂ ಇರಲು ಬಿಟ್ಟಿಯಾಗಿ ಮನೆ ಕೊಟ್ಟಿರಿ. ಅದೂ ಏನು ಒಂದೆರಡು ತಿಂಗಳುಗಳೆ ? ವರ್ಷಾನುಗಟ್ಟಲೆಯಿಂದ ಅವರಲ್ಲಿ ಕೂತರು. ಆ ಮೇಲೆ ಹಳೆ ಬಟ್ಟೆ, ಅದು ಇದೆಂದು ದಾನ



ಮಾಡಿದ್ದಕ್ಕೆ ಲೆಕ್ಕವಿತ್ತೆ? ಇಷ್ಟೆಲ್ಲ ಉಪಕಾರ ಪಡೆದು ವಿದ್ಯಾವಂತನಾಗಿದ್ದು ಸಾಲದೆಂದು ಇದೀಗ ಕೆಲಸದ ಕುರಿತೂ ಸಹಾಯ ಕೇಳಲು ಬಂದಿದ್ದಾನೆ. ನಾಚಿಕೆ ಇಲ್ಲದವ.''

ಮಗ ಅಬ್ಬರಿಸುತ್ತಿದ್ದಂತೇ ಪಾರ್ವತಮ್ಮ ಮಧ್ಯೆಯೇ, "ಸಾಕು, ಸಾಕು" ಎಂದು ತಾವೂ ದನಿ ಎತ್ತರಿಸಿದರಾಗಿ ಆತ ಆ ಕ್ಷಣ ಮೌನ ತಾಳಿದನಾದರೂ, ಒಳಗೆ ಹೋಗುತ್ತಾ ಎಚ್ಚರಿಕೆ ನೀಡಿಯೇ ಹೋದ, "ಮನೆಯೊಳಗೆ ಗೇಯುವವರಿಗೆ ಇಲ್ಲಿ ಗತಿ ಇಲ್ಲವಾದರೂ ಹೊರಗಿನ ಜನರ ರಾಜೋಪಚಾರಕ್ಕೇನು ಕೊರತೆ ಈವರೆಗೂ ಇಲ್ಲಾಗಿರಲಿಲ್ಲ. ಆದರೆ ಇನ್ನು ಆ ಕ್ರಮ ನಡೆಯಲಿಕ್ಕಿಲ್ಲ. ಗೊತ್ತಾಯಿತಲ್ಲ ಅಪ್ಪ.''

ರಾಮುವಾಡಿದ ಆ ಮಾತುಗಳ ಹಿನ್ನೆಲೆಯಲ್ಲಿ ಜಲಜಳ ಬುದ್ಧಿಯ ಪಾಲೇ ಜಾಸ್ತಿ ಇತ್ತಾದರೂ ಸುಧಾಕರ ಮಾತ್ರ ತೀರಾ ವ್ಯಥಿತನಾದ. ತಾನು ಈವರೆಗೂ ಕಂಡಿರದ ರಾಮಣ್ಣನ ಈ ಮುಖದ ಕ್ರೂರತೆಗೆ ಒಳಗೇ ಬೇಯುತ್ತ ಮಾವನೆಡೆಗೆ ನೋಡಿದರೆ, ತನ್ನಂತೇ ಮೋರೆ ಬಾಡಿಸಿಕೊಂಡಿದ್ದ ಆತ, ಆ ಕ್ಷಣವೆ ದಿಟ್ಟಿ ತಪ್ಪಿಸಿದರು. ತಾನಲ್ಲಿ ನಿಂತರೂ ಯಾವುದೇ ಫಲ ಇಲ್ಲವೆಂದು ಅವರ ಆ ವರ್ತನೆಯಿಂದ ಹೊಳೆಯಿತಾಗಿ ಸುಧಾಕರ ಎದ್ದ. ಹಾಗೂ ಚಾವಡಿಯಲ್ಲಿದ್ದ ಇಬ್ಬರನ್ನೂ ಉದ್ದೇಶಿಸಿ, "ಹಾಗಿದ್ದರೆ ನಾನು ಹೋಗುತ್ತೇನೆ,'' ಎನ್ನುತ್ತ ಮುನ್ನಡೆದ.

ಈಗ ಪಾರ್ವತಮ್ಮನವರಿಗೆ ಸಂಕಟವಾಯಿತು. ತುಸುವೆ ಮೊದಲು ಆಕೆ ಅಷ್ಟೆಲ್ಲ ಹೇಳಿದ್ದು ನಿಜವಾಗಿತ್ತಾದರೂ ಅದಕ್ಕೆ ಹಿನ್ನೆಲೆ ಸಂಸಾರ ತಾಪತ್ರಯವೇ ಆಗಿತ್ತಲ್ಲದೆ ಸುಧಾಕರನಲ್ಲಿ ದ್ವೇಷದಿಂದ ಆಕೆ ಹಾಗಂದಿರಲಿಲ್ಲ. ಆದುದರಿಂದಲೆ ಈ ನಡು ಮಧ್ಯಾಹ್ನ ಸುಧಾಕರ ಉಣ್ಣದೆ ಹೊರಟದ್ದನ್ನು ಸಹಿಸದ ಅವರು ತಟ್ಟನೆ ಒತ್ತಾಯಿಸಿದರು.

"ಈ ಬಿಸಿಲಿಗೆ ಎಲ್ಲಿಗೆ ಈಗ? ಸ್ವಲ್ಪ ಉಂಡು ನಂತರ ಹೋಗುವೆಯಂತೆ.''

ಮೆಟ್ಟಲಿಳಿಯುತ್ತಿದ್ದ ಸುಧಾಕರ, ಅವರ ಮಾತಿಗೆ ಆ ಕ್ಷಣವೇ ಬದಲಿತ್ತ, "ಬಿಸಿಲ ಅತ್ತೆ? ಅದೆಲ್ಲ ಅಮ್ಮ ಇದ್ದಾಗ ಮಾತ್ರ.'' ಹಾಗೆನ್ನುತ್ತಲೆ ಅಂಗಳ ಸೇರಿದ ಆತ, ಕ್ಷಣದೊಳಗೆ ದಣಪೆ ತೆಗೆದು ಮರೆಯಾಗಿಬಿಟ್ಟಾಗ, ಅವನ ದನಿಯ ನಡುಕ ಗಮನಿಸಿ ವಿಹ್ವಲರಾಗಿದ್ದ ಪಾರ್ವತಮ್ಮ ತಡೆಯದೆ 'ಪಾಪದ್ದು' ಎನ್ನುತ್ತ ಜನ್ನಯ್ಯ ಕೂತಿದ್ದೆಡೆಗೆ ನೋಡಿದರೆ ಅಲ್ಲಿ ಯಾರೂ ಇರಲಿಲ್ಲ.

"ಎಲ, ಆಗಲೇ ಎಲ್ಲಿಗೆ ಹೋಗಿ ಆಯಿತಪ್ಪ? ವಿಚಿತ್ರದ ಜನ.....'' ಆಕೆ ತಮ್ಮಷ್ಟಕ್ಕೇ ಗೊಣಗಿ ಒಳಗೆ ಹೊರಟಾಗ ಮನಸ್ಸಿನೊಳಗಿದ್ದುದು ಸುಧಾಕರನೆ!



ಸುಧಾಕರ ಬಂದು ಹೋಗಿ ಕೆಲವಾರು ತಿಂಗಳುಗಳೇ ದಾಟಿದ್ದವು. ಈ ಅವಧಿಯಲ್ಲಿ ಜನ್ನಯ್ಯನವರಲ್ಲಿ ಏನೋ ಬದಲಾವಣೆ ಆಗಿದೆ ಎಂದೆಷ್ಟೋ ಸಲ ಪಾರ್ವತಮ್ಮ ಅಂದುಕೊಂಡಿದ್ದರು. ಜನ್ನಯ್ಯ ಸ್ವಭಾವತಃ ಸರಸಿಗಳಲ್ಲವಾಗಿದ್ದರೂ ಸಿಡುಕರೂ ಆಗಿರಲಿಲ್ಲ. ಯಾವುದೇ ಕೆಲಸದಲ್ಲಾದರೂ ಸಮಾಧಾನ ಅವರ ಹುಟ್ಟುಗುಣ. ಅಂತಹ ಜನ್ನಯ್ಯ ಈಗೀಗ ಸಣ್ಣಪುಟ್ಟದಕ್ಕೂ ಸಿಡುಕುವುದೋ ಬೈಯುವುದೋ ಮಾಡುವುದು ಪಾರ್ವತಮ್ಮನಿಗೆ ಸೋಜಿಗ ಹುಟ್ಟಿಸಿತ್ತಾದರೂ, ಅದಕ್ಕೆ ಕಾರಣವೂ ಹೊಳೆಯದೆ ಇದ್ದಿರಲಿಲ್ಲ. ಮಗ- ಸೊಸೆಯರ ಅತೃಪ್ತಿ, ಅಸಮಾಧಾನಗಳೇ ಜನ್ನಯ್ಯನವರ ವ್ಯಗ್ರತೆಗೆ ಕಾರಣವಿರಬೇಕೆಂದು ತಮ್ಮೊಳಗೇ ತರ್ಕಿಸಿದ್ದ ಆಕೆ, ಇರುವುದು ಒಬ್ಬಳು ಸೋದರಿ. ಅವಳಿಗೆ ಸ್ವಲ್ಪ ಅದ್ದೂರಿ ಮಾಡಿದರೆ ಇವ ಸಂಭ್ರಮಪಡುವುದು ಬಿಟ್ಟು ಹೆಂಡತಿ ಮಾತಿಗೆ ತಾಳ ಹಾಕಿ ಹೆತ್ತವರಿಗೂ ನೋವು ಕೊಡುತ್ತಿದ್ದಾನಲ್ಲ' ಎಂದುಕೊಂಡು ತಮ್ಮಲ್ಲಿಯೇ ವ್ಯಥೆಪಟ್ಟಿದ್ದರು.

ಹೀಗಿದ್ದಾಗಲೇ ಮಳೆಗಾಲ ಪ್ರಾರಂಭವಾಯಿತು. ಆ ಸಲ ಹಿಡಿದ ಮಳೆ ಬಿಡದೆ ಇದ್ದು ತೋಟದಲ್ಲಿ ಕೊಳೆ ರೋಗದ ಲಕ್ಷಣ ಕಾಣಿಸಿಕೊಂಡಾಗ ಜನ್ನಯ್ಯ ಅಧೀರರಾಗಿ ಯಾವಾಗಿನ ರೂಢಿಗಿಂತ ಒಂದು ಸಲ ಜಾಸ್ತಿಯಾಗಿಯೇ ಮದ್ದು ಸಿಂಪರಣೆ ಮಾಡಿಸುವ ಯೋಚನೆ ಮಾಡಿದರು. ಹಿಡಿದ ಮಳೆ ತುಸುವಾದರೂ ಬಿಟ್ಟು ಹೊಳವಾಗದೆ ಇದ್ದಲ್ಲಿ ಅಡಿಕೆಗೆ ಮದ್ದು ಬಿಡಿಸಲಾಗದೆಂದು ಅವರಿಗೆ ತಿಳಿದೇ ಇತ್ತು. ಅದಕ್ಕೆ ತಕ್ಕ ಹಾಗೆ ಮೈಲುತುತ್ತು

ತಂದಿಟ್ಟುದೂ ಖಾಲಿಯಾಗಿತ್ತು. ಹೀಗಿದ್ದರೂ ಸ್ವಲ್ಪ ಬಿಸಿಲು ಕಂಡರೆ ಮದ್ದು ಬಿಡಿಸುವ ಆಸೆ ಹೊತ್ತ ಜನ್ನಯ್ಯ, ಆ ಬೆಳಗ್ಗೆ ಮೈಲುತುತ್ತು ಖರೀದಿಗಾಗಿ ಪೇಟೆಗೆ ಹೊರಟರು. ಅಲ್ಲಿಯೋ, ಮೈಲುತುತ್ತಿನ ಕ್ರಯ ಒಮ್ಮಿಂದೊಮ್ಮೆಗೆ ಏರಿಬಿಟ್ಟಿತ್ತು. ಹಾಗೆಂದು ಬರಿಗೈಯಲ್ಲಿ ಮರಳಲುಂಟೆ ? ಎಂದು ಜನ್ನಯ್ಯ ನಾಲ್ಕಾರು ಅಂಗಡಿ ತಿರುಗಿ ಕ್ರಯ ವಿಚಾರಿಸಿದರಾದರೂ ಏನೂ ಫಲ ಸಿಗಲಿಲ್ಲ. ಅಂತೂ ಬಂದುದಕ್ಕೆ ಒಂದಷ್ಟನ್ನು ಖರೀದಿಸಿದ ಅವರು, ಅಷ್ಟು ಹೊತ್ತು ಅಲೆದಾಡಿದ ಆಯಾಸ, ಆಸರುಗಳ ಪರಿಹಾರಕ್ಕೆ ಹೋಟಲೊಂದನ್ನು ಹೊಕ್ಕರು. ಅಲ್ಲಿ ಕಾಫಿಗೆ ಹೇಳಿ ಅದರ ನಿರೀಕ್ಷೆಯಲ್ಲಿರುವಾಗ ಕಂಡ ಅವನು.

ಮಾಸಲು ವಸ್ತ್ರಗಳನ್ನು ಧರಿಸಿದ್ದು, ಒಣಕಲು ಕಾಷ್ಠದಂತಿದ್ದ ಅವನನ್ನು ನೋಡಿದೊಡನೆ ಜನ್ನಯ್ಯ ಬೆಚ್ಚಿಬಿದ್ದರು. 'ಓ ದೇವರೆ, ಆತ ನಿಜವಾಗಿಯೂ ಸುಧಾಕರನೆ ?' ಎದೆ ಒಳಗಿನಿಂದಲೇ ಗುದ್ದಿಕೊಂಡು ಬಂದ ಸಂಕಟ ಅವರನ್ನು ಹಿಂಡುತ್ತಿದ್ದಾಗಲೇ ಕಾಫಿ ಬಂತು. ಆದರೆ ಜನ್ನಯ್ಯನವರಿಗೆ ಆ ಗೊಡವೆಯೇ ಇರಲಿಲ್ಲ. ಬಿಟ್ಟ ಕಣ್ಣಿನಿಂದ ಅವರು ಅತ್ತಲೇ ನೋಡುತ್ತಿದ್ದಾಗ ಅವನು ಯಾತಕ್ಕೋ ಇತ್ತ ತಿರುಗಿದ ಹಾಗೂ ಜನ್ನಯ್ಯನವರನ್ನಲ್ಲಿ ಕಂಡು ಕ್ಷಣಕಾಲ ಮರವಟ್ಟವನು, ಮರುಕ್ಷಣವೆ ಅಲ್ಲಿಂದ ಹೊರಟುಹೋದ. ಹೋಗುವ ಮುನ್ನ ಅವನು ಬೀರಿದ ದೃಷ್ಟಿ, ಆ ಮೋರೆಯ ವಿವರ್ಣತೆಯನ್ನೇ ನೆನೆಸುತ್ತ ಜನ್ನಯ್ಯ ಅಷ್ಟು ಹೊತ್ತು ಹಾಗೇ ಕೂತವರು, ಮಾಣಿ ಎರಡು ಸಲ ಅತ್ತಿತ್ತ ಹೋದುದರಿಂದ ಇಹಲೋಕಕ್ಕೆ ಮರಳಿದರು ಮತ್ತು ಆ ವೇಳೆಗೆ ತಣ್ಣಗಾಗಿದ್ದ ಕಾಫಿಯನ್ನು ಒಂದೇ ಗುಟುಕಿಗೆ ಇಳಿಸಿ ಬಿಲ್ ತೆರಲು ಗಲ್ಲೆಯ ಬಳಿ ಬಂದರು. ಅಲ್ಲಿ ಬೇಕೆಂದೇ ಕ್ಷಣಕಾಲ ತಡ ಮಾಡಿ, ಆಗಲೂ ಅವನು ಕಾಣಿಸದಾಗ 'ನನಗೆ ಮರುಳಲ್ಲವೆ ?' ಎಂದುಕೊಂಡು ಹಣ ತೆತ್ತು ಹೊರಗೆ ಕಾಲಿರಿಸಿದರು. ಆಗ ಕೇಳಿತು ಹಿಂದಿನಿಂದ ಯಜಮಾನನ ಅಬ್ಬರ. "ಏ ಸುಧಾಕರಾ.... ಎಲ್ಲಿ ಸತ್ತೆಯೋ ? ಸ್ವಲ್ಪ ಬಿಡುವು ಸಿಗುವುದಕ್ಕಿಲ್ಲ. ಸೂ...ಮಗ ಎಲ್ಲಾದರೂ ನಿಂತರನೇ..."

ಕಿವಿಗಳಿಗೆ ರಾಚಿದ ಆ ಬೈಗಳ ಹಿಂದಿನ ಸುಧಾಕರನ ಅಸಹಾಯಕತೆ ಮನಸ್ಸನ್ನು ಗೀರುತ್ತಿರುವಾಗಲೇ ಜನ್ನಯ್ಯ ಸ್ಟ್ಯಾಂಡಿಗೆ ಬಂದರು.



ಮಧ್ಯಾಹ್ನದ ಹೊತ್ತಿಗೆ ಮನೆ ಸೇರಿದ ಗಂಡ ಖಿನ್ನರಾಗಿದ್ದುದನ್ನು ಕಂಡು ಪಾರ್ವತಮ್ಮ ಸ್ವಲ್ಪ ಆತಂಕಗೊಂಡರಾದರೂ ನಂತರ ಮೈಲುತುತ್ತಿನ ಬೆಲೆ ಏರಿಕೆ ವಿಚಾರವನ್ನು ಅವರೇ ಹೇಳಿದಾಗ 'ಓ, ಹೀಗೋ ಸಂಗತಿ' ಎಂದುಕೊಂಡರು. ಆದರೆ ವಿಷಯ ಅದಲ್ಲ ಎಂದವರಿಗೆ ಆ ಸಂಜೆಯೆ ತಿಳಿಯಿತು. ಚಾವಡಿ ಜಗಲಿಯಲ್ಲಿ ಕೂತಿದ್ದ ಜನ್ನಯ್ಯ ಇಳಿದನಿಯಲ್ಲಿ ಸುಧಾಕರನನ್ನು ತಾವು ಕಂಡ ಸುದ್ದಿ ಹೇಳಿ, ನಂತರ ತಮ್ಮಷ್ಟಕ್ಕೇ ಎಂಬಂತೆ "ಆ ದಿನ ಹಾಗೇ ಕಳಿಸಿದೆನಲ್ಲ, ಆ ಹಣವನ್ನಷ್ಟು ಕೊಟ್ಟಿದ್ದರೆ" ಎಂದೂ ಪೇಚಾಡಿಕೊಂಡಾಗ ಆಕೆಗೂ 'ಪಾಪ' ಎನ್ನಿಸಿತು. ಆದರೆ ಹಾಗನ್ನಿಸಿದ ಮರುಕ್ಷಣವೇ 'ಇವರ ದಾಕ್ಷಿಣ್ಯ ತೀರಾ ಹೆಚ್ಚಾಯಿತಪ್ಪ. ಅದೇನು ಒಂದೆರಡು ರೂಪಾಯಿಗಳೆ ?' ಎಂಬ ಸಿಟ್ಟೂ 'ಎಲ್ಲಾದರೂ ಈ ಸಂಗತಿ ರಾಮು ಕೇಳಿಸಿಕೊಂಡರೆ ?' ಎಂಬ ಭೀತಿಯೂ ಜತೆಯಾಗಿಯೇ ಜನಿಸಿದವು.

ಎಂದೇ ಆಕೆ ಸ್ವಲ್ಪ ದೂರಗುದನಿಯಲ್ಲಿ, "ನೀವೊಮ್ಮೆ ಸ್ವಲ್ಪ ಸುಮ್ಮನಿರುತ್ತೀರಾ ? ಇಷ್ಟಕ್ಕೂ ಆ ಹಣ ಕೊಟ್ಟಿದ್ದರೂ ಅವನಿಗೇ ಕೆಲಸ ಸಿಗುತ್ತಿತ್ತೆಂದು ಹೇಗನ್ನುವುದು ? ನಾನನ್ನುವುದಾದರೆ ಅದೆಲ್ಲ ಅವರವರು ಪಡೆದುಕೊಂಡು ಬಂದದ್ದು. ಎಲ್ಲ ಕರ್ಮಫಲ," ಎಂದರು. "ಕರ್ಮಫಲವೆ ? ಹಾಗಿದ್ದರೆ ಎಲ್ಲವೂ ಅದರಿಂದಲೇಯೆ ?" ಜನ್ನಯ್ಯ ತಮಗೇ ಪ್ರಶ್ನೆ ಹಾಕಿಕೊಂಡ ಹಾಗೆ ಹೇಳುತ್ತಿದ್ದಾಗ ಅಲ್ಲಿಗೆ ಬಂದ ರಾಮು.

"ಏನಪ್ಪ ಅದು ?" ಎಂದ. ಜನ್ನಯ್ಯ ಅದಕ್ಕೆ ತಕ್ಷಣ ಏನೂ ಹೇಳಲಿಲ್ಲ. ಆ ವೇಳೆಗೆ ಇನ್ನು ಎಲ್ಲ ವಿಚಾರ ತಿಳಿದು ರಾಮು ಸಿಟ್ಟಿಗೇಳುವುದು ಬೇಡ ಎಂದುಕೊಂಡ ಪಾರ್ವತಮ್ಮ ತಾವೇ ಮುಂದಾಗಿ ದನಿ ಎತ್ತಿದರು.

ಆಕೆ ಚುಟುಕಿನಲ್ಲಿ ವಿವರಿಸಿದ ವಿಷಯವನ್ನು ಕೇಳಿದ ಅವನು, ತನ್ನಪ್ಪನ ಮೋರೆಯ ವ್ಯಥೆಯನ್ನು

ಗಮನಿಸಿ ತಟ್ಟನೆ ಪ್ರಶ್ನಿಸಿದ, "ಅದು ನಮ್ಮಿಂದಾಗಿಯೇ ಎಂದು ಅಪ್ಪನ ಅಭಿಪ್ರಾಯವೋ ?"

"ಛೇ, ಹಾಗೇನಿಲ್ಲ," ಮಗನ ಮಾತಿಗೆ ಆಕೆ ಉತ್ತರಿಸುತ್ತಿದ್ದಾಗಲೇ ರಾಮು ಮತ್ತ ತುಸು ಏರಿದ ದನಿಯಲ್ಲಿ ನುಡಿದ, "ಹಾಗಲ್ಲವಾದರೆ ಒಳ್ಳೆಯದೇ. ಆದರೆ ಆ ಬಗ್ಗೆ ಅಪ್ಪ ಇನ್ನೇನೂ ಯೋಚನೆಗೆ ತೊಡಗುವುದು ಬೇಡ."

ಅಷ್ಟು ಹೇಳಿದ ರಾಮು ಒಳಗೆ ಹೋದ ನಂತರ ಪಾರ್ವತಮ್ಮನೂ ಎದ್ದವರು, ತಾವೂ ಒಳಗೆ ಹೋಗಲಣಿ ಆಗುತ್ತ ಮೆಲ್ಲಗೆ ಹೇಳಿದರು, "ಸುಮ್ಮಗೆ ಆ ಬಗ್ಗೆ ಇನ್ನೂ ತಲೆಬಿಸಿ ಮಾಡಿಕೊಳ್ಳುತ್ತ ಕೂರಬೇಡಿ. ಮನೆ ಮಕ್ಕಳ ವೈರ ಕಟ್ಟಿಕೊಂಡು ಹೊರಗಿನವರನ್ನು ಉದ್ಧಾರ ಮಾಡುವ ಜಂಬರ ನಿಮಗಾದರೂ ಏಕೆ ಬೇಕು ?"

ಜನ್ನಯ್ಯ ಆ ಮಾತಿಗೇನೂ ಬದಲೀಯಲಿಲ್ಲ.



ದಿನಗಳು ಉರುಳಿ ತಿಂಗಳುಗಳಾದವು. ತಿಂಗಳುಗಳು ವರ್ಷದ ಒಡಲನ್ನು ತುಂಬಿಸುತ್ತಲೆ ಇರುವಾಗ ಜನ್ನಯ್ಯನವರ ಮನೆ ಒಳಗೂ ಹೊರಗೂ ಹಲವಾರು ಘಟನೆಗಳು ನಡೆದವು. ಅವುಗಳಲ್ಲಿ ಮುಖ್ಯವಾಗಿದ್ದು ಮದ್ದು ಬಡಿಸಲೂ ಅವಕಾಶವಿಲ್ಲದಂತೆ ಮಾರಿಮಳೆ ಸುರಿದು ತೋಟದ ಅಡಿಕೆಯೆಲ್ಲ ಕೊಳೆರೋಗಕ್ಕೆ ತುತ್ತಾಗಿದ್ದು ಹಾಗೂ ಸರೋಜ ಚೊಚ್ಚಲ ಹೆರಿಗೆಗೆ ತವರಿಗೆ ಬಂದದ್ದು. ಬಸಿರಿ ಹೆಣ್ಣಿಗೆ ಅವಳ ಮನೆಯವರು ಗಡದ್ದಿನಲ್ಲಿ ಸೀಮಂತ ಮಾಡಿಸಿಯೇ ಕಳಿಸಿದ್ದರು. ಅವರಂತಲ್ಲದೆ ಇದ್ದರೂ ಬಸಿರಿಗೊಂದು ಸಮ್ಮಾನದ ಹೆಳೆಯಲ್ಲಿ ಒಂದು ಪೂಜೆ ಮಾಡಿಸಿ ಕೆಲವರನ್ನಾದರೂ ಊಟಕ್ಕೆ ಕರೆಯಬೇಕೆಂದು ಪಾರ್ವತಮ್ಮನವರಿಗೆ ಆಸೆಯಿತ್ತು. ಆದರೆ ರಾಮು, ಜಲಜ ಆ ಕುರಿತು ಆಸಕ್ತಿ ವಹಿಸಿರಲೇಇಲ್ಲ. ಅದಕ್ಕೆ ಸರಿಯಾಗಿ ಗಂಡನಲ್ಲಾದರೂ ಹೇಳೋಣವೆಂದರೆ ಅವರ ಕ್ರಮವೂ ಈಚೀಚೆಗೆ ಒಂದು ತೆರನಾಗಿತ್ತು. ಮೊದಲೆಲ್ಲ ರಾತ್ರಿ ಮಲಗಿದ ತಕ್ಷಣ ಗಾಢನಿದ್ದೆ ಮಾಡುತ್ತಿದ್ದ ಆತ ಈಗೀಗ ರಾತ್ರಿ ಕನವರಿಸಿಕೊಳ್ಳುವುದು ಮಾಮೂಲಾಗಿಬಿಟ್ಟಿತ್ತು. ಆ ಕನವರಿಕೆಗಳನ್ನು ಎಷ್ಟೋ ಸಲ ಪಾರ್ವತಮ್ಮನೂ ಕೇಳಿದ್ದರಾದರೂ ಅದೇನೆಂದವರಿಗೆ ಸ್ಪಷ್ಟವಾಗಿರಲೇಇಲ್ಲ. ಇರುಳಿನ ಸ್ಥಿತಿ ಹೀಗಾದರೆ ಹಗಲು ಇನ್ನೊಂದು ರೀತಿ. ತೋಟಕ್ಕೆ ಹೋದರೂ ಆಯ್ತು, ಬಿಟ್ಟರೂ ಆಯ್ತು. ಸೀತಾರಾಮ ಇದ್ದ ಕಾರಣ ಆ ವಿಚಾರ ಹೆಚ್ಚು ತೊಂದರೆ ಕಾಣಲಿಲ್ಲವಾದರೂ ಸದಾ ಮಂಕರಂತೆ ಚಾವಡಿ ಜಗಲಿಯಲ್ಲಿ ಕೂತಿರುತ್ತಿದ್ದ ಪತಿಯಲ್ಲಿ ಏನು ಹೇಳಿದರೂ ವ್ಯರ್ಥವಾದೀತೆನ್ನಿಸಿ ಆಕೆ ಸುಮ್ಮನಾಗಿದ್ದರು. ಹೀಗಿದ್ದರೂ ಜನ್ನಯ್ಯನವರ ಅನಾಸಕ್ತಿ ಅವರಲ್ಲೂ ಆತಂಕ ಹುಟ್ಟಿಸಿದ್ದರಿಂದ ಒಮ್ಮೆ ಮನೆಗೆ ಬಂದಿದ್ದ ತಮ್ಮ ಎರಡನೆ ಮಗ ಶ್ರೀಧರನಲ್ಲಿ ಹೇಳಿಕೊಂಡರು. ತಂದೆಯ ಪರಿವರ್ತನೆಯನ್ನು ಶ್ರೀಧರನೂ ಗಮನಿಸಿದ್ದ ಹಾಗೂ ಇತ್ತೀಚೆಗೆ ಅಣ್ಣ ರಾಮುವೇ ಮನೆಯ ಹೆಚ್ಚಿನ ವ್ಯವಹಾರಗಳಲ್ಲಿ ಕೈಯಾಡಿಸುತ್ತಿರುವುದನ್ನು ಅರಿವಿಗೆ ತಂದುಕೊಂಡಿದ್ದ. ಸರೋಜಳ ಲಗ್ನ ಕಳೆದ ನಂತರ ಮನೆ ಒಳಗೆ ನಡೆದ ಹಗರಣ, ಆ ಮೇಲೆ ತೋಟದ ಉತ್ಪತ್ತಿಗೆ ಬಿದ್ದ ಪೆಟ್ಟು ಇದೆಲ್ಲವೂ ಅವನಿಗೂ ತಿಳಿದಿತ್ತಾಗಿ, ಅಪ್ಪನ ಅನಾಸಕ್ತಿಗೆ ಆ ಘಟನೆಗಳೂ ಕಾರಣ ಇದ್ದೀತು ಎಂದವನು ಊಹಿಸಿಯೇ ಇದ್ದ. ಹಾಗೂ ಪಾರ್ವತಮ್ಮ ಅವನಲ್ಲಿ ಈ ಬಗ್ಗೆ ತೋಡಿಕೊಂಡಾಗ ತನ್ನ ಅನಿಸಿಕೆಗಳನ್ನು ಅವರಲ್ಲಿ ಹೇಳಿದನಲ್ಲದೆ, "ನೋಡೋಣಮ್ಮ ಇನ್ನೂ ಸ್ವಲ್ಪ ಸಮಯ; ಹಾಗೆ ಅವರ ದೈಹಿಕ ಆರೋಗ್ಯ ಚೆನ್ನಾಗಿಯೇ ಇದೆ. ನನ್ನಂದಾಜಿನಂತೆ ನಮ್ಮ ತೋಟದ ಪರಿಸ್ಥಿತಿ ಒಳ್ಳೆಯದಾಗುವಾಗ ಅವರೂ ಚೇತರಿಸಿಕೊಂಡಾರು," ಎಂದೂ ಸಮಾಧಾನ, ಧೈರ್ಯಗಳನ್ನವರಿಗೆ ತುಂಬಿದ.

ಹಾಗಿದ್ದರೂ ಶ್ರೀಧರ ತನ್ನೊಳಗೇ ಅಸಮಾಧಾನಗೊಂಡ ಒಂದು ವಿಚಾರವಿತ್ತು. ಅದು ಮನೆ ಆಡಳಿತದಲ್ಲಿ ಅಣ್ಣನ ಕಾರುಭಾರು. ಇದು ಹೀಗೆಯೇ ಮುಂದುವರೆದರೆ ನಾಳೆ ಪಾಲಾಗುವ ವೇಳೆಗೆ ತನಗಾಗಲಿ ದಿವಾಕರನಿಗಾಗಲಿ ಏನೂ ಸಿಗಲಿಕ್ಕಿಲ್ಲ. ಒಬ್ಬಳೇ ಒಬ್ಬ ತಂಗಿಯ ವಿವಾಹವನ್ನು ಗಡದ್ದಿನಿಂದ ಮಾಡಿದ್ದಕ್ಕೇ ಆಕ್ಷೇಪಿಸಿದ ಭೂಪ ಆತ. ಇನ್ನು ತಾವಿಬ್ಬರೂ ಅವನ ತಮ್ಮಂದಿರು. ಮೇಲಾಗಿ ಮನೆಯಿಂದ ಹೊರಗೇ ಇರುವವರು.

ಹಾಗಿರುವಾಗ ಅಪ್ಪನ ಈ ವರ್ತನೆಯ ಉಪಯೋಗ ಪಡೆದ ಅಣ್ಣ ಒಳಗೊಳಗೇ 'ಗಂಟು' ಕಟ್ಟಿಕೊಂಡರೆ ನಾಳೆ ತಮಗೇನು ಗತಿ? ಅದರಲ್ಲಿಯೂ ದಿವಾಕರನಿಗಾದರೆ ಅವನ ವೈದ್ಯವೃತ್ತಿ ಇದೆ. ತನಗೋ? ಇರುವುದೊಂದು ಮಾಸ್ತರಿಕೆ. ಆದ್ದರಿಂದಲೇ ತಾನು ಈ ಬಗ್ಗೆ ಹೆಚ್ಚಿನ ಎಚ್ಚರಿಕೆ ವಹಿಸಬೇಕು ಎಂದೆಲ್ಲ ಯೋಚಿಸುತ್ತಲೇ ಇದ್ದ ಅವನು, ಕೊನೆಗೂ ಉಪಾಯಾಂತರವಾಗಿ ರಾಮುವಿನಲ್ಲಿ ಅಪ್ಪನ ವರ್ತನೆ ಬಗ್ಗೆ ಪ್ರಸ್ತಾಪಿಸಿದನಲ್ಲದೆ ರಾಮುವಿನ ಆಡಳಿತದ ಕುರಿತೂ ತುಸು ಪ್ರಶಂಸೆ ಮಾಡಿದ ಹಾಗೂ ತನ್ನ ಮಾತಿನಿಂದ ಅಣ್ಣ ಸಹಜವಾಗಿಯೆ ಖುಷಿಗೊಂಡಾಗ ಸಲಹೆ ನೀಡುವವನಂತೆ ತನ್ನ ಮನಸ್ಸನ್ನು ಬಿಚ್ಚಿದ.

"ಅಣ್ಣ ವ್ಯವಹಾರಗಳನ್ನೆಲ್ಲ ಇನ್ನು ನೀನೇ ನಡೆಸುವುದೇ ಸರಿ ಎಂದು ನನ್ನ ಅಭಿಪ್ರಾಯ. ಆದರೆ ಅಪ್ಪ ಎಷ್ಟಾದರೂ ಹಿರಿಯರು. ನಾವೆಲ್ಲ ಇಷ್ಟರ ಮಟ್ಟಿಗೆ ಆಗಿದ್ದು ಅವರ ದುಡಿಮೆಯಿಂದಲೇ. ಆದ್ದರಿಂದಲೆ ಏನು ಮಾಡುವುದಿದ್ದರೂ ಒಂದು ಮಾತು ಅವರಲ್ಲಿ ಹೇಳಿಯೇ ಮಾಡಿಬಿಡು. ಆಗ ಅವರನ್ನು ಕಡೆಗಣ'ಸಿದೆ ನೀನು ಎಂದವರಿಗೆ ಕಾಣಲಿಕ್ಕೂ ಇಲ್ಲ. ಅಲ್ಲವೆ?" ಎಂದವನು ಹೇಳಿದಾಗ ರಾಮುವಿಗೆ ಅದರಲ್ಲಿ ತಪ್ಪೇನೂ ಕಾಣಲಿಲ್ಲವಾಗಿ ಅವನೂ ಒಪ್ಪಿದ.

ಅಂತೂ ಈ ಕ್ರಮದಿಂದ ಏನಿಲ್ಲವಾದರೂ ಹಣದ ವಹಿವಾಟು ಅಪ್ಪನಿಗೆ, ಅವರಿಂದ ಅಮ್ಮನಿಗೆ ತಿಳಿದೀತು. ಅಮ್ಮನ ತನಕ ಬಂದರೆ ಆಮೇಲಿನದು ವಿಶೇಷ ತೊಂದರೆ ಇಲ್ಲ. ಇಷ್ಟಕ್ಕೂ ಅಪ್ಪನೂ ಪೇಟೆ ವ್ಯವಹಾರಗಳನ್ನು ಪೂರ್ತಿಯಾಗಿ ಬಿಟ್ಟಿಲ್ಲವಲ್ಲ? ಬರೀ ತೋಟ ತಿರುಗಿ, ಅಡಿಕೆ ಹೆಕ್ಕಿ ಆಳುಗಳಿಗೆ ಕೆಲಸ ಹೇಳಿದ ತಕ್ಷಣ ಅಣ್ಣನಿಗೇನೂ ಯಜಮಾನಿಕೆ ಬಂದಂತಾಗಲಿಲ್ಲ ಎಂಬಿತ್ಯಾದಿಯಾಗಿ ತನ್ನೊಳಗೇ ತರ್ಕಿಸುತ್ತ ಶ್ರೀಧರ ಹೊರಟು ಹೋದ. ಆ ಮೇಲಿನ ಕೆಲವು ದಿನಗಳಲ್ಲಿಯೆ ಸರೋಜ ಹೆಣ್ಣುಮಗು ಹಡೆದಳು. ಹೆರಿಗೆ ಆಸ್ಪತ್ರೆಯಲ್ಲಿಯೆ ಆಗಿತ್ತಾದರೂ ಸುಲಭದಲ್ಲಿ ಆಗಿದ್ದುದರಿಂದ ಎಂಟು ದಿನಗಳ ಒಳಗೇ ಬಾಣಂತಿ, ಮಗು ಮನೆಗೆ ಬಂದರು. ಹಳ್ಳಿಗಳಲ್ಲಾಗಲೀ ಪೇಟೆಗಳಲ್ಲಾಗಲೀ ಹೆತ್ತ ಹಾಗೂ ಸತ್ತ ಸೂತಕಾಚರಣೆ ಹನ್ನೊಂದು ದಿನಗಳ ತನಕ.

ಇಲ್ಲಂತೂ ಪಾರ್ವತಮ್ಮ ತುಸು ಹಳಬರೇ ಆಗಿದ್ದ ಕಾರಣ, ಸೂತಕ ಶುದ್ಧಿ ಆಗುವವರೆಗೆ ಆಕೆ ಬಾಣಂತಿಯನ್ನು ಹೊರಸುತ್ತಿನ ಕೋಣೆ ಒಂದರಲ್ಲಿ ಇರಲು ವ್ಯವಸ್ಥೆ ಮಾಡಿದರು. ಸರೋಜಳಿದ್ದ ಆ ಕೋಣೆ, ಮೊದಲು ಕಮಲಮ್ಮ ಇರುತ್ತಿದ್ದ ಕೋಣೆಗೆ ಹತ್ತಿರವಾಗಿತ್ತು. ಹಳ್ಳಿಗರ ಪ್ರಕಾರ ಸಹಜವಲ್ಲದ ಸಾವು ಸತ್ತಿದ್ದ ಕಮಲಮ್ಮನ ಕೋಣೆಯ ಹತ್ತಿರವೆ ಬಾಣಂತಿಯನ್ನು ಮಲಗಿಸಲು ಪಾರ್ವತಮ್ಮನಿಗೆ ಒಳಗಿಂದೊಳಗೆ ತುಸು ಅಂಜಿಕೆ ಇದ್ದುದು ನಿಜವೇ. ಆದರೆ ಆ ಮನೆಯಲ್ಲಿ ಅದಕ್ಕಿಂತ ಹೆಚ್ಚಿನ ವ್ಯವಸ್ಥೆಯನ್ನು ಸೂತಕ ಶುದ್ಧಿ ಆಗುವವರೆಗಾದರೂ ಮಾಡುವಂತೆ ಇರಲಿಲ್ಲ. ಅದೂ ಅಲ್ಲದೆ, ಆಕೆ ಇಲ್ಲವಾಗಿ ವರ್ಷ ಎರಡೇ ಕಳೆದರೂ ಈವರೆಗೂ ಯಾವುದೇ ತೊಂದರೆ ಕಾಣ'ಸಿರಲಿಲ್ಲ. ಹೀಗಾಗಿ ತಮ್ಮಲ್ಲಿಯೆ ಧೈರ್ಯ ತಂದುಕೊಂಡಿದ್ದ ಪಾರ್ವತಮ್ಮ 'ಇಷ್ಟಕ್ಕೂ ಸರೋಜ ಇಲ್ಲಿರುವುದು ಮೂರೇ ದಿನ. ಆಮೇಲೆ ಸೂತಕ ಶುದ್ಧಿ ಸ್ನಾನ ಮಾಡಿ ಒಳಗೆ ಬರುತ್ತಾಳಲ್ಲ' ಎಂದುಕೊಳ್ಳುತ್ತ ಮಗಳನ್ನಲ್ಲಿಯೆ



ಮಲಗಿಸಿದರು.

ಆ ದಿನಗಳಲ್ಲಿ ಸರೋಜ ಯಾವುದೇ ತೊಂದರೆ ಅನುಭವಿಸದೆ ಒಳಗೆ ಬಂದಳು. ಆದರೆ ಪಾರ್ವತಮ್ಮ ಒಂದು ವಿಚಿತ್ರವನ್ನು ಆ ಎಡೆಯಲ್ಲಿ ಗಮನಿಸಿದರು. ಮಗಳು ಹಡೆದ ಸಡಗರದಲ್ಲಿ, ತಮ್ಮ ಹಳ್ಳಿಯಿಂದ ಹತ್ತು ಮೈಲಿ ದೂರದ ಆಸ್ಪತ್ರೆಗೆ ದಿನವಹಿ ಎಂಬಂತೆ ಹೋಗಿ ಬರುತ್ತಿದ್ದ ಜನ್ನಯ್ಯ, ಅವಳು ಶಿಶುವಿನೊಂದಿಗೆ ಮನೆಗೇ ಬಂದಾಗ, ಅವಳಿದ್ದೆಡೆಗೆ ಕಾಲು ಕೂಡ ಹಾಕಲಿಲ್ಲ. ಹಳ್ಳಿಗಳಲ್ಲಿ ಬಾಣಂತಿ ಕೋಣೆಯತ್ತ ಗಂಡಸರ ಇಂತಹ ವರ್ತನೆ ಸಾಮಾನ್ಯವೇ ಆಗಿದ್ದರೂ, ಜನ್ನಯ್ಯನವರಿಗೆ ಮಗಳ ಮೇಲಿದ್ದ ಪ್ರೀತಿಯಾಳ ತಿಳಿದಿದ್ದ ಪಾರ್ವತಮ್ಮನವರಿಗೆ 'ಇದರಲ್ಲಿ ಏನೋ ಇದೆ' ಎನ್ನಿಸದೆ ಇರಲಿಲ್ಲ.

ಅದಕ್ಕೆ ತಕ್ಕಂತೆ ಸರೋಜ ಒಳಗಿನ ಕೋಣೆಗೆ ಬಂದ ನಂತರ ಜನ್ನಯ್ಯ ಮತ್ತೆ ಅಲ್ಲಿಗೆ ಎಡತಾಕ ತೊಡಗಿದರು. ಆದರೆ ತಾವು ಗಮನಿಸಿದ್ದ ವಿಚಾರದಲ್ಲಿ ಮತ್ತೆ ಕೂಡ ಅವರ ನಡತೆ ಹಾಗೆಯೇ ಇದೆ ಎನ್ನುವುದನ್ನು ತಮ್ಮಷ್ಟಕ್ಕೆ ಪತ್ತೆ ಹಚ್ಚಿದ ಪಾರ್ವತಮ್ಮ ಒಳಗೇ ಆತಂಕಗೊಂಡರು. ಹೇಳಿ ಕೇಳಿ ಹಳ್ಳಿಯ ಹಳವತ್ತಿ ಆಗಿದ್ದ ಆಕೆಗೆ ಕಮಲಮ್ಮನಿದ್ದ ಕೋಣೆಯ ಎಡೆಗೆ ಗಂಡ ತಪ್ಪಿ ಕೂಡ ಸುಳಿಯದೆ ಇರುವ ವಿಚಾರ ಭಯ ಹುಟ್ಟಿಸಿದ್ದು ಸಹಜವೆ ಆಗಿತ್ತು. ಆದರೆ ಉಳಿದಂತೆ ಯಾವುದೆ ತೊಂದರೆ ಆ ಬಗ್ಗೆ ಕಾಣಲಿಲ್ಲವಾಗಿದ್ದರಿಂದಲೂ, ಮೇಲಾಗಿ ಅದನ್ನೆಲ್ಲ ಯೋಚಿಸುತ್ತ ಕೂರಲು ಅವರಿಗೆ ವೇಳೆಯೂ ಸಾಕಾಗುತ್ತಿರಲಿಲ್ಲವಾಗಿದ್ದರಿಂದಲೂ ಆಕೆ ಸುಮ್ಮನಾದರು. ಅಂತೂ ತುಂಬ ಅಳುತ್ತಲೇ ಇರುತ್ತಿದ್ದ ಸರೋಜಳ ಆ ಎಳೆಶಿಶುವನ್ನು ಸುಧಾರಿಸುವುದರಲ್ಲಿಯೇ ಆಕೆಯ ದಿನಗಳು ಸರಿಯುತ್ತಿದ್ದಾಗ ಒಮ್ಮೆ ಜಲಜಳ ತಂದೆ ಆಗಮಿಸಿದರು.



ಆತ ಬಂದದ್ದು ಮಗಳನ್ನು ಕರೆದೊಯ್ಯಲು. "ಎಂಟು ದಿನಕ್ಕೆ ಕಳಿಸಿಕೊಡುತ್ತೀರಾ?" ಎಂದವರು ಕೇಳಿದಾಗ ಪಾರ್ವತಮ್ಮನವರಿಗೆ ಸಿಟ್ಟುಕ್ಕಿತು. ಕಾರಣ ಆ ದಿನಗಳಲ್ಲಿ ಕೆಲಸದವಳೂ ಸರಿಯಾಗಿ ಬರುತ್ತಿರಲಿಲ್ಲ. ಆಕೆ ಚಕ್ಕರ್ ಹಾಕಿದ ದಿನ ಬಾಣಂತಿಗೆ ನೀರು, ಶಿಶುವಿನ ಬಟ್ಟೆ ಒಗೆಯುವುದೇ ಮೊದಲಾದ ಕೆಲಸಗಳಿಂದಾಗಿ ಪಾರ್ವತಮ್ಮ ಸುಸ್ತಾಗಿಬಿಡುತ್ತಿದ್ದರು. ಹೀಗಿದ್ದರೂ ಒಳಗೆ ಅಡಿಗೆಗೆ ಜಲಜ ಇದ್ದುದರಿಂದ ವಿಶೇಷ ತೊಂದರೆ ಆಗಿರಲಿಲ್ಲ. 'ಈಗ ಎಂಟು ದಿನಗಳಿಗೇ ಆದರೂ ಅವಳನ್ನು ಕಳಿಸಿ, ಆ ವೇಳೆ ಕೆಲಸದಾಕೆಯೂ ಬರದೆ ಉಳಿದರೆ ತಮ್ಮ ಗತಿ ಹೇಳಿ ಸುಖವಿರದು' ಎಂದು ತಮ್ಮೊಳಗೇ ತರ್ಕಿಸಿ, ಇಂತಹ ಏನು ವೇಳೆಯಲ್ಲಿ ಬಂದ ಆತನನ್ನು ತಮ್ಮಲ್ಲೆ ಬೈದುಕೊಂಡ ಪಾರ್ವತಮ್ಮ ಹೊರಗೆ ಅದೇನನ್ನೂ ತೋರಿಸದೆ ಮೆಲ್ಲಗೆ ತಮ್ಮ ಕೆಲಸದವಳನ್ನು ದೂರಲಾರಂಭಿಸಿದರು. ಹಾಗೆ ಅವಳನ್ನು ಚೆನ್ನಾಗಿ ಬೈದು, ಜತೆಗೆ ಜಲಜಳ ಕಾರ್ಯಪಟುತ್ವವನ್ನೂ ಧಾರಾಳ ಹೊಗಳಿ, "ಒಮ್ಮೆ ಸರೋಜಳ ಬಾಣಂತನ ಮುಗಿದುಬಿಡಲಿ. ಆಗದೆ? ಆ ಮೇಲೆ ತಿಂಗಳ ಕಾಲ ಬೇಕಿದ್ದರೂ ಕಳಿಸಿಕೊಡುತ್ತೇನೆ," ಎಂದಾಕೆ ಹೇಳಿದಾಗ ಆತನಿಗೆ ಇಲ್ಲವೆನ್ನಲಾಗಲಿಲ್ಲ.

ಅಂತೂ ಇವರು ಮಾತನಾಡಿ ಇಷ್ಟು ಇತ್ಯರ್ಥಕ್ಕೆ ಬಂದಾಗ ತೋಟದಿಂದ ರಾಮುವೂ ಬಂದ. ಅವನೆದುರಿಗೆ ಮತ್ತೊಮ್ಮೆ ವಿಷಯ ಚರ್ಚೆಗೆ ಬಂದಾಗ ಪಾರ್ವತಮ್ಮ ತಮ್ಮ ಹೇಳಿಕೆಯ ಸಮರ್ಥನೆಗಾಗಿ ಮತ್ತೆ, "ಇಷ್ಟಕ್ಕೂ ನಮ್ಮ ಕಮಲಮ್ಮ ಇರುತ್ತಿದ್ದರೆ ನಾನು ಯೋಚಿಸುತ್ತಲೇ ಇರಲಿಲ್ಲ. ಅವಳೋ? ಕೆಲಸದಲ್ಲಿ ಭೂತ. ಆದರೇನು ಮಾಡುವುದು?" ಎಂದು ಹೇಳಿ ಮಗನ ಮೋರೆ ನೋಡಿದರು. ಅವನು, "ನಿಜ ಮಾವ" ಎಂದ.

ತಲೆದೂಗಿದ ಅವನ ಮಾವ ಜತೆಗೇ ಕೇಳಿದರು, "ಆ ಸುಧಾಕರನ ಸಂಗತಿ ಗೊತ್ತೋ ನಿಮಗೆ?" ಹಾಗೆಂದ ಆತ ಜತೆಗೇ ಮರುಕ ತುಂಬಿದ ದನಿಯಲ್ಲಿ, "ಅವನ ತಾಯಿ ಹೋದದ್ದೇ ಹೋದದ್ದು, ಮಾಣಿಗೆ ಹಿಡಿಯಿತಪ್ಪ ಗ್ರಹಣ," ಎಂದು ಉದ್ಗಾರ ಎತ್ತಿದಾಗ ಸೀತಾರಾಮ ಕುತೂಹಲದಿಂದ ಪ್ರಶ್ನಿಸಿದ,

"ಯಾಕೆ ಹಾಗಂದಿರಿ?"

"ಮತ್ತೆ ಅನ್ನದೆ?" ಆತ ಈಗ ತುಸು ಆಕ್ಷೇಪಣೆಯ ಧಾಟಿ ಎತ್ತಿದಾಗ ಪಾರ್ವತಮ್ಮ ಅಲ್ಲಿಯ

ಇದ್ದ ಜನ್ನಯ್ಯನವರನ್ನೊಮ್ಮೆ ನೋಡಿ, ನಿಧಾನವಾಗಿ ದನಿ ಎತ್ತಿದರು.

"ಯಾವುದೋ ಹೊಟೇಲಿನಲ್ಲಿ ಇದ್ದ ಅಂದ ಹಾಗಿತ್ತಪ್ಪ...."

"ಹೌದು ಇದ್ದ" ಜಲಜಳ ಅಪ್ಪ ಸಮ್ಮತಿಸಿ ಮುಂದುವರೆದರು, "ಆದರೆ ಈಗಿನ ಮಕ್ಕಳಿಗೆ ಕಷ್ಟಸಹಿಷ್ಣುತೆ ಕಡಿಮೆ ಎಂದು ನನ್ನ ಅಭಿಪ್ರಾಯ. ಇಲ್ಲವಾದರೆ ಆವ ಮೂರು ತಿಂಗಳಿನಲ್ಲಿ ನಾಲ್ಕು ಹೊಟೇಲು ಬದಲಾಯಿಸುತ್ತಿದ್ದನಾ ?"

ಆತ ಹಾಗಂದು ಬಾಯಿ ಮುಚ್ಚಿದ್ದರೋ ಇಲ್ಲವೋ. ಆತನಕವೂ ಮೌನಿಗಳಾಗಿ ಕೂತಿದ್ದ ಜನ್ನಯ್ಯ, ತಟ್ಟನೆ ಕೇಳಿದರು, "ಅದೆಲ್ಲ ನಿಮಗೆ ಹೇಗೆ ಗೊತ್ತು ?"

"ನನಗೆಯಾ ?" ಆತ ಈಗ ಬೀಗರತ್ತ ಹೊರಳಿ ವಿವರಿಸಿದರು, "ಅವ ನಮ್ಮ ರಾಜೇಶನ ಸಹಪಾಠಿ ಆಗಿದ್ದವನಲ್ಲವೆ ? ಹಾಗೆ ಒಂದೆರಡು ಸಲ ರಾಜೇಶನೊಂದಿಗೆ ನಮ್ಮಲ್ಲಿಗೂ ಬಂದದ್ದಿತ್ತು. ಕಲಿಯಲು ಒಳ್ಳೆ ಚುರುಕಿದ್ದ ಹುಡುಗನಂತೆ. ರಾಜೇಶ ಹೇಳುತ್ತಿದ್ದ. ಅದು ಸರಿ ಎಂಬಂತೆ ಫಸ್ಟ್ ಕ್ಲಾಸಿನಲ್ಲಿಯೇ ಪದವಿ ಮುಗಿಸಿದ. ಆದರೆ ಕೆಲಸ ಒಂದು ಸಿಗಬೇಕೆ ? ನಮ್ಮಲ್ಲಿ ನಿಜವಾದ ಪ್ರತಿಭೆಗೆ ಎಲ್ಲಿದೆ ಬೆಲೆ ?"

ಅವರು ಇನ್ನೂ ಎಷ್ಟು ಹೊತ್ತು ಹೇಳುತ್ತಿದ್ದರೋ ? ಆ ವೇಳೆಗೆ, ಆ ಪ್ರಶಂಸೆಗೆ ಉತ್ತರಿಸಿಯೋ ಎಂಬಂತೆ ರಾಮು ಕೊಂಕಿದ. "ಅದೇನಪ್ಪ ಅಷ್ಟೊಂದು ಬುದ್ಧಿವಂತನಾಗಿದ್ದೂ ಹೊಟೇಲು ಮಾಣಿ ಆಗಿದ್ದು ?"

"ಅದೇ ಹೇಳಲು ಬಂದೆ," ಅವನ ಮಾವ ಅಳಿಯನ ಲೇವಡಿಯನ್ನು ಗಮನಿಸದೆ ಭಾರವಾದ ದನಿಯಲ್ಲಿ ಉಸುರಿದರು, "ಈಗ ಎಲ್ಲ ಕಡೆಗಳಲ್ಲಿಯೂ ಬೇಕಾಗಿರುವುದು ಒಂದೋ ಶಿಫಾರಸು ಪತ್ರ, ಇಲ್ಲವೆ ದೊಡ್ಡವರ ಸಂಬಂಧ, ಅದು ಎರಡೂ ಇಲ್ಲವೋ ? ಕೇಳಿದಷ್ಟು ಹಣ ಸುರಿದರೆ ಮುಗಿಯಿತು. ಕೆಲಸ ಖಂಡಿತ. ಪಾಪ, ಸುಧಾಕರನಿಗೆ ಈ ಮೂರೂ ಇರಲಿಲ್ಲವಲ್ಲ ? ಹಾಗೆಂದು ಸಿಕ್ಕಿದ ಕೆಲಸವನ್ನಾದರೂ ಮನಸ್ಸಿಟ್ಟು ಮಾಡಿದನೆ ? ಅದೂ ಇಲ್ಲ."

ಅವರು ಹಣದ ವಿಚಾರ ಹೇಳಿದಾಗ ತುಸು ಕುಗ್ಗಿದ್ದ ರಾಮು ಅವರ ಮುಂದಿನ ಮಾತು ಕೇಳಿ ತಕ್ಷಣವೆ ಚೇತರಿಸಿಕೊಂಡು ನುಡಿದ, "ಇಷ್ಟು ಕಲಿತು ಹೊಟೇಲು ಮಾಣಿ' ಆದರೆ ಅವನ ಘನತೆಗೆ ಕುಂದು ಎಂದುಕೊಂಡನೋ ಏನೋ ?"

ಮಗ ಹಾಗನ್ನುತ್ತಲೂ ಜನ್ನಯ್ಯ ಅವನನ್ನು ದಿಟ್ಟಿಸಿ ಬಿರುಸಾಗಿ ಆಪಾದಿಸಿದರು, "ಅದು ಹಾಗಲ್ಲ, ಅವನ ಯೋಗ್ಯತೆಗೆ ತಕ್ಕ ಮನ್ನಣೆ ಸಿಗದ ನೋವು ಅದು. ಹಾಗೆ ನೋಡಿದರೆ ಅವನ ಆ ಸ್ಥಿತಿಗೆ ಕಾರಣ ನಾವೇ."

ಆ ಮಾತು ರಾಮುವಿಗೆ ಹಿಂದಿನ ನೆನಪನ್ನು ತಂದುಕೊಟ್ಟಿತಾಗಿ ಅವನು ತಕ್ಷಣವೆ ರೇಗಿ ಬೊಬ್ಬಿರಿದ,

"ಹೌದು, ನಾವೇ ಅಂತ ಯಾಕಂದಿರಿ ? 'ನಿನ್ನಿಂದಾಗಿ' ಎನ್ನಿ. ಆ ದಿನ ನಾನು ಅವನಿಗೆ ಹಣ ಕೊಡಲು ಬಿಟ್ಟಿಲ್ಲವೆಂದಲ್ಲವೆ ನಿಮ್ಮ ಆರೋಪ ? ಈಗಾದರೂ ಏನಂತೆ ? ಹೋಗಿ ಕರೆತನ್ನಿ ಅವನನ್ನೇ. ಅವನೇ ಇಲ್ಲಿರಲಿ. ನಾನೆಲ್ಲಾದರೂ ಹಾಳಾಗಿ ಹೋಗುತ್ತೇನೆ."

ಅಳಿಯ ಎಬ್ಬಿಸಿದ ಆ ಅಬ್ಬರದಿಂದಾಗಿ ಜಲಜಳ ಅಪ್ಪ ಕಂಗೆಟ್ಟರೂ, ವಿಷಯ ಏನೆಂದು ತಿಳಿಯಲು ಕುತೂಹಲಿಗಳೂ ಆದರು. ಹಾಗೂ ಆ ವೇಳೆಗೆ "ರಾಮು, ಯಾಕಪ್ಪ ಸುಮ್ಮಗೆ ಗಲಾಟೆ ? ಅವೆಲ್ಲ ಆಗುವ, ಹೋಗುವ ಮಾತೆ ?" ಎಂದು ಮಗನಲ್ಲಿ ಬೇಡುತ್ತಿದ್ದ ಪಾರ್ವತಮ್ಮನವರಲ್ಲಿ, "ಏನು ವಿಚಾರ ಅಕ್ಕ ಅದು ?" ಎಂದೂ ಕೇಳಿಬಿಟ್ಟರು.

ಆದರೆ ಆ ಪ್ರಶ್ನೆಗೆ ಉತ್ತರಿಸಿದ್ದು ಪಾರ್ವತಮ್ಮನಲ್ಲ, ರಾಮು. ಮಾತನಾಡಲು ಬಾಯಿ ತೆರೆದ ಆಕೆಯನ್ನು ಸುಮ್ಮನಿರಿಸಿದ ಅವನು ಹಿಂದಿನ ವಿಷಯವನ್ನು ಹೇಳಿ, ಅವನಪ್ಪನ ದಯಾ, ದಾಕ್ಷಿಣ್ಯ, ಧರ್ಮಾದಿಗಳ ಬಗ್ಗೆ ಸ್ವಲ್ಪ ಅತಿಯಾಗಿ ವರ್ಣಿಸಿ, ಆವಾಗ ತಾನು ಹೇಳಿದ್ದನ್ನೂ ವಿವರಿಸಿ ಕೇಳಿದ, "ದಾನಧರ್ಮ ಬೇಡವೇ ಬೇಡ ಎನ್ನುವ ಪಿಸುಣಾರಿ ನಾನಲ್ಲ. ಅದಕ್ಕೆ ಅಷ್ಟು ವರ್ಷಗಳ ಕಾಲ ಅವರಿಲ್ಲಿ ಬಿಟ್ಟಿಯಾಗಿದ್ದುದೇ ಸಾಕ್ಷಿ. ಹಾಗೆಂದು ಜೀವಮಾನ ಪೂರ್ತಿ ಒಂದು ಸಂಸಾರವನ್ನು ಸಾಕು

ವುದು ಸುಲಭದ ಮಾತೆ ?''

ಅಳಿಯನ ಮಾತು ಸತ್ಯವೆಂದೇ ಆತನಿಗೆ ತೋರಿತಾದರೂ ಇತ್ತ ಬೀಗರನ್ನು ಎದುರು ಹಾಕಿಕೊಳ್ಳಲೂ ಅವರಿಗೆ ಇಷ್ಟವಾಗಲಿಲ್ಲ. ಕಾರಣ, ಜನ್ನಯ್ಯ ಎಷ್ಟಾದರೂ ಮನೆಯ ಹಿರಿಯರು. ಅದೂ ಅಲ್ಲದೇ ಸುಧಾಕರ ಅಲ್ಲಿಯೇ ಬೆಳೆದ ಹುಡುಗನಾಗಿದ್ದುದರಿಂದ ಜನ್ನಯ್ಯನವರಿಗೆ ಹಾಗೆ ತೋಚಿದ್ದು ತೀರಾ ತಪ್ಪೆನ್ನುವಂತೆಯೂ ಇರಲಿಲ್ಲ. ಎಂದೇ ಅವರು ನಿಧಾನವಾಗಿ, "ಆಗಿದ್ದು ಆಯಿತಲ್ಲ. ಇನ್ನು ಅಂತಹ ಪ್ರಸಂಗ ಬಂದರೆ ಆಗ ಅಷ್ಟೋ ಇಷ್ಟೋ ಕೊಟ್ಟರಾಯಿತು. ಹಾಗೆಂದು ಪೂರ್ತಿ ಹೊಣೆ ಹೊರಲು ನಿಮಗೂ ಸಂಸಾರವಿಲ್ಲವೆ ?'' ಎಂದು ಹೇಳಿದರು.

ಅಡ್ಡಗೋಡೆ ಮೇಲಿಟ್ಟ ದೀಪದಂತಿದ್ದ ಅವರ ಆ ಮಾತುಗಳಿಂದ ಅಪ್ಪ-ಮಗ ಇಬ್ಬರಿಗೂ ಎಷ್ಟು ಸಮಾಧಾನ ಆಯಿತೋ ಬಿಟ್ಟಿತೋ, ಆಗಂತೂ ಜಲಜ ಒಳಗಿನಿಂದ ಊಟಕ್ಕೆ ಕರೆದಳಾಗಿ ಎಲ್ಲರೂ ಅಲ್ಲಿಂದ ಎದ್ದರು. ಮತ್ತು ಅದಷ್ಟೇ ತೋಟದಿಂದ ಬಂದಿದ್ದ ರಾಮು ಕೈ ಕಾಲು ತೊಳೆದು ಬರುವುದಾಗಿ ಹೇಳಿ ಬಚ್ಚಲಿಗೆ ನಡೆದ. ಅವನ ಹಿಂದೆಯೇ ಪಾರ್ವತಮ್ಮ ಕೂಡ ಒಳಗೆ ತೆರಳಿದರು.

ಆಗ ಇಳಿದನಿಯಲ್ಲಿ ಕೇಳಿದರು ಜನ್ನಯ್ಯ,

"ಹಾಗಿದ್ದರೆ ಅವನು ಈಗ ಏನು ಮಾಡುತ್ತಿದ್ದಾನೆ ? ಹೋಟಲು ಬಿಟ್ಟ ಎಂದಿರಲ್ಲವೆ ?''

"ಹುಂ,'' ಮತ್ತೆ ಆ ವಿಚಾರಕ್ಕೆ ಬರಲು ಇಷ್ಟವಿಲ್ಲದ ರಾಮುವಿನ ಮಾವ, ಅಳಿಯ ಹೋದ ದಿಕ್ಕನ್ನೊಮ್ಮೆ ನೋಡಿ ಮೆಲ್ಲಗೆ ವಿವರಿಸಿದರು:

"ಅಲ್ಲಿ ಎಲ್ಲಿಯೂ ಅವನಿಗೆ ಹಿಡಿಸದೇ ಬಿಟ್ಟವನು ಖಾಲಿ ತಿರುಗಿಕೊಂಡಿದ್ದ. ಹಾಗೆ ಒಂದೆರಡು ಸಲ ಪೇಟೆಯಲ್ಲಿ ನನಗೆ ಸಿಕ್ಕಿದ್ದ. ಆಗ, ಹೀಗೆಲ್ಲ ಯಾಕೆ ಮಾಡುತ್ತೀ ? ಎಂದು ಒಂದಷ್ಟು ಬುದ್ಧಿ ಹೇಳಿ ಸ್ವಲ್ಪ ಹಣವನ್ನು ಕೊಟ್ಟಿದ್ದೆ. ಆ ಮೇಲೆ ಈಗ ಎಲ್ಲಿದ್ದಾನೋ ? ಬೇರೆ ಕೆಲಸ ಗಿಲಸ ಸಿಕ್ಕಿತೋ ಇಲ್ಲವೋ ? ಯಾರಿಗೆ ಗೊತ್ತು ?'' ಹೇಳುತ್ತಿದ್ದ ಆತನಿಗೆ ಆ ವೇಳೆಗೆ ರಾಮು ಬರುತ್ತಿರುವುದು ಕಾಣಿಸಿತಾಗಿ ಆತ, "ಹೋಗೋಣವೇ ?'' ಎನ್ನುತ್ತ ಅಡಿಗೆ ಮನೆಯೆಡೆಗೆ ನಡೆದರು. ಜನ್ನಯ್ಯ ಅವರನ್ನು ಹಿಂಬಾಲಿಸಿದರೂ ಅವರ ಮೋರೆ ತೀರ ಬಾಡಿ ಹೋಗಿತ್ತು.

ಆ ಸಂಜೆ ಬೀಗರು ತಮ್ಮ ಊರಿಗೆ ಹೋದ ನಂತರ ಜನ್ನಯ್ಯ ಚಾವಡಿ ಜಗಲಿಯಲ್ಲಿ ಆಸೀನರಾದರು. ಯಾಕೋ ಎಂದೂ ಇಲ್ಲದ ಕಸಿವಿಸಿ, ಹೀಗೇ ಎನ್ನಲಾಗದ ಧಾವಂತದ ಅನುಭವವಾಗುತ್ತಿತ್ತವರಿಗೆ. 'ಸುಮ್ಮಗೆ ಎದೆ ಗುದ್ದಿಸಿಕೊಳ್ಳುವ ಈ ಸಂಕಟ ಬೇಕಿತ್ತೆ ನಿನಗೆ ?' ಅವರ ಒಳಗಿನಿಂದಲೇ ಕೇಳಿಸಿದ ಆ ಪ್ರಶ್ನೆಗೆ ಆತ ಇನ್ನಷ್ಟು ಮುದುಡಿಕೊಳ್ಳುತ್ತಿದ್ದ ಆ ಹೊತ್ತಿನಲ್ಲಿ ತೋಟದಿಂದ ಬಂದ ಆಳು ಕೂಗಿದ.

"ಬುದ್ದಿಯೋರ, ವಸಿ ಪಿಕ್ಕಾಸಿ ಬ್ಯಾಕಿತ್ರ.''

"ಆಂ ? ಏನು ? ಏನಂದೆ ?'' ತಮ್ಮ ಧ್ಯಾನದೊಳಗೇ ಮುಳುಗಿದ್ದ ಜನ್ನಯ್ಯ ಅವನ ದನಿಗೆ ತುಸು ಬೆಚ್ಚಿ ಪ್ರಶ್ನಿಸಿದಾಗ ಮತ್ತೆ ಅದನ್ನೇ ಹೇಳಿದ ಅವನು,

"ಚಿಕ್ಬುದ್ದಿಯೋರು ಬ್ಯಾಗ ತಕಂಬಾ ಅಂತ ನನ್ನ ಕಳುಸುದ್ರು,'' ಎಂದೂ ಜತೆಗೇ ಸೇರಿಸಿದ.

ಓ, ಚಿಕ್ಬುದ್ದಿ ಅಂದರೆ ರಾಮು ತೋಟದಿಂದ ಇವನನ್ನು ಕಳಿಸಿರಬೇಕು. ಈ ಸಂಜೆ ವೇಳೆಗೆ ಪಿಕ್ಕಾಸಿ ಏಕೋ ? ಜನ್ನಯ್ಯ ತಮ್ಮೊಳಗೇ ಹೇಳಿಕೊಂಡರಾದರೂ, ಮಗನ ಕೆಲಸವನ್ನು ಪ್ರಶ್ನಿಸಲು ಹೋಗದೇ ಕೆಲಸದವನಲ್ಲಿ ಹೇಳಿದರು, "ಹಿಂದುಗಡೆ ಕೋಣೆಯಲ್ಲಿದೆ. ಹೋಗು. ತಾ.''

ಆದರೆ ಆ ಕೆಲಸಗಾರ ಹೊಸಬನಾಗಿದ್ದು ಅವನಿಗೆ ಎಲ್ಲೆಲ್ಲಿ ಏನೇನಿದೆ ಎಂಬುದೇ ತಿಳಿದಿರಲಿಲ್ಲವಾಗಿ ಅವನು ರಾಗ ಎಳೆದ, "ಅದ್ಯಾನೋ ನಂಗ್ತೀಳಿದು ಬುದ್ಧಿ. ವಸಿ ನೀವೇ ಬ್ಯಾಗ ತೆಕ್ಕೊಡಿ.''

ಈಗ ಜನ್ನಯ್ಯ ಅಳುಕಿದರು. ಕಾರಣ, ಈ ಎರಡು ವರ್ಷಗಳಲ್ಲಿ ಕಮಲಮ್ಮ ಹಿಂದೆ ವಾಸಿಸುತ್ತಿದ್ದ ಕೋಣೆ, ಮತ್ತೆ ಸೌದೆ ಕೋಣೆ ಆಗಿತ್ತು. ಆಕೆ ಸತ್ತ ಆರು ತಿಂಗಳಲ್ಲಿ ಸೌದೆ ಹಾಕಲೆಂದು ಮೊದಲು ಕಟ್ಟಿಸಿದ್ದ ನಾಲ್ಕು ಕಂಬಗಳ 'ಕೊಟ್ಟಿಗ' ಮುರಿದು ಬಿದ್ದಿತ್ತು. ಆಕೆಯ ನಂತರ ಅವಳ ಮಗನಿಗೂ ಆ ಕೋಣೆಯನ್ನು ಬಿಟ್ಟೆ ನೀಡಲು ಸೀತಾರಾಮನಿಗೆ ಮೊದಲೇ ಮನಸ್ಸಿರಲಿಲ್ಲ. ಆಗಂತೂ ಕೊಟ್ಟಿಗೆ ಬಿದ್ದ ಕಾರಣ ಒಂದು ನೆಪವೂ ಸಿಕ್ಕಿದಂತಾಗಿತ್ತು. ಅದೂ

ಅಲ್ಲದೆ ಮತ್ತೆ ಆ ಹಿಂದಿನ ಏರ್ಪಾಡನ್ನೇ ಜಾರಿಗೆ ತರಲು ಸುಧಾಕರ ಆಕ್ಷೇಪಿಸಿರಲೂ ಇಲ್ಲ. ಅಲ್ಲಿದ್ದ ಕೆಲವೇ ಸಾಮಾನುಗಳಲ್ಲಿ ತನಗೆ ಬೇಕಾದುದನ್ನು ಒಯ್ದ ಬಳಿಕ ರಾಮು ಮತ್ತೆ ಅಲ್ಲಿಯೇ ಸೌದ ದಾಸ್ತಾನಿರಿಸಲಾರಂಭಿಸಿದ್ದ. ಕೃಷಿ ಕೆಲಸಕ್ಕೆ ಬೇಕಾಗುವ ಇನ್ನಿತರ ಉಪಕರಣಗಳೂ ಅಲ್ಲಿಯೇ ಇರುತ್ತಿದ್ದವಾಗಿ ಜನ್ನಯ್ಯ ಮೆಲ್ಲಗೆ ಎದ್ದರು. ಹಾಗೂ ಮಡದಿಯೋ, ಸೊಸೆಯೋ ಕಂಡರೆ ಅವರಲ್ಲಿಯೇ ಹೇಳೋಣವೆಂದು ಅತ್ತಿತ್ತ ನೋಡಿದರು. ಆದರೆ ಯಾರೂ ಎದುರಿಗೆ ಕಾಣದೇ ಇದ್ದುದರಿಂದ ಕಾಲೆಳೆಯುತ್ತ ತಾವೇ ಹೊರಟರು. ಆಳು ಕೂಡ ಅವರ ಬೆನ್ನಾದ.

ಚಾವಡಿಯೊತ್ತಿಗೆ, ಅಲ್ಲಿಂದಲೇ ಒಳಗೆ ಬಾಣಂತಿಕೋಣೆ.. ಪಾರ್ವತಮ್ಮ ಅಲ್ಲಿಯೇ ಇದ್ದು ಈ ಸಂಭಾಷಣೆಯನ್ನು ಕೇಳಿಸಿಕೊಂಡಿದ್ದರು. ಪತಿ ಆಳಿನಲ್ಲಿ, "ನೀನೇ ತಾ," ಎಂದುದೂ, ಅದಕ್ಕೆ ಅವನಿತ್ತ ಉತ್ತರ ಎಲ್ಲ ಅವರ ಕುತೂಹಲವನ್ನು ಕೆಣಕಿದವು. ನೋಡಬೇಕೀಗ- ಅವರೇ ಹೋಗುತ್ತಾರೋ ಇಲ್ಲ, ನಮ್ಮನ್ನು ಕರೆದು ಹೇಳುತ್ತಾರೂ.... ಆಕೆ ಒಳಗೇ ತರ್ಕಿಸುತ್ತ ಕೆಲನಿಮಿಷ ನಿಂತವರು, ಹೊರಗಿನಿಂದೇನೂ ಸದ್ದು ಕೇಳಿಸದ್ದರಿಂದ ಚಾವಡಿಗೆ ಕಾಲಿಟ್ಟರು. ಹಾಗೂ ಅಲ್ಲಿಯೂ ಜಾಗ ಖಾಲಿ ಆಗಿದ್ದುದರಿಂದ ನೇರ ಹಿಂದುಗಡೆಗೆ ನಡೆದರು. ಹಾಗವರು ಗಮ್ಯ ತಲುಪಿದ್ದರೋ ಇಲ್ಲವೋ ಕೇಳಿತು ಕಿರುಚುವಿಕೆ. "ಅಯ್ಯೋ ಅಯ್ಯಯ್ಯೋ." ಆ ದನಿ ತಮ್ಮ ಪತಿಯದೆಂದು ಹೊಳೆಯುತ್ತಲೂ ಆಕೆ ಕಂಗಾಲಾಗಿ ಒಂದೇಟಿಗೇ ಕೋಣೆಯೆಡೆಗೆ ಓಡಿದರು.

ಅವರಲ್ಲಿಗೆ ತಲುಪಿದಾಗ ಜನ್ನಯ್ಯ ಕೋಣೆಯ ಹೊರ ಜಗಲಿಯಲ್ಲಿ ಏದುಸಿರು ಬಿಡುತ್ತ ನಿಂತಿದ್ದರು. ಪಿಕ್ಕಾಸಿ ಹತ್ತಿರವೆ ಬಿದ್ದಿತ್ತು.

"ಏನಾಯಿತೋ ?" ಆಳಿನೆಡೆಗೆ ತಿರುಗಿ ಕೇಳಿದ ಆಕೆ, ತಕ್ಷಣವೇ ಪತಿಯತ್ತಲೂ ದಿಟ್ಟಬೀರಿ ಆತಂಕದಿಂದ ಪ್ರಶ್ನಿಸಿದರು,

"ಏನಾಯಿತು ? ಹಾಗೇಕೆ ಬೊಬ್ಬಿರಿದಿರಿ ?"

ಜನ್ನಯ್ಯ ಅದಕ್ಕೇನೂ ಉತ್ತರಿಸದೇ ಇದ್ದಾಗ ಆಳು, ಅವನೂ ತುಸು ಧೈರ್ಯಸ್ಥನೇ, "ವಳಗಡೆ ಆವು ಗೀವು ಕಂಡ್ರೋ ಯಾನೋ ?" ಎಂದನಲ್ಲದೇ ತಾನೇ ಒಳಗೆ ಹೊಕ್ಕು ಅತ್ತಿತ್ತ ನೋಡಿದ.

ಮತ್ತು ಐದು ನಿಮಿಷಗಳಲ್ಲಿ ಹೊರಗೆ ಬರುತ್ತ, "ಅಲ್ಲೇನೂ ಇರ್ಲಿಲ್ಲ. ಆದ್ರೆ ಆವಿನ ಸಮಾಚಾರ ಇಂಗೇ ಅಂತ ಏಳಾಕಾಗ್ದು. ಸೌದೆರಾಸೀಲಿ ಸೇರ್ಕೊಂಡಿದ್ರೂ ಇರ್‌ಬೈದು ಅಮ್ಮಾರೆ, ನೀವಾರೂ ವಳೀಕೆ ಓಗೋದ್ ಬ್ಯಾಡಿ, ಬ್ಯಾಕಿದ್ರೆ ನಾಳೀಕೆ ಎಲ್ಲ ಸೌದೆ ಈಚೆಗೆ ಎಳ್ದಾರೆ ನೋಡಾನ," ಎಂದೂ ಹೇಳಿದ. ಪಾರ್ವತಮ್ಮ ಈ ತನಕವೂ ಹೆದರಿ ನಿಂತಿದ್ದ ಪತಿಯನ್ನೇ ಗಮನಿಸುತ್ತಿದ್ದವರು, ಆಳಿನ ಮಾತಿಗೆ 'ಹೂಂ' ಗುಟ್ಟಿದರು. ಮತ್ತು ಗಂಡನೆಡೆಗೆ ತಿರುಗಿ, 'ಬನ್ನಿ ಹೋಗೋಣ' ಎಂದು ಮುಂದಡಿ ಇಟ್ಟರು. ಆ ವೇಳೆಗೆ ಆಳು ಮತ್ತೊಮ್ಮೆ "ಅಮ್ಮಾರೆ, ತುಸಾ ಜ್ವಾಪಾನ ಇರ್ಲಿ. ಬುದ್ಧಿಯೋರು ಬಾಲಾ, ಗೀಲಾ ತುಳುದಿದ್ರೆ ಅದು ಗೆಪ್ತಿ ಇಟ್ಕೊಂಡೀತು" ಎನ್ನುತ್ತ ತಾನೂ ಪಿಕ್ಕಾಸಿ ಎತ್ತಿಕೊಂಡ.

ಆ ರಾತ್ರಿ ಮಲಗಿದರೆ ಪಾರ್ವತಮ್ಮನಿಗೆ ನಿದ್ದೆ ಬರಲೇ ಇಲ್ಲ. ಬದಲಿಗೆ ಸಂಜೆ ನಡೆದ ವಿಚಾರವೇ ತಲೆ ಒಳಗೆ ಸುತ್ತುತ್ತಿತ್ತು. ಆ ರೀತಿ ಕಿರುಚಿದ ಜನ್ನಯ್ಯ ಆ ನಂತರ ತುಟಿ ಎರಡು ಮಾಡಿರಲಿಲ್ಲ



ಎನ್ನುವುದನ್ನು ನೆನೆಸಿದಾಗ ಆಕೆಗೆ ಯಾಕೋ ವಿಚಿತ್ರವೆನ್ನಿಸುತ್ತಿತ್ತು. ಜತೆಗೆ ಭಯ ಕೂಡಾ. ಯಾಕಾಗಿ ಅವರು ಆ ರೀತಿ ವರ್ತಿಸಿದರು? ತಾವು ಪ್ರಶ್ನಿಸಿದಾಗ, ಹೋಗಲಿ ರಾಮು ನಂತರ ತೋಟದಿಂದ ಬಂದು ಕೇಳಿದಾಗ ಕೂಡ ಯಾಕೆ ಮೌನವನ್ನೇ ಗಟ್ಟಿ ಮಾಡಿದರು? ಒಳಗೆ ಕಂಡುದು ಹಾವೇ ಆಗಿದ್ದಲ್ಲಿ ಹಾಗೆಂದು ಹೇಳಬಹುದಿತ್ತಲ್ಲವೆ? ಅಥವಾ.... ಅಥವಾ.... ಅವರಿಗೆ ಕಾಣಿ'ಸಿದ್ದು ಹಾವಲ್ಲವೋ? ಹಾಗಾಗಿಯೇ ಹೆದರಿ ಮೂಗನಂತೆ ಕೂತುಬಿಟ್ಟರೋ? ತಮ್ಮ ಯೋಚನೆ ಹಾಗೆ ಹರಿದಾಗೆಲ್ಲ ಪಾರ್ವತಮ್ಮನವರಿಗೆ ತಾವು ಮೊದಲೇ ಗಮನಿಸಿದ್ದ ಜನ್ನಯ್ಯನವರ ವಿಚಿತ್ರ ವರ್ತನೆಯ ನೆನಪೂ ಆಗಿಯೇ ಆಗುತ್ತಿತ್ತು. ಹಾಗೂ ಇದೀಗ ಮಲಗಿಕೊಂಡು ನಿಧಾನವಾಗಿ ಚಿಂತಿಸುತ್ತಿದ್ದಾಗ ಆ ಸಂಜೆ ನಡೆದ ಘಟನೆಗೂ ಜನ್ನಯ್ಯನವರ ಮೊದಲಿನ ವರ್ತನೆಗೂ ಖಂಡಿತ ಸಂಬಂಧವಿದೆ ಎನ್ನಿಸಿತು. ಆದರೆ ಆ ಅನಿಸಿಕೆ ಹರ್ಷ ನೀಡುವಂತದ್ದಾಗಿರಲಿಲ್ಲವೆಂದೇ ಆಕೆಯಿಂದ ನಿಟ್ಟುಸಿರೊಂದು ಹೊರಟಿತು. "ಅಯ್ಯೋ ಪರಮಾತ್ಮಾ, ಎಂತಹ ಗತಿ ತಂದಿಟ್ಟೆಯೋ ನನ್ನಪ್ಪಾ"- ಅವರ ಎದೆಯಾಳದ ವ್ಯಥೆ ಆ ಮಾತನ್ನು ಹೇಳಿಕೊಳ್ಳುತ್ತಿದ್ದಾಗಲೇ ಮನಸ್ಸು ಮತ್ತೆ ಚಿಂತಿಸತೊಡಗಿತು.

ತಮಗೆ ಯಾರಿಗೂ ಆಗದ ಆ 'ಅನುಭವ' ಅವರೊಬ್ಬರಿಗೇ ಯಾಕಾಗಬೇಕು? ಯಾವ ಪಾಪ ಮಾಡಿದ್ದರೆಂದು ತನ್ನ ಕೈ ಹಿಡಿದಾತ ಆ ಶಿಕ್ಷೆ ಅನುಭವಿಸಬೇಕು? ಒಳಗೇ ಯೋಚಿಸುತ್ತಿದ್ದಂತೆ ಆಕೆಗೆ ಸತ್ತ ಕಮಲಮ್ಮನ ಮೇಲೆಯೇ ಸಿಟ್ಟು ಉಕ್ಕಿ ಬಂತು. "ಏನೋ ಸಂಬಂಧಿಕಳು, ಗತಿ ಇಲ್ಲದವಳೆಂದು ವರ್ಷಗಟ್ಟಲೆ ಆಶ್ರಯ ನೀಡಿದರೆ, ಅವರಿಗೇ ತೋರಿಸುತ್ತೀಯಲ್ಲ ನಿನ್ನ ಪ್ರತಾಪ? ಇಷ್ಟಕ್ಕೂ ಅವರೇನು ಅನ್ಯಾಯ ಮಾಡಿದರು ನಿನಗೆ? ನೀನಿಟ್ಟ ಹಣ ಕೂಡ, ಕಾಸನ್ನೂ ಉಳಿಸಿಕೊಳ್ಳದೇ ನಿನ್ನ ಮಗನಿಗೆ ಕೊಟ್ಟರು ನೋಡು, ಈ ಕಲಿಕಾಲದಲ್ಲಿ ಸತ್ಯವಂತರಾಗಿರಬಾರದೆನ್ನುವುದು ಇದಕ್ಕೇಯೋ ಏನೋ," ಎದುರಿಗಿರದ ಕಮಲಮ್ಮನನ್ನು ಉದ್ದೇಶಿಸಿ ಹಾಗೆಂದುಕೊಳ್ಳುತ್ತಿದ್ದಾಗಲೇ ಆಕೆಗೆ ದುಃಖ ಉಕ್ಕಿತು. ಎಷ್ಟೋ ದಿನಗಳಿಂದ ಒಳಗೆ ಶೇಖರಗೊಂಡಿದ್ದ ಆತಂಕ, ದುಮ್ಮಾನಗಳು ಆ ಕಣ್ಣೀರಿನೊಂದಿಗೇ ಹರಿಯುತ್ತಿದ್ದಾಗ ಆಕೆಗೆ ಶ್ರೀಧರನ ನೆನಪಾಯಿತು. "ಈ ಸಲ ಬರಲಿ ಅವನು. ಇದಕ್ಕೇನಾದರೂ ಮಾಡಿಸಲು ಹೇಳಬೇಕು. ಮತ್ತೆ ರಾಮುವಿನಲ್ಲಿ ಹೇಳಿದರೂ, ಬಿಟ್ಟರೂ ಒಂದೇ" ಆ ನಿರ್ಧಾರಕ್ಕೆ ಬಂದಾಗ ಸ್ವಲ್ಪ ಸಮಾಧಾನ ಎನ್ನಿಸಿತಾಗಿ, "ಇನ್ನಾದರೂ ತುಸು ನಿದ್ದೆ ಮಾಡಬೇಕಪ್ಪ," ಎಂದುಕೊಳ್ಳುತ್ತ ಕಣ್ಣು ಮುಚ್ಚಿ "ರಾಮಾ ಕೃಷ್ಣಾ" ಎಂದುಕೊಳ್ಳುತ್ತಿರುವಾಗಲೇ ಆ ಸದ್ದು ಕೇಳಿಸಿತು.

ಅದು ತುಸುವೆ ದೂರದಲ್ಲಿ ಮಲಗಿದ್ದ ಜನ್ನಯ್ಯ ಮುಲುಗಿದ ಸದ್ದೆಂದು ಅವರಿಗೆ ಹೊಳೆಯುತ್ತಲೂ ತಟ್ಟನೆ ಎದ್ದರಾಕೆ. ಹಾಗೆ ಎದ್ದವರು ಪತಿಯ ಬಳಿಸಾರಿ ಹಣೆ ಮುಟ್ಟಿದರೆ ಅದು ಚೆನ್ನಾಗಿ ಕಾದಿತ್ತು.

ಆ ಸಂಜೆ ನಡೆದ ಘಟನೆಯೇ ಈ ಮೈಬಿಸಿಗೆ ಮೂಲವೆಂದಾಕೆಗೆ ತಕ್ಷಣವೆ ಅನ್ನಿಸಿತಾದರೂ ಅದಕ್ಕೇನು ಮಾಡಬೇಕೋ ತೋಚಲಿಲ್ಲ. ಎಚ್ಚರವೇ ಇಲ್ಲದೆ ಗಂಡನ ಹಾಸುಗೆ ಬಳಿ ಚೆಪ್ಪರಂತೆ ಸ್ವಲ್ಪ ಹೊತ್ತು ಹಾಗೇ ಕುಳಿತವರಿಗೆ, ನಂತರ ಏನೋ ಹೊಳೆದಂತಾಗಿ ಎದ್ದು, ದೇವರ ಮನೆಗೆ ಹೋಗಿ, ಅಲ್ಲಿದ್ದ ವಿಭೂತಿಯನ್ನಷ್ಟು ತಂದು ಜನ್ನಯ್ಯನವರ ಹಣೆಗೆ ಬಳಿದರು. ಹಾಗೂ, "ದೇವರೇ ನೀನೇ ಗತಿಯಪ್ಪ," ಎಂದು ಆರ್ತರಾಗಿ ತಮ್ಮೊಳಗೇ ಹೇಳಿಕೊಳ್ಳುತ್ತ ಮರಳಿ ತಮ್ಮ ಹಾಸುಗೆಗೆ ಬಂದರು.

ಹಾಗೆ ಬಂದು ಮಲಗಿದಾಕೆಗೆ ಆತಂಕ ಹೆಚ್ಚಾಗಿ ನಿದ್ದೆ ಬರಲೇ ಇಲ್ಲ. ದಿನೇ ದಿನೇ ಉಲ್ಬಣ'ಸುತ್ತಿರುವ ಈ ಪರಿಸ್ಥಿತಿಗೇನು ಪರಿಹಾರ ಎಂದವರು ಚಿಂತಿಸುತ್ತಿದ್ದಾಗ ಜನ್ನಯ್ಯನ ಕನವರಿಕೆ ಕೇಳಿಸಿತು- "ಬೇಡ ಬೇಡ."

ಯಾವುದು ಬೇಡ? ಏನು ಬೇಡ? ಪಾರ್ವತಮ್ಮ ಚಕಿತರಾಗಿದ್ದಾಗಲೇ ಮತ್ತೆ ಬಡಬಡಿಸಿದ ರಾತ- "ತಿಳಿಯದೇ ಆಗಿಬಿಟ್ಟಿತು."

ಏನಿದೆಲ್ಲಾ? ಆಕೆ ಇನ್ನಷ್ಟು ಗೊಂದಲದಿಂದ ಕೂಡಿ, ಹಾಸುಗೆಯ ಮೇಲೆ ಎದ್ದೇ ಕುಳಿತರಾದರೂ ಮತ್ತೆ ಏನೂ ಸದ್ದು ಕೇಳಿ ಬರಲಿಲ್ಲ. ಸುಮಾರು ಹೊತ್ತು ಹಾಗೇ ಕೂತಿದ್ದ ಆಕೆಗೆ ಕೊನೆಗೂ ದಣಿ'

ವಿನಿಂದ ಕಣ್ಣು ಬಾಡತೊಡಗಿತ್ತಾಗಿ, ಮಾರನೆ ಹಗಲು ಪತಿಯಲ್ಲಿ ಶಬ್ದಗಳ ಅರ್ಥವನ್ನು ಕೇಳಿಯೇ ಬಿಡುವುದೆಂದೂ, ಜತೆಗೆ ಅವರ ವಿಚಿತ್ರ ವರ್ತನೆಗಳಿಗೂ ಕಾರಣ ತಿಳಿಯಬೇಕೆಂದೂ ಯೋಚಿಸುತ್ತಿದ್ದಂತೆ ನಿದ್ದೆ ಬಂದಾಗಿತ್ತು.



ಮರುಬೆಳಗ್ಗೆ ಪಾರ್ವತಮ್ಮ ಎದ್ದ ತಕ್ಷಣವೇ ಜನ್ನಯ್ಯನ ಬಳಿಗೆ ಹೋಗಿ ಅವರ ಹಣೆ ಮುಟ್ಟಿ ನೋಡಿದರು. ಅದು ತಣ್ಣಗಿತ್ತು. "ಹಾಗಿದ್ದರೆ ಜ್ವರ ಇಳಿದಿದೆ."

ಆಕೆ ಸ್ವಲ್ಪ ಸಮಾಧಾನದಿಂದಲೇ ತಮ್ಮ ಇತರ ಕೆಲಸಗಳಿಗೆ ತೆರಳಿ ಹೊತ್ತಾಗಿತ್ತೋ ಇಲ್ಲವೋ, ತೋಟಕ್ಕೆ ತೆರಳಿದ್ದ ರಾಮು ಮರಳಿದವನು, "ಈ ವರ್ಷ ನೆಮ್ಮದಿಯಾಗಿ ಉಂಡಂತೇ ಇದೆ," ಎನ್ನುತ್ತ ಜಗಲಿಯಲ್ಲಿ ಕುಕ್ಕರಿಸಿದ. ತೀರ ಪೆಚ್ಚಾಗಿತ್ತು ಅವನ ಮೋರೆ. ಆ ಮಾತುಗಳಿಂದ ಶಂಕಿತರಾದ ಪಾರ್ವತಮ್ಮ "ಏನಾಯಿತೀಗ ?" ಎನ್ನುತ್ತ ಹತ್ತಿರವಾದಾಗ ಹೇಳಿದನಾತ,

"ಶನಿ ನಮ್ಮ ಬೆನ್ನು ಹಿಡಿದಿದ್ದಾನಮ್ಮಾ. ತೋಟದ ತೆಂಗು ಪೂರ್ತಿ ಖಾಲಿಯಾಗಿದೆ; ಬೊಂಡ ಕೂಡ ಉಳಿಸಿಲ್ಲ." ಸಂಕಟದಿಂದ ನಡುಗುತ್ತಿದ್ದ ಆ ದನಿಯನ್ನು ಕೇಳುತ್ತಿದ್ದಂತೆ ಆಕೆಯ ಮೋರೆ ಬಿಳುಪೇರಿತು.

"ನಿಜವೇನೋ ?" ಸುದ್ದಿ ಸತ್ಯವೇ ಎಂದು ರಾಮುವಿದ್ದ ಸ್ಥಿತಿಯಿಂದಲೇ ತಿಳಿದರೂ, ತಮಗಾದ ಆಘಾತದಲ್ಲಿ ಹಾಗಂದ ಪಾರ್ವತಮ್ಮ ಜತೆಗೇ ಬಡಬಡಿಸಿದರು. "ನಿಜವೆ, ಏನಾಗಿ ಹೋಯಿತು ನಮಗೆ ? ಯಾಕೀ ರೀತಿ ದೇವರು ಪರೀಕ್ಷೆ ಒಡ್ಡುತ್ತಿದ್ದಾನೋ ?"

ಆ ವೇಳೆಗೆ ಸ್ವಲ್ಪ ಚೇತರಿಸಿಕೊಂಡಿದ್ದ ರಾಮು ಹೇಳಿದ.

"ಊರಲ್ಲೆಲ್ಲ ಕಳ್ಳತನ ಜಾಸ್ತಿಯೆಂದು ಸುದ್ದಿಯಿತ್ತು. ಹಾಗಾಗಿ ನಿನ್ನೆ ರಾತ್ರಿ ಕೂಡ ಒಮ್ಮೆ ಹೋಗಿ ಬ್ಯಾಟರಿ ಹಾಯಿಸಿ ನೋಡಿದ್ದೆ. ಆಗ ಇತ್ತು. ಬೆಳಗಾಗೆದ್ದು ಹೋದರೆ," ಅವನಿನ್ನೂ ಹೇಳುತ್ತಿದ್ದಂತೆ, ಆ ವೇಳೆಗೆ ಅಲ್ಲಿಗೆ ಬಂದು ನಿಂತಿದ್ದ ಜಲಜ ಮಧ್ಯೆ ಬಾಯಿ ಹಾಕಿದಳು, "ಕಳವು ಇರುವ ವಿಚಾರ ಗೊತ್ತಾಗಿಯೂ ಯಾಕೆ ಸುಮ್ಮನಿದ್ದಿರಿ ? ನಿನ್ನೆಯೇ ತೆಗೆಯಬಹುದಿತ್ತು."

ಈಗ ರಾಮುವಿಗೆ ತುಸು ರೇಗಿತು. ಎಂದೇ ತಕ್ಷಣ ವ್ಯಂಗ್ಯವಾಡಿದ, "ಹೌದೌದು, ತೆಗೆಯಬೇಕಿತ್ತು, ನಾನೋ, ನೀನೋ ಮರಹತ್ತಿದರೆ ಹೀಗಾಗುತ್ತಿರಲಿಲ್ಲ."

ಜಲಜಳ ಮೋರೆಯೀಗ ಕಂದಿತು. ರಾಮುವಿಗೆ ಮರವೇರಲು ತಿಳಿಯದೆಂದು ತನಗೂ ಗೊತ್ತು. ಇನ್ನು ನಿನ್ನೆಯ ಆಳು ಹೊಸಬ. ಖಾಯಂ ಇಲ್ಲಿಗೆ ಬರುವವನಲ್ಲ. ಅದೆಲ್ಲ ಗೊತ್ತಿದ್ದೂ ತಾನು ಹಾಗನ್ನಬಾರದಿತ್ತು.... ಅವಳು ತನ್ನೊಳಗೇ ಯೋಚಿಸುತ್ತ ಮೌನ ತಳೆದಾಗ ಕೋಪವಿನ್ನೂ ಇಳಿದಿರದ ರಾಮು ದನಿ ಏರಿಸಿ ನುಡಿದ, "ಮಹಾ ಬುದ್ಧಿವಂತೆ ಎಂದುಕೊಂಡಿದ್ದೀ ಅಲ್ಲವೆ ? ನಡೆ ನಡೆ, ನಿನ್ನ ಕೆಲಸ ನೋಡು,"

ಇಷ್ಟೆಲ್ಲ ಆದಾಗ ಜನ್ನಯ್ಯನವರೂ ಎದ್ದು ಬಂದಿದ್ದರು. ಹಾಗೂ ಈ ತನಕ ಅಲ್ಲಿಯೇ ನಿಂತಿದ್ದರು. ಯಾವಾಗ ರಾಮು ಹಾಗೆಂದು ಜಲಜ ಮೋರೆ ದುಮ್ಮಿಸಿಕೊಂಡು ಒಳಗೆ ಹೋದಳೋ, ಆ ಕ್ಷಣವೇ ಅವರೂ ಹೊರಟರು. ನಡೆದ ಘಟನೆ, ಅದೂ ಚಿಲ್ಲರೆ ಕಳವಲ್ಲ, ಹೆಚ್ಚು ಕಮ್ಮಿ ಐನೂರು ಆರ್‍ನೂರು ತೆಂಗಿನಕಾಯಿಗಳ ಕಳವಿನ ಬಗ್ಗೆ ಒಂದೇ ಒಂದು ಮಾತನ್ನೂ ಆಡದೇ ಅಪ್ಪ ಹಾಗೆ ಹೊರಟೇ ಹೋದಾಗ ಸಹಜವಾಗಿಯೆ ರಾಮು ಖತಿಗೊಂಡು ದೂರಿದ, "ನೋಡಮ್ಮ ಅಪ್ಪನ ರೀತಿ."

ಏನೂ ಸಂಬಂಧವೇ ಇಲ್ಲದ ಹಾಗಿರುವ ಗಂಡನ ನಡತೆ ಪಾರ್ವತಮ್ಮನವರಿಗೂ ಬೇಸರ ಹುಟ್ಟಿಸಿತ್ತಾದರೂ, ಅವರ ಸ್ಥಿತಿಯೂ ನೆನಪಿತ್ತಾಗಿ ಮಗನಿಗೆ ಸಾಂತ್ವನ ಹೇಳಿದರಾಕೆ, "ಅವರಿಗೂ ಮೈ ಸರಿಯಿಲ್ಲ ಕಣಪ್ಪ. ನಿನ್ನೆ ಇರುಳಿಡೀ ಜ್ವರ ಹಾಯುತ್ತಿತ್ತು."

ರಾಮು ಅದಕ್ಕೇನೂ ಉತ್ತರಿಸದೇ ಕ್ಷಣ ಕಾಲ ಕೂತವನು, ನಂತರ ಎದ್ದು ಒಳಹೋಗುತ್ತ ಹೇಳಿದ, "ಒಟ್ಟಿನಲ್ಲಿ ಈಗೀಗ ಇಲ್ಲಿ ಯಾವುದೂ ಸರಿಯಾಗಿಲ್ಲ. ನಮ್ಮ ಎಲ್ಲರ ಗ್ರಹಚಾರವೂ ಹಾಳೋ ಏನೋ ? ಯಾರಿಗೆ ಗೊತ್ತು ?"

ತೋಟದಲ್ಲಿ ಕಳವಾಗಿ ಏಳೆಂಟು ದಿನಗಳು ಉರುಳಿದ್ದವು. ಈ ಅವಧಿಯಲ್ಲಿ ರಾಮು ಹೇಳಿದ್ದ 'ಗ್ರಹಚಾರ'ದ ಸಂಗತಿ ಸತ್ಯವೇ ಇದ್ದೀತೆಂದು ಪಾರ್ವತಮ್ಮನವರಿಗೆ ಬಲವಾಗಿ ಅನ್ನಿಸತೊಡಗಿತ್ತು. ಅದಕ್ಕೆ ಮುಖ್ಯ ಕಾರಣ ಜನ್ನಯ್ಯ. ಒಬ್ಬರ ವರ್ತನೆಗಳ ಬಗ್ಗೆ ಶಂಕೆ ಜನಿಸಿದಾಗ ಆ ವ್ಯಕ್ತಿಯ ನಡತೆಯ ಬಗ್ಗೆ ಹೆಚ್ಚಿನ ನಿಗಾ ವಹಿಸುವುದು ಮನುಷ್ಯ ಸಹಜಗುಣ. ಇಲ್ಲಂತೂ ಆಕೆ ಜನ್ನಯ್ಯನವರ ಪತ್ನಿಯೇ ಆಗಿದ್ದರಾಗಿ, ಅವರ ಗುಣ, ಸ್ವಭಾವಗಳೆಲ್ಲವೂ ಆಕೆಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದಲೆ ಇತ್ತೀಚೆಗಿನ ಬದಲಾವಣೆ ಅವರಿಗೆ ಗೋಚರಿಸಿದ್ದೂ, ಆ ಕುರಿತು ಆಕೆ ಚಿಂತಿಸಲಾರಂಭಿಸಿದ್ದೂ ಆಗಿತ್ತು. ಹೀಗಿದ್ದಾಗಲೆ ತೋಟದ ಕಳವಾಗಿದ್ದು. ಅನಂತರವೂ ಜನ್ನಯ್ಯನವರ ವರ್ತನೆ ಸ್ವಲ್ಪ ಅತಿರೇಕಕ್ಕೆ ಇಟ್ಟುಕೊಂಡಿತು. ಆದರೆ ಇಷ್ಟೇ, ಆ ಬಗ್ಗೆ ಪಾರ್ವತಮ್ಮನ ಹೊರತಾಗಿ ಮನೆಯ ಉಳಿದವರಿಗೆ ಅಷ್ಟಾಗಿ ತಿಳಿಯಲಿಲ್ಲ. ಕಾರಣ, ರಾಮು ಅವನದೇ ತಲೆಬಿಸಿಯಲ್ಲಿದ್ದನಾದರೆ, ಜಲಜಳಿಗೆ ಮನೆಗೆಲಸದಲ್ಲಿ ಬಿಡುವಾಗುತ್ತಿದ್ದುದೇ ಕಡಿಮೆ. ಇನ್ನು ಉಳಿದವಳು ಬಾಣಂತಿ ಸರೋಜ. ಅವಳಂತೂ ರೂಮಿನೊಳಗೇ ಇರುತ್ತಿದ್ದವಳು. ಹೀಗಾಗಿ ಜನ್ನಯ್ಯ ಒಬ್ಬರೇ ಇದ್ದಾಗ ತಮ್ಮಷ್ಟಕ್ಕೇ ಗೊಣಗಿಕೊಳ್ಳುವುದು, ನಗುವುದು, ಇಲ್ಲವೆ ಎದುರಿಗೆ ಇಲ್ಲದವರಿಗೆ ಕೈ ಬೀಸಿ ಹೊಡೆಯಹೋಗುವುದು ಈ ಎಲ್ಲ ಅತಿರೇಕಗಳು ಪಾರ್ವತಮ್ಮನ ಹೊರತಾಗಿ ಯಾರಿಗೂ ತಿಳಿಯಲಿಲ್ಲ. ಗಂಡನ ವರ್ತನೆಗಳನ್ನೇ ಸೂಕ್ಷ್ಮವಾಗಿ ನಿರೀಕ್ಷಿಸುತ್ತಿರುತ್ತಿದ್ದ ಆಕೆ, ಸಹಜವಾಗಿ ದಿಕ್ಕೆಟ್ಟರು. ಆದರೂ ಆಕೆಯದು ಗಟ್ಟಿಮನಸ್ಸು. ಎಂದೇ ಆ ಬಗ್ಗೆ ಚಿಂತಿಸಿ ಬಳಲಿದ ಅವರು ಕೊನೆಗೆ, "ಏನಾದರಾಗಲಿ, ಈ ಎಲ್ಲ ವರ್ತನೆಗಳಿಗೇನರ್ಥ ಎಂದವರಲ್ಲಿಯೇ ಕೇಳಿಬಿಡುವುದು. ಅದಕ್ಕೆ ಸರಿಯಾದ ಉತ್ತರ ಸಿಕ್ಕಿದರೆ ಒಳ್ಳೆಯದೇ. ಇಲ್ಲವೆಂದರೆ ಆದಷ್ಟೂ ಬೇಗ ಯಾರಾದರೂ ಮಂತ್ರವಾದಿ ಕೈಲಿ ಒಂದು ತಾಯಿತ ಕಟ್ಟಿಸಿಬಿಡಬೇಕು," ಎಂದು ತಮ್ಮಲ್ಲಿಯೆ ನಿರ್ಧರಿಸಿಕೊಂಡರು.

ಆದರೆ ಗಂಡನಲ್ಲಿ ಆ ಬಗ್ಗೆ ಬಿಡುವಾಗಿ ಪ್ರಶ್ನಿಸಲು ಅಂದು ಅವರಿಗೇ ಬಿಡುವಾಗಲಿಲ್ಲ.

ಮರುಸಂಜೆ ಮಗು ಮಲಗಿತ್ತು. ಜಲಜ ಬಾಳೆಲೆ ಕೊಯ್ದು ತರಲು ತೋಟಕ್ಕೆ ಹೋಗಿದ್ದಳು. ರಾಮು ಕೂಡ ಎಲ್ಲಿಗೋ ತೆರಳಿದ್ದನಾಗಿ ಪಾರ್ವತಮ್ಮ ನೇರ ಚಾವಡಿ ಜಗಲಿಗೆ ಬಂದರು. ಹಾಗೂ ಅವರ ನಿರೀಕ್ಷೆ ಸರಿ ಎನ್ನುವಂತೆ ಜನ್ನಯ್ಯ ಅಲ್ಲಿ ಕೂತಿದ್ದರು. ಆದರೆ ಹೇಗೆ ಮಾತು ಮೊದಲು ಮಾಡಬೇಕೆಂದು ಆಕೆ ಚಿಂತಿಸುತ್ತಿದ್ದಾಗ ಆತನೇ ಕೇಳಿದರು, "ಪಾರ್ವತಿ, ನಾನೊಂದು ಹೇಳಲೆ ?"

ಆ ಪ್ರಶ್ನೆ, ಅದಕ್ಕಿಂತಲೂ ಹೆಚ್ಚಾಗಿ ಆತ ತನ್ನ ಹೆಸರು ಹಿಡಿದು ಕರೆದದ್ದು ಆಕೆಯನ್ನು ಚಕಿತರನ್ನಾಗಿಸಿತು. ಕಾರಣ, ಜನ್ನಯ್ಯ ಪತ್ನಿಯ ಹೆಸರು ಹೇಳುವ ಕ್ರಮ ತೀರಾ ಅಪರೂಪದ್ದಾಗಿತ್ತು. ಅದೂ ಅಲ್ಲದೇ ಆ ದನಿಯಲ್ಲಿದ್ದ ಏನೋ ಒಂದು ಕಾತರ ಕೂಡ ಆಕೆಯ ಮನಸ್ಸನ್ನು ತಟ್ಟಿತಾಗಿ ತಕ್ಷಣವೇ ನುಡಿದರಾಕೆ, "ಧಾರಾಳವಾಗಿ ಹೇಳಿ, ಅದಕ್ಕೇಕೆ ಇಷ್ಟು ಯೋಚನೆ ?"

"ಹಾಗಲ್ಲ..... ನಾನು..... ನಾನು" ಅಷ್ಟೆಂದು ಕ್ಷಣ ನಿಲ್ಲಿಸಿದ ಆತ, ತಟ್ಟನೆ ಕೇಳಿದರು- "ನಾನು ಸುಧಾಕರನನ್ನು ಹುಡುಕಿ ಇಲ್ಲಿಗೆ ಕರೆತರುವಾ ಎಂದುಕೊಂಡಿದ್ದೇನೆ. ಆದೀತಲ್ಲವೆ ?"

ಈಗಾಕೆಗೆ ಸ್ವಲ್ಪ ಸಿಟ್ಟು ಬಂತಾದರೂ ಅವರ ದನಿಯಲ್ಲಿ ತಾನೇ ತಾನಾಗಿದ್ದ ಯಾಚನೆ, ಆ ಸಿಟ್ಟಿಗೆ ಕಡಿವಾಣ ಹಾಕಿತು. ಎಂದೇ ಆದಷ್ಟೂ ಶಾಂತರಾಗಿರಲು ಯತ್ನಿಸುತ್ತ ಬದಲಿತ್ತರಾಕೆ,

"ನಮ್ಮ ಆರ್ಥಿಕ ಪರಿಸ್ಥಿತಿ ದಿನೇ ದಿನೇ ಕೆಡುತ್ತಿದೆ. ಅಂತಹುದರಲ್ಲಿ ನೀವು ಅವನ ಕರೆತಂದು, ಆ ಜವಾಬ್ದಾರಿ ಬೇರೆ ಹೊತ್ತುಕೊಳ್ಳುವ ಅಂದಾಜಿನಲ್ಲಿದ್ದೀರಿ. ಅದೇನು ಮಕ್ಕಳಾಟಿಕೆಯ ?"

"ಮಕ್ಕಳಾಟಿಕೆ ಅಲ್ಲವೆಂದು ತಿಳಿದೇ ಹೇಳಿದೆ," ಆಕೆಯ ಪ್ರಶ್ನೆಗೆ ತಕ್ಷಣವೇ ಉತ್ತರಿಸಿದ ಜನ್ನಯ್ಯ ಜತೆಗೆ, "ಪಾಪ, ತಾಯಿ ಇಲ್ಲದ ತಬ್ಬಲಿ ಹುಡುಗ ಇರಲಿ ನಮ್ಮೊಂದಿಗೇ. ಹೇಗೋ ಆಗುತ್ತದೆ," ಎಂದೂ ಸೇರಿಸಿದಾಗ ಮಾತ್ರ ಆಕೆಗೆ ರೇಗಿ ಹೋಯಿತು. ಎಂದೇ ಖಾರವಾಗಿ ಪ್ರತಿಕ್ರಿಯಿಸಿದರಾಕೆ,

"ಮೊನ್ನೆ ತೋಟದಲ್ಲಿ ಅಷ್ಟು ದೊಡ್ಡ ಕಳವಾದಾಗ ಕೂಡ ಏನೇನೂ ಸಂಬಂಧಪಡದವರಂತೆ ಸುಮ್ಮನೇ ಇದ್ದಿರಿ. ಅದೇ ಆ ಮಾಣಿಗಾಗುವಾಗ....."

ಆಕೆ ಹೇಳುತ್ತಿದ್ದಂತೇ ಜನ್ನಯ್ಯ ಗಂಟಲೊಳಗೇ ಗೊಣಗಿಕೊಂಡರು, "ಮಾಡಬಾರದ್ದು ಮಾಡಿದರೆ ಆಗಬಾರದ್ದೇ ಆಗುವುದಲ್ಲವ ? ಅದನ್ನು ಸರಿಮಾಡೋಣವೆಂದೇ ಅವನನ್ನು ಕರೆದು ತರುವ ಎಂದೆ."

ಇಳಿದನಿಯಲ್ಲಿಯೇ ಆತ ಹಾಗಂದಿದ್ದರೂ ಪಾರ್ವತಮ್ಮ ಹತ್ತಿರವೇ ಇದ್ದುದರಿಂದ ಅದೆಲ್ಲವೂ ಅವರಿಗೆ ಕೇಳಿಸಿ ಆಕೆ ಅವಾಕ್ಕಾದರು. 'ಅಲ್ಲ, ಹೀಗೂ ಇದೆಯ ? ನಿಜಕ್ಕೂ ಇವರಿಗೆ ಮರುಳೇ. ಅವನಿಗೆ ಆ ದಿನ ಹಣ ಕೊಡದೇ ಕಳಿಸಿದ್ದಕ್ಕೇ ಹೀಗಾಯಿತೆನ್ನುತ್ತಾರಲ್ಲ ? ಹಾಗೆ ಕೇಳಿದೊಡನೆ ಕೊಟ್ಟುಬಿಡಲು ಸುಧಾಕರನೇನು ಮನೆಮಗನೆ ? ಛೇ, ಇವರ ಬುದ್ಧಿಯೆ ? ಇದು ನನ್ನ ಹತ್ತಿರ ಹೇಳಿದ್ದಕ್ಕಾಯಿತು. ಒಂದು ವೇಳೆ ರಾಮುಗೆ ಕೇಳಿಸಿಬಿಟ್ಟರೆ ರಂಪವೇ ಆಗುತ್ತಿತ್ತು,' ಆಕೆ ತಮ್ಮೊಳಗೇ ತರ್ಕಿಸುತ್ತಿದ್ದಾಗ ಜನ್ನಯ್ಯ ಮತ್ತೆ "ನಾಳೆಯೇ ನಾನು ಹೋಗಿ ಹುಡುಕಲೆ ?" ಎಂದು ಪತ್ನಿಯ ಮೋರೆಯನ್ನು ದಿಟ್ಟಿಸಿದರು.

ಮನೆಯ ಬೇರೆ ಯಾವುದೇ ವಿಚಾರದಲ್ಲಿಯೂ ಆಸಕ್ತಿ ಇರದೆ, ಬರೀ ಸುಧಾಕರನನ್ನು ಹುಡುಕಿ ಕರೆತರುವುದೊಂದರಿಂದಲೇ ತಮಗೆ ಶಾಂತಿ ಎಂಬ ಧಾಟಿಯಲ್ಲಿ ಆ ಪ್ರಶ್ನೆ ಕೇಳಿದ್ದಲ್ಲದೇ, ತಾವು 'ಆಗಲಿ' ಎಂದೇ ಹೇಳುತ್ತೇವೆಂದು ನಿರೀಕ್ಷೆ ಮಾಡುವಂತಿದ್ದ ಜನ್ನಯ್ಯನವರ ಆ ಭಂಗಿ ಕಾಣುವಾಗ ಪಾರ್ವತಮ್ಮನವರಿಗೆ ಮೈಯೆಲ್ಲ ಉರಿಯಿತು. ಹಾಗೂ ಏರಿದ ಆ ಸಿಟ್ಟಿನುರಿಯಲ್ಲಿ ಜನ್ನಯ್ಯನವರ ಈಚೆಗೆ ಬದಲಾದ ವರ್ತನೆ ಕುರಿತಾಗಿ ಅವರಿಗಿದ್ದ ಆತಂಕ, ಗಂಡನ ಸ್ಥಿತಿ ಹೀಗೆಯೆ ಸಾಗಿದರೆ ಮುಂದೆ ಏನಾದೀತೆಂದು ಆಕೆಗಿದ್ದ ಕಳಕಳಿ ಇವೆಲ್ಲವೂ ಭಸ್ಮವಾಗಿ ಹೋದವು. 'ಅರವತ್ತಕ್ಕೆ ಅರಳುಮರುಳು ಎನ್ನುತ್ತಾರಲ್ಲ ? ಬಹುಶಃ ಇವರಿಗಾಗಿರುವುದೂ ಅದುವೆ. ಇಲ್ಲವಾದರೆ ಹೀಗೆಲ್ಲ ಆಡುತ್ತಿದ್ದರೆ ?' ತಮ್ಮೊಳಗೇ ಹೇಳಿಕೊಳ್ಳುತ್ತಿದ್ದ ಆಕೆಗೆ ಇದ್ದಕ್ಕಿದ್ದಂತೆ ಶಂಕೆಯೊಂದು ಜನಿಸಿತು. ಆ ಸಂದೇಹಕ್ಕೆ ಕಾರಣವಾಗಿದ್ದ ಜನ್ನಯ್ಯನ ಕನವರಿಕೆಗಳೇ ಮೊದಲಾದ ಘಟನೆಗಳನ್ನು ಇನ್ನೊಮ್ಮೆ ನೆನಪಿಸಿಕೊಳ್ಳುತ್ತ ತಟ್ಟನೆ ಪ್ರಶ್ನಿಸಿದರು ಪಾರ್ವತಮ್ಮ

"ಅಲ್ಲ, ಇತ್ತೀಚೆಗೆ ಸುಧಾಕರನ ಮೇಲೆ ನಿಮಗೆ ಉಂಟಾಗಿರುವ ಈ ಅತಿ ಪ್ರೀತಿ, ಹಾಳಜಿಗಳಿಗೆ ಕಾರಣವೇನು ?" ಆ ಮಾತು ಕೇಳಿದ ತಕ್ಷಣ ಜನ್ನಯ್ಯನವರ ಮೋರೆ ತುಸು ಬಿಳುಚಿಕೊಂಡಿತಾಗಿ ಅವರ ಸಂದೇಹಕ್ಕೆ ಇಂಬು ದೊರೆತ ಹಾಗಾಯಿತು. ಜತೆಗೇ ಒಂದು ರೀತಿಯ ವಿಷಾದಭಾವ ಕೂಡ ಮನಸ್ಸನ್ನು ತುಂಬಿಕೊಂಡಿತು. 'ಛೇ, ಹೋಗಿ ಹೋಗಿ ಆ ಬಡಹೆಂಗಸಿನ ಉಳಿಕೆಗೆ ಕೈ ಹಾಕಿದರೆ ?' ತಮ್ಮಲ್ಲಿಯೇ ಚಿಂತಿಸುತ್ತಲೇ ಮತ್ತೆ ಆಕೆ ಹೇಳಿದರು,

"ಒಂದು ವೇಳೆ..... ಒಂದು ವೇಳೆ ನೀವು ಕಮಲಮ್ಮನ ಆ ಹಣವನ್ನು ಪೂರ್ತಿ ಸುಧಾಕರನಿಗೆ ಕೊಟ್ಟಿಲ್ಲವೆಂದಾದರೆ," ದುಗುಡವೇ ತಾನಾಗಿದ್ದ ಆ ಮಾತುಗಳನ್ನಾಕೆ ಪೂರಾ ಆಡಿ ಮುಗಿಸಬೇಕಿದ್ದರೆ ಮಧ್ಯೆಯೇ ಜನ್ನಯ್ಯನವರ ಕಾತರದ ದನಿ ಕೇಳಿಸಿತು.



"ಇಲ್ಲ, ಖಂಡಿತಕ್ಕೂ ನಾನು ಹಾಗೆ ಮಾಡಿಲ್ಲ ಪಾರ್ವತೀ. ನನ್ನನ್ನು ನಂಬು."

ಈಗ ಪಾರ್ವತಮ್ಮನವರಿಗೆ ನಿರಾಳವಾಯಿತಾದರೂ ಗಂಡನ ವರ್ತನೆಯ ಬಗ್ಗೆ ಮತ್ತೆ ಸಿಟ್ಟು ಹುಟ್ಟಿತು. "ಹಾಗಿದ್ದರೆ ಇದು 'ದಾನಶೂರಕರ್ಣ' ಎನಿಸಿಕೊಳ್ಳುವ ಚಪಲ. ಅವಳಿರುವ ತನಕ ಬಿಟ್ಟಿಯಾಗಿ ವಾಸ ದೊರೆತಿತ್ತು. ಇನ್ನು ಅವಳ ಮಗನಿಗೆ ಬದುಕಿನ ದಾರಿ ತೋರಿಸಿಕೊಡದೇ ಇದ್ದರೆ ಆದೀತೆ ?"

ಆಕೆ, ಮತ್ತೆ ಏರಿದ ಸಿಟ್ಟಿನಲ್ಲಿ ವ್ಯಂಗ್ಯವಾಡಿದಾಗ ಜನ್ನಯ್ಯ ಕ್ಷಣಕಾಲ ಮೌನಿಗಳಾಗಿದ್ದರೂ ನಂತರ ಯೋಚನೆಯ ದನಿಯಲ್ಲಿ, "ಹಾಗಲ್ಲ, ಇಲ್ಲಿ ಸ್ವಲ್ಪ ಕೇಳು," ಎಂದರು.

"ಏನನ್ನು ಕೇಳಬೇಕು ನಾನು ? ಮತ್ತೆ ಅದೇ ಆ ದಾನದ ಮಾತನ್ನೇ ತಾನೆ ?" ಆಕೆ ಅಸಹನೆಯಿಂದ ಹಾಗನ್ನುತ್ತಿದ್ದಾಗ ಒಳಗಿನಿಂದ ಮಗು ಅತ್ತ ಸದ್ದು ಕೇಳಿಸಿತು. ಮತ್ತು 'ಓ, ಮಗು ಎದ್ದಿರಬೇಕು' ಎಂದಾಕೆ ಯೋಚಿಸುತ್ತಿದ್ದಾಗಲೇ ಸರೋಜ 'ಅಮ್ಮ' ಎಂದುದೂ ಕೇಳಿಸಿತಾಗಿ ಆಕೆ ಆ ಕ್ಷಣವೇ ಒಳಗೆ ಹೊರಟುಹೋದರು.



ಮರು ಬೆಳಗ್ಗೆ ಎದ್ದಾಗ ಪಾರ್ವತಮ್ಮ ತೀರಾ ಬಳಲಿದ್ದರು. ಕಾರಣ ಮುನ್ನಾದಿನದ ಇರುಳು ಜನ್ನಯ್ಯ ಯಾವಾಗಿನಷ್ಟೂ ನಿದ್ರಿಸಿರಲಿಲ್ಲ. ಒಂದಷ್ಟು ವೇಳೆ ಮಂಪರಿನಲ್ಲಿರುವುದು, ತಟ್ಟನೆ ಬೆಚ್ಚಿ ಬೀಳುವುದು, ಏನೇನೋ ಅಸ್ಪಷ್ಟ ಮಾತುಗಳನ್ನಾಡುವುದು ಎಂಬಿವೇ ಮೊದಲಾದ ಅವರ ವರ್ತನೆಗಳು ಆಕೆಗೆ ನಿದ್ದೆ ಬರಲು ಬಿಟ್ಟಿರಲಿಲ್ಲ. ಹಾಗೂ ಗಂಡನ ಆ ರೀತಿಯನ್ನು ಗಮನಿಸುತ್ತಲೇ ಇರುಳು ನೂಕಿದ ಆಕೆಗೆ ಒಂದಂತೂ ಸ್ಪಷ್ಟವಾಗಿತ್ತು- 'ಖಂಡಿತಕ್ಕೂ ಇದು ಆ ಮನೆಹಾಳಿ ಕಮಲಮ್ಮನ ಕೆಲಸವೇ. ಮಗ ತಿರುಗಾಲುತಿಪ್ಪ ಆಗಿದ್ದಾನೆಂಬುದಕ್ಕಾಗಿ ಈ ಪಾಪದವರನ್ನು ಸತಾಯಿಸುತ್ತಿದ್ದಾಳೆ. ಹ್ಞ! ಇಲ್ಲಿ ಜೀವದಲ್ಲಿದ್ದಾಗ ಎಷ್ಟು ವಿನಯಶೀಲೆಯಂತಿದ್ದಳು ? ಅಲ್ಲ, ಅದೆಲ್ಲ ಅವರವರ ನಸೀಬಲ್ಲವೆ ? ಸುಧಾಕರನಿಗೆ ಒಳ್ಳೆಯ ಕೆಲಸ ಸಿಗದೇ ಇದ್ದುದಾಗಲಿ ಸಿಕ್ಕಿದ ಕೆಲಸವನ್ನೂ ಅವ ಬಿಟ್ಟುದಾಗಲೀ ಎಲ್ಲ ಅವನ ಗ್ರಹಚಾರ. ಅದಕ್ಕೆ ಇವರನ್ನು ಹಿಡಿದುಕೊಂಡರೆ ಆದೀತೆ ? ಒಟ್ಟಿನಲ್ಲಿ ಇನ್ನು ತಡ ಮಾಡಿದರಾಗದು ಎನ್ನುವದಂತೂ ನಿಜ. ಇವತ್ತು ರಾಮುವಿನಲ್ಲಿ ಒಳ್ಳೆ ಮಂತ್ರವಾದಿಗಳು ಯಾರಿದ್ದಾರೋ ವಿಚಾರಿಸಿ ಕರೆತರಲು ಹೇಳಬೇಕು. ಆ ಶ್ರೀಧರ ಬರುವುದು ಯಾವಾಗಲೋ ?' ತಮ್ಮೊಳಗೇ ಹೀಗೆಲ್ಲ ತರ್ಕಿಸುತ್ತಲಿದ್ದ ಆಕೆ ಸೂಕ್ತ ಸಮಯಕ್ಕಾಗಿ ಕಾದರಾದರೂ ರಾಮುವಿನಲ್ಲಿ ಆ ಬಗ್ಗೆ ಮಾತನಾಡಲು ಆ ದಿನವಂತೂ ಅವರಿಗಾಗಲಿಲ್ಲ.

ಕಾರಣ, ಆ ಮಧ್ಯಾಹ್ನ ಸರೋಜಳ ಅತ್ತೆ ಮಾವ ಹಾಗೂ ಕೈ ಹಿಡಿದಾತ ಬಂದಿಳಿದರು. ಸರೋಜ ಹಡೆದು ತಿಂಗಳು ಮೂರು ದಾಟಿದ್ದುದೂ, ಅವಳನ್ನು ಕರೆದೊಯ್ಯಲು ಬರುವುದಾಗಿ ಅಳಿಯ ಆ ಮುನ್ನವೆ ಪತ್ರ ಹಾಕಿದ್ದುದೂ ಆಕೆಗೆ ನೆನಪಾದದ್ದು ಆಗಲೇ. ಹೀಗಿದ್ದರೂ ಅವಳು ಹೊರಡುವ ಬಗ್ಗೆ ವಿಶೇಷ ಸವರಣೆಯನ್ನು ಹೊಸತಾಗಿ ಏನು ಮಾಡಬೇಕಿರಲಿಲ್ಲ. ಚೊಚ್ಚಲ ಬಾಣಂತಿ ಹೋಗುವಾಗ ಹೊಸ ತೊಟ್ಟಿಲು ಕೊಡುವ ಕ್ರಮವಿದೆ ಎಂದು ತಿಳಿದಿದ್ದ ರಾಮು ಆ ಮೊದಲೊಮ್ಮೆ ಪೇಟೆಗೆ ಹೋಗಿದ್ದಾಗ ಹಿತ್ತಾಳೆಯ ತೊಟ್ಟಿಲೊಂದನ್ನು ಖರೀದಿಸಿ ತಂದಿಟ್ಟಿದ್ದ. ಮಾವ ಹಾಗೆ ತೊಟ್ಟಿಲು ತಂದಿದ್ದರೆ ಅಜ್ಜ ಜನ್ನಯ್ಯ ತಾವೂ ಹಿಂದೆ ಬೀಳದೇ ಬೆಳ್ಳಿಯ ಉಡುದಾರ ಹಾಗೂ ಕಾಲ್ಗೆಜ್ಜೆ ತಂದಿತ್ತಿದ್ದರು. ಇನ್ನು ಮಗುವಿಗಾಗಿ ಅಜ್ಜಿ ಹಳೆ, ಹೊಸ ಬಟ್ಟೆಗಳೆಂದು ಆಗಲೇ ತಯಾರು ಮಾಡಿ ಇರಿಸಿದ್ದರು. ಆದರೂ ಇಷ್ಟು ದಿನ ಮನೆಯಲ್ಲಿ ಕೇಳುತ್ತಿದ್ದ ಹಸುಕಂದನ ಅಳು ಇನ್ನು ಸದ್ಯಕ್ಕಂತೂ ಇಲ್ಲವಾಗುತ್ತದಲ್ಲ ಎಂದು ಆಕೆಗೆ ವ್ಯಥೆಯೆನ್ನಿಸಿತಾದರೆ ಜನ್ನಯ್ಯ ಬೀಗರು ಬಂದ ಕಾರಣಕೇಳಿ ಇನ್ನೂ ಮೋರೆ ಚಪ್ಪೆ ಮಾಡಿಕೊಂಡು ಕೂತರು. ಇದ್ದುದರಲ್ಲಿ ಸಮಾಧಾನವಾಗಿದ್ದವರು ರಾಮು ಮತ್ತು ಜಲಜ. ತಂಗಿ ಹಾಗೂ ಶಿಶು ತೆರಳಲಿರುವುದು ಅವನಿಗೆ ಸ್ವಲ್ಪ ಬೇಜಾರಾಗಿತ್ತಾದರೂ, ಅಷ್ಟು ಖರ್ಚು ಇನ್ನು ಉಳಿಯುವುದಲ್ಲ ಎಂಬ ಸಮಾಧಾನವೂ ಆಗಿದ್ದು ಸುಳ್ಳಲ್ಲ. ಜಲಜ

ಳಿಗಂತೂ ಅತ್ತಿಗೆ ತನ್ನ ನಂತರ ವಿವಾಹವಾಗಿದ್ದರೂ ಮೊದಲೇ ಕಂದನ ತಾಯಿಯಾಗಿದ್ದು ಒಳಗೇ ಅತೃಪ್ತಿ ಇತ್ತಾಗಿ ಅವಳು ಆ ಬಗ್ಗೆ ನಿರ್ಲಿಪ್ತಳಾಗಿಯೇ ಉಳಿದಳು. ಅಂತೂ ಯಾರೂ ಹೇಗೇ ಇದ್ದರೂ ಶಿಶು, ಬಾಣಂತಿಯರು ಮರುದಿನ ಬೆಳಗ್ಗೆ ರಾಹುಕಾಲ ದಾಟಿದ ನಂತರ ಹೊರಡುವುದೆಂದು ನಿಶ್ಚಯವಾಗಿದ್ದು ನಿಜ.

ಮರುದಿನ ಸಂಜೆ ಪಾರ್ವತಮ್ಮ ಚಾವಡಿಯಲ್ಲಿ ಹೂಬತ್ತಿ ಹೊಸೆಯುತ್ತ ಖಿನ್ನರಾಗಿ ಕೂತಿದ್ದರು. ಅವರ ಕೈ ಕೆಲಸ ಮಾಡುತ್ತಿತ್ತಾದರೂ ಮನಸ್ಸು ಮಾತ್ರ ಮಗಳನ್ನೂ, ಅವಳ ಅತ್ತೆ, ಮಾವಂದಿರನ್ನೂ ನೆನೆಯುತ್ತಿತ್ತು. 'ನಿಜವಾಗಿ ಬಾಣಂತಿ ಜತೆಗೆ ತಾವೂ ಹೋಗಬೇಕಿತ್ತು. ಆದರೆ ಮಗಳು ಅವಳಾಗಿಯೇ ಕೇಳಿದ್ದಳು. 'ನೀನೇನು ಮಾಡುತ್ತೀಯಮ್ಮ?' ಆದಕ್ಕೇನು ಹೇಳಬೇಕೋ ತೋಚದೇ ತಡಬಡಾಯಿಸಿದಾಗ ಮತ್ತೆ ಮೆಲ್ಲಗೆ ನುಡಿದಿದ್ದಳು, "ಅಪ್ಪ ಅಷ್ಟು ಹುಷಾರಾಗಿಲ್ಲ ಎಂದಲ್ಲವೆ ನಿನ್ನ ಚಿಂತೆ? ಹೋಗಲಿ ಬಿಡಮ್ಮ, ನೀನು ಬರದೇ ಇದ್ದರೂ ಸುಧಾರಿಸಿಕೊಂಡೇನು. ಒಟ್ಟಿನಲ್ಲಿ ಅಪ್ಪ ಮೊದಲಿನಂತೆ ಆಗಿದ್ದರೆ ಸಾಕಿತ್ತು.' ಆ ಮಾತು ತಮ್ಮ ಕಣ್ಣಲ್ಲಿ ಪಸೆ ಊರಿಸಿದ್ದರೂ ಬಾಣಂತಿ ಮುಂದೆ ಅಳಬಾರದೆನ್ನುವ ವಿವೇಕ ತಡೆದಿತ್ತು. ಸರೋಜ ಬಲು ಸೂಕ್ಷ್ಮದ ಹುಡುಗಿ. ಇಲ್ಲವಾದರೆ ಸುಧಾಕರನಿಗೆ ಆ ದಿನ ಹಣ ಕೊಡದೇ ಕಳಿಸಿದ್ದರ ವಿಚಾರ ಮಾತ್ರವೇ ಅವಳಲ್ಲಿ ಹೇಳಿದ್ದು ತಾವು. ಉಳಿದ ಸಂಗತಿ ಯಾವುದೂ ಅವಳ ಮುಂದೆ ಬಿಚ್ಚಿರಲಿಲ್ಲ- ಬಾಣಂತಿಗೆ ಆ ತಲೆ ಹರಟೆಗಳೆಲ್ಲ ಏಕೆ ಎಂಬ ದೃಷ್ಟಿಯಿಂದ. ಆದರೆ ಅವಳು ಅವಳಷ್ಟಕ್ಕೇ ಗೊತ್ತು ಮಾಡಿಕೊಂಡಳಲ್ಲ? ಹುಂ, ತಾವೂ ಹೆಡ್ಡಿಯೇ. ಅಪ್ಪ ಅಂದರೆ ಮಗಳಿಗೆ ಜೀವ. ಅಪ್ಪನಿಗಾದರೆ ಮತ್ತೇನು? ಮೂರು ಹೊತ್ತೂ ಸರೋಜಾ ಸರೋಜಾ ಅನ್ನುತ್ತಲೇ ಇರಬೇಕು. ಆದಕ್ಕೇ ಅಲ್ಲವೆ ಅವಳ ಮದುವೆ ಕೂಡ ಹಾಗೆ ಹುಡಿ ಹಾರಿಸಿದ್ದು? ಅಂತಹ ಅಪ್ಪ ಆ ಸುಧಾಕರನ ಸುದ್ದಿ ಜಲಜಳ ಅಪ್ಪ ಹೇಳಿದ ದಿನದಿಂದಲೂ ತೀರ ಬದಲಾಯಿಸಿದರಲ್ಲ? ಹಾಗೆಂದು ತೀರಾ ಅಲಕ್ಷಿಸಿರಲಿಲ್ಲ ಮಗಳನ್ನು. ಮಗುವನ್ನು ಆಗೀಗ ಎತ್ತಿಕೊಳ್ಳುತ್ತ ಇದ್ದರಾದರೂ ಆ ಮೋರೆಯಲ್ಲಿ 'ಕಳೆ' ಎನ್ನುವುದು ಇರದೇ ಎಷ್ಟು ದಿನಗಳಾಗಿತ್ತೋ. ಅದನ್ನು ಹುಡುಗಿ ಸರಿಯಾಗಿಯೇ ಗುರ್ತಿಸಿದ್ದಾಳೆ. ಇನ್ನು ಅವಳ ಅತ್ತೆ-ಮಾವಂದಿರಾದರೂ ಒಳ್ಳೆಯವರೇ. 'ಸರೋಜ ಹೇಳಿದಳು ಎಲ್ಲ. ತೊಂದರೆ ಇಲ್ಲ. ನೀವು ಬರದೇ ಇದ್ದರೆ. ಹಾಗೆ ನಾವಿಲ್ಲ ಇಲ್ಲವೆ?' ಎಂದರಲ್ಲವೆ ಇಬ್ಬರೂ. ಆ ಮಟ್ಟಿಗೆ ಸರೋಜ ಪುಣ್ಯ ಮಾಡಿದ್ದಳಪ್ಪ. ಇಲ್ಲವಾದರೆ ಇಂಥ ವೇಳೆಯಲ್ಲಿ ತಾವೇನು ಮಾಡಬೇಕಿತ್ತು? ಅತ್ತ ಮಗಳನ್ನು ಬಿಡಲಿಕ್ಕೂ ಇಲ್ಲ, ಇತ್ತ ಕೈ ಹಿಡಿದವರನ್ನು ಕಡೆಗಣಿಸುವಂತೆಯೂ ಇಲ್ಲ.

ತಮ್ಮ ಯೋಚನೆ ಅಲ್ಲಿಗೆ ಮುಟ್ಟಿದಾಗ ಆಕೆಗೆ ತಟ್ಟನೆ ಜನ್ನಯ್ಯನವರ ನೆನಪಾಯಿತು. 'ಎಲ್ಲಿ ಹೋದರಪ್ಪ? ಕಾಣುವುದೇ ಇಲ್ಲವಲ್ಲ ಇಲ್ಲಿ? ಬಹುಶಃ ತೋಟ, ಗದ್ದೆ ಅಂತ ಹೋದರೋ? ಮಗಳು ಹೋಗುತ್ತಾಳೆಂದು ತಿಳಿದಾಗಲೇ ಮೋರೆ ಬಾಡಿಸಿಕೊಂಡಿದ್ದವರಿಗೆ, ಅವಳು ಹೋಗಿಯೇ ಬಿಟ್ಟಾಗ ಕಣ್ಣೀರೇ ಬಂದಿತ್ತು. ಆದರೆ ತಾವು ಅದನ್ನು ನೋಡಿದರೂ ನೋಡದಂತೆ ನಟಿಸಿದ್ದರು. ಅಂಥ ದುಃಖಕ್ಕೆಲ್ಲ ಕಾಲವೇ ಮದ್ದೆಂದು ತಮಗೆ ತಿಳಿಯದ್ದೆ? ತಮ್ಮೊಳಗೇ ಯೋಚಿಸುತ್ತಿದ್ದ ಆಕೆ ಮತ್ತೆ, 'ನಾಳೆ ರಾಮುವನ್ನು ಮಂತ್ರವಾದಿಯ ಬಳಿಗೆ ಕಳಿಸಬೇಕು. ನಿನ್ನೆಯೂ ಇರುಳು ಇವರಿಗೆ ನಿದ್ದೆ ಇಲ್ಲವಲ್ಲ!' ಎಂದುಕೊಳ್ಳುತ್ತಿದ್ದಾಗಲೇ ಅಂಗಳದ ದಣಪೆ ಸದ್ದು ಮಾಡಿತು. 'ಯಾರಪ್ಪ ಈಗ?' ಎಂದು ನೋಡಿದರೆ ವಾಸ್ತೇವಯ್ಯ. ಕಮಲಮ್ಮ ಹೋದ ಸಮಯದಲ್ಲಿ ಒಂದೆರಡು ಸಲ ಬಂದಿದ್ದ ಆತನನ್ನು ಮತ್ತೆ ಆಕೆ ಕಂಡಿರಲಿಲ್ಲ. ಮೇಲಾಗಿ ಆಗಷ್ಟೇ ಮಗಳು ಹೋಗಿದ್ದರಿಂದ ಮನೆ ಕೂಡ 'ಬಿಕೋ' ಎನ್ನುತ್ತಿತ್ತು. ಹೀಗಾಗಿ ತುಸು ಖುಷಿಯಿಂದಲೇ ಪಾರ್ವತಮ್ಮ "ಬನ್ನಿ, ಬನ್ನಿ, ಭಾರೀ ಅಪರೂಪ," ಎನ್ನುತ್ತಲೇ ಆತನನ್ನು ಸ್ವಾಗತಿಸಿದರು.

ಹಾಗೆ ಬಂದವರಿಗೆ ಆಸರು ನೀಡಿದ ಬಳಿಕ ಶುರುವಾಯ್ತು ಲೋಕಾಭಿರಾಮ.

ಸರೋಜ ಆ ದಿನವೆ 'ಹತ್ತೆದ್ದು' ತೆರಳಿದ್ದು ತಮ್ಮ ತೋಟದ ತೆಂಗಿನ ಕಳವು ಇತ್ಯಾದಿಗಳನ್ನು

ಪಾರ್ವತಮ್ಮ ಹೇಳಿಕೊಂಡರೆ, ಆತ ತನ್ನ ಪತ್ನಿಯ ಕಾಯಿಲೆ, ದನಕರುಗಳ ಅವಸ್ಥೆ ಎಲ್ಲ ನಿರೂಪಿಸಿ ಕೊನೆಗೆ ಹೇಳಿದರು,

"ಒಳಗೆ ಅಡಿಗೆಗೊಂದು ಜನವಿಲ್ಲದೆ ಭಾರೀ ತಾಪತ್ರಯವಾಗಿದೆ ಅಕ್ಕ. ನಿಮಗೆ ಯಾರಾದರೂ ಗೊತ್ತ? ಒಳ್ಳೆಯವರಾಗಿರಬೇಕು ಆ ಕಮಲಮ್ಮ ನಂತ."

ಆತ ಹಾಗಂದಾಗ ಪಾರ್ವತಮ್ಮನವರಿಗೆ ಒಳಗೇ ರೇಗಿತು. 'ಒಳ್ಳೆಯವಳಂತೆ ಆ ಮಳ್ಳಿ. ಕಾಣುವುದಿಲ್ಲವೆ ಇಲ್ಲಿನ ಕಥೆ?'

ತಮ್ಮಲ್ಲಿಯೇ ಹಾಗಂದುಕೊಂಡರೂ ಜನ್ನಯ್ಯನವರಿಗೆ 'ಹಿಡಿದ' ಉಪದ್ರವದ ವಿಚಾರ ಹೇಳುವುದೋ ಬಿಡುವುದೋ ಎಂಬ ಅನುಮಾನ ಕೂಡ ಆಕೆಯನ್ನು ಕಾಡಿತು. ಹಾಗೆಂದು ಆ ಬಗ್ಗೆ ಏನನ್ನೂ ಹೇಳದೇ ಇರಲೂ ಆಗದ್ದರಿಂದ ನಿಧಾನವಾಗಿ ನುಡಿದರು.

"ಕೆಲಸದಲ್ಲಿ ಅವಳು ಭಾರೀ ಹುಷಾರಿದ್ದುದು ನಿಜವೆ. ಆದರೆ ಅವಳ ಮಗನೋ? ಹೇಳಿ ಸುಖವಿಲ್ಲ. ಆಗಲೇ ನಾಲ್ಕಾರು ಕಡೆ ಕೆಲಸಕ್ಕೆ ಸೇರಿ ಬಿಟ್ಟು ಆಯಿತಂತೆ..."

ಆ ಕೆಲಸ ಹೋಟೆಲುಗಳಲ್ಲಿ ಎಂದು ಹೇಳಲು ಯಾಕೋ ಬೇಡವೆನ್ನಿಸಿ ಅಷ್ಟೇ ನುಡಿದ ಆಕೆ, ಬಾಯಿ ಮುಚ್ಚಬೇಕಿದ್ದರೇ ಕೇಳಿದರು ವಾಸ್ತೇವಯ್ಯ,

"ಹಾಗಿದ್ದರೆ ನಿಮಗೆ ಸುದ್ದಿ ತಿಳಿಯದೆನ್ನಿ?"

ಹಾಗೆ ಕೇಳಿದ ಆತ, ಮತ್ತೆ ಮರುಕ ಸೂಸುವ ದನಿಯಲ್ಲಿ ಹೇಳಿದರು:

"ಅವ ಕೊರಳಿಗೆ ಬಳ್ಳಿ ಹಾಕ್ಕೊಂಡು ಸತ್ತು ಹೋಗಿಯೂ ಆಯಿತಲ್ಲ?"

ಆ ಮಾತು ಕೇಳಿದ ತಕ್ಷಣ ಹತ್ತರವೆ ಬಾಂಬ್ ಸ್ಫೋಟವಾದಂತೆನ್ನಿಸಿ ನಡುಗಿದ ಆಕೆ ತಕ್ಷಣವೇ ಕೀರಲಾಗಿ ಕಿರುಚಿದರು: "ನಿಜಕ್ಕೂ!"

"ಹೂಂ, ಸತ್ಯಕ್ಕೂ."

ಅವರ ಅವಸ್ಥೆಯಿಂದ ತುಸು ಅಚ್ಚರಿಗೊಳಗಾದ ವಾಸ್ತೇವಯ್ಯ ಹಾಗೆಂದು ಜತೆಗೇ ಸಮಾಧಾನದ ಮಾತಾಡಿದರು,

"ಧೈರ್ಯ ತಂದುಕೊಳ್ಳಿ ಪಾರ್ವತಮ್ಮ." ಹುಟ್ಟಿದ ಮೇಲೆ ಸಾವು ಯಾರಿಗೂ ತಪ್ಪಿದ್ದಲ್ಲ. ಕೆಲವರು ಬೇಗ ಹೋಗುತ್ತಾರೆ. ಕೆಲವರು ನಿಧಾನ. ಅಷ್ಟೇ."

ಈಗ ಆಘಾತದ ತೀವ್ರತೆ ಕಿಂಚಿತ್ ಕಡಿಮೆ ಆಗಿತ್ತಾದರೂ, ಇನ್ನೂ ಆ ಸುಳಿಯಲ್ಲಿಯೆ ತೇಲುತ್ತಿದ್ದ ಪಾರ್ವತಮ್ಮ ಅಳುವಂತೆ ಹೇಳಿದರು, "ನೀವೇನೇ ಹೇಳಿ. ಆದರೆ ಆ ಮಾಣಿ'ಯ ವಯಸ್ಸೆಷ್ಟು ಈಗ? ಮೊನ್ನೆ ಮೊನ್ನೆಯ ಹುಡುಗನಲ್ಲವೆ ಅವನು?"

"ಸರಿಯೇ, ಆದರೂ ಏನು ಮಾಡಲಿಕ್ಕಾಗುತ್ತದೆ?" ವಾಸ್ತೇವಯ್ಯ ಈಗ ವೈರಾಗ್ಯದ ದನಿಯಲ್ಲಿ ನುಡಿದರು: "ನಾವು ಬಯಸಿದಂತೆಯೇ ಆಗುತ್ತಿದ್ದರೆ ಈ ಯಾವ ಕಷ್ಟವೂ ಇರುತ್ತಿರಲಿಲ್ಲ ಅಲ್ಲವೆ? ಎಲ್ಲ ಅವರವರು ಪಡೆದು ಬಂದದ್ದು."

ನಿಧಾನವಾಗಿ ಕೆಲವು ನಿಮಿಷಗಳು ಉರುಳಿದವು. ಮಂಕರ ಹಾಗೆ ಕೂತಿದ್ದ ಪಾರ್ವತಮ್ಮನೊಳಗೆ ಹಲವಾರು ಪ್ರಶ್ನೆಗಳು ಏಳುತ್ತಿದ್ದವು. 'ಸುಧಾಕರ ಯಾಕೆ ಸತ್ತ? ಆತ್ಮಹತ್ಯೆ, ಅದೂ ಪ್ರಾಯದ ತರುಣ ಮಾಡಿಕೊಳ್ಳಬೇಕಿದ್ದರೆ ಎಂತಹ ಕಷ್ಟ ಆಗಿದ್ದೀತವನಿಗೆ? ಛೇ, ಆ ದಿನ ಒಂದಿಷ್ಟಾದರೂ ನೆರವು ನೀಡಬಹುದಿತ್ತೇನೋ?'

ಆಕೆ ಒಳಗೆ ಚಿಂತಿಸುತ್ತಿದ್ದ ಆ ಸಮಯದಲ್ಲಿಯೇ ವಾಸ್ತೇವಯ್ಯ ಮೆಲ್ಲಗೆ ಪ್ರಶ್ನಿಸಿದರು,

"ರಾಮು ಎಲ್ಲಿ? ತೋಟಕ್ಕೆ ಹೋಗಿದ್ದಾನೆಯೆ?"

"ಹೂಂ" ಆಕೆ ಅನ್ಯ ಮನಸ್ಕರಾಗಿದ್ದೇ ಉತ್ತರಿಸಿದಾಗ ಮತ್ತೆ ಹೇಳಿದರಾತ:

"ನನ್ನ ಹಿತ್ತಲಿನಲ್ಲಿ ನಡಲು ಕಾಳು ಮೆಣಸಿನ ಬಳ್ಳಿ ಬೇಕಿತ್ತು. ಇವತ್ತು ಬಂದರೆ ತುಂಡು ಮಾಡಿ ಇಡುತ್ತೇನೆ ಎಂದಿದ್ದ ರಾಮು ಮೊನ್ನೆ."

"ಓ, ಹಾಗೆಯೆ? ಹೋಗಿ ಹಾಗಿದ್ದರೆ-ಕೊಟ್ಟಾನು."

ತಮ್ಮ ಲೋಕದಲ್ಲಿಯೆ ಮುಳುಗಿದ್ದ ಆಕೆ, ಆ ಚಿಂತೆಯೊಳಗಿಂದಲೇ ವಾಸ್ತೇವಯ್ಯನವರಿಗೆ ಹೇಳಿದರಾದರೂ, ಮರುಕ್ಷಣವೆ ತೋಟದಲ್ಲಿ ಜನ್ನಯ್ಯನವರು ಇದ್ದಾರೆಂಬುದೂ ಹೊಳೆಯಿತು. ವಾಸ್ತವದಲ್ಲಿ ಸಂಗತಿ ಬೇರಾಗಿತ್ತು. ಜನ್ನಯ್ಯ ಗದ್ದೆಯಲ್ಲಿ

ದ್ದರೆಂಬುದೂ ವಾಸ್ತೇವಯ್ಯ ಬರುವಾಗ ದಾರಿಯ ಗದ್ದೆ ಬದಿ ಸಿಕ್ಕಿ ಆತನ ಬಳಿ ಅಷ್ಟು ಮಾತನಾಡಿದ್ದರೆಂಬುದೂ, ಹಾಗಾಗಿಯೇ ಆತ ಜನ್ನಯ್ಯನವರ ಬಗ್ಗೆ ಏನೂ ವಿಚಾರಿಸಲಿಲ್ಲ ಎನ್ನುವುದೂ ಆಕೆಗೆ ತಿಳಿದಿರಲಿಲ್ಲ. ಎಂದೇ ತೋಟದಲ್ಲಿ ಜನ್ನಯ್ಯ ಸಿಕ್ಕಿದಾಗ ಸುಧಾಕರನ ಸುದ್ದಿ ಈತ ಹೇಳಿದರೆ ಮುಂದೇನಾದೀತೋ ಎಂಬ ಕಳವಳ ಆಕೆಯನ್ನು ಕಾಡಿತು. ಹೀಗಾಗಿ ಆ ವೇಳೆಗಾಗಲೇ ಅಂಗಳಕ್ಕೆ ಇಳಿದಿದ್ದ ವಾಸ್ತೇವಯ್ಯನವರಲ್ಲಿ ಹೇಳಿದರಾಕೆ,

"ಅಲ್ಲಿ ಇವರೂ ಇದ್ದಾರು. ಸುಧಾಕರನ ಸಂಗತಿ ಅವರಲ್ಲಿ ಹೇಳಿಬಿಡಬೇಡಿ, ಆಯಿತ ?"

ಆ ಮಾತು ಕೇಳಿದ ತಕ್ಷಣ ವಾಸ್ತೇವಯ್ಯ ಪೆಚ್ಚಾಗಿ ಹೋದರು.

ಆದರೆ ಅತ್ತ ಹೊರಳಿದ್ದ ಅವರ ಮೋರೆಯ ಆ ಬದಲಾವಣೆ ಪಾರ್ವತಮ್ಮನಿಗೆ ಕಾಣಲಿಲ್ಲ. ಎಂದೇ ಮತ್ತೆ ಇಳಿದನಿಯಲ್ಲಿ ವಿವರಿಸಿದರಾಕೆ,

"ಎಷ್ಟಾದರೂ ಇಲ್ಲಿಯೇ ಬೆಳೆದ ಹುಡುಗನಲ್ಲವೆ ? ಅವನಿಗೊಂದಷ್ಟು ನೆರವು ಕೊಟ್ಟರೆ ಆದೀತೆಂದೂ ಅವರ ಮನಸ್ಸಿನಲ್ಲಿತ್ತು. ಆದರೇನು ಮಾಡುವುದು ? ನಮಗೂ ನೂರಾರು ತಾಪತ್ರಯ.

ಹೇಳುತ್ತ ಆಕೆ ಒಂದು ನಿಮಿಷ ನಿಲ್ಲಿಸಿದಾಗ ವಾಸ್ತೇವಯ್ಯ ಏನನ್ನಲೂ ತೋಚದೆ, "ಅಲ್ಲವೆ ಮತ್ತೆ ?" ಎಂದರು. ಆತ ಅಂದಿದ್ದು ಎರಡೇ ಶಬ್ದಗಳಾದರೂ ಪಾರ್ವತಮ್ಮನವರಿಗೆ ಎಷ್ಟೋ ಸಮಾಧಾನ ಆಯಿತಾಗಿ ಮತ್ತೆ ಹೇಳಿದರಾಕೆ,

"ಆದರೆ ಅವರು ನಮ್ಮ ಹಾಗೆಲ್ಲ ಅಲ್ಲ. ಭಾರೀ ಸೂಕ್ಷ್ಮ. ಸುದ್ದಿ ತಿಳಿದರೆ ಎಷ್ಟು ಬೇಜಾರುಮಾಡಿಕೊಳ್ಳುತ್ತಾರೋ ? ಅದಕ್ಕೇ 'ಹೇಳಬೇಡಿ' ಎಂದೆ. ಗೊತ್ತಾಯ್ತಲ್ಲ ?" ಆ ವೇಳೆಗಾಗಲೇ ಸುದ್ದಿಯನ್ನು ಜನ್ನಯ್ಯನವರಲ್ಲಿ ತಿಳಿಸಿದ್ದ ವಾಸ್ತೇವಯ್ಯ, 'ಈಗೇನು ಮಾಡಲಿ ?' ಎಂದು ಚಿಂತಿಸುತ್ತಿದ್ದವರು ಪಾರ್ವತಮ್ಮ ಹಾಗೆ 'ಗೊತ್ತಾಯ್ತಲ್ಲ ?' ಎನ್ನುತ್ತಲೂ ತಮಗೇ ಅರಿವಿಲ್ಲದೇ "ಆಯಿತು, ಆಯಿತು" ಎಂದು ಹೇಳಿಬಿಟ್ಟರು.

ಆದರೆ ಮರುಕ್ಷಣವೇ ತಾವು ಹೇಳಿದ್ದೇನೆಂದು ಹೊಳೆಯಿತಾಗಿ ಒಳಗೇ ಅಳುಕಿದ ಆತ, 'ಇನ್ನೆಲ್ಲಾದರೂ ಜನ್ನಯ್ಯ ಈಗಲೇ ಬಂದು ಬಿಟ್ಟರೆ ಫಜೀತಿ' ಎಂದೂ ಹೇಳಿಕೊಳ್ಳುತ್ತಲೇ ಆತುರಾತುರವಾಗಿ ತೋಟಕ್ಕೆ ಇಳಿದರು. ಹಾಗೆ ಆತ ಕಾಣದಾದೊಡನೆ ಪಾರ್ವತಮ್ಮನವರೂ ಕೂತಲ್ಲಿಂದ ಎದ್ದು ಒಳಗೆ ತೆರಳುತ್ತ ಯೋಚಿಸಿದರು- 'ಸದ್ಯ, ಅವರಿಗೆ ತಿಳಿಯಲಿಲ್ಲವಲ್ಲ ? ಮೊದಲೇ ಆ ಮಾಣಿಯ ಬಗ್ಗೆ ಒದ್ದುಕೊಳ್ಳುತ್ತಿದ್ದ ಜೀವ. ಇನ್ನು ಹೀಗೆ ಮಾಡಿಕೊಂಡುದು ಗೊತ್ತಾದರೆ ಆ ಮೇಲೆ ಹೇಳುವುದೇ ಬೇಡ ಅಂತ ಪರಿಸ್ಥಿತಿ ಆಗಿಬಿಡುತ್ತಿತ್ತು' ತಮ್ಮಲ್ಲಿಯೆ ಹಾಗೆ ಚಿಂತಿಸುತ್ತ ಅಡಿಗೆ ಮನೆಗೆ ಹೋದ ಆಕೆ, ಮಾರನೇ ದಿನದ ತಿಂಡಿಗೆಂದು ಅಕ್ಕಿ ರುಬ್ಬಲು ಕುಳಿತರು. ಆದರೆ ಮನಸ್ಸಿನಲ್ಲಿ ಮಾತ್ರ ಸುಧಾಕರನೇ ತುಂಬಿದ್ದ.

'ಛೆ, ಹೀಗೆ ಮಾಡಿಕೊಂಡನಲ್ಲಪ್ಪ ? ಜೀವನಕ್ಕೆ ಅಷ್ಟೊಂದು ಕಷ್ಟ ಆಗಿದ್ದಲ್ಲಿ ಇಲ್ಲಿಗಾದರೂ ಬಂದು ಹೀಗಾಯಿತೆಂದು ಹೇಳಿದ್ದಿದ್ದರೆ ಏನಾದರೂ ಮಾಡಬಹುದಿತ್ತು. ರಾಮು ಮೊನ್ನೆ ಹಾಗೆಂದ ನಿಜವೆ. ಆದರೆ ಅವನೇನೂ ಕಟುಕನಲ್ಲ. ಒಟ್ಟಿನಲ್ಲಿ ಜನ್ನಯ್ಯನವರಲ್ಲಿ ಬೆಳೆದ ಹುಡುಗ, ಹೀಗೆ ಆಯಿತಂತ ಅವನಿಗೆ, ಏನಾಗಿತ್ತೋ, ಎಂತಹ ಕಥೆಯೊ-



ಎಂದು ಊರವರು ಆಡಿಕೊಳ್ಳುವಂತಾಗಿದ್ದು ನಿಜ. ಅಲ್ಲ, ಅದು ಹೇಗೂ ಇರಲಿ ಎನ್ನುವ, ಆ ಪಾಪದವನಿಗೆ ಆ ರೀತಿಯ ಸಾವು ಬರಬಾರದಿತ್ತು. ತಮ್ಮಲ್ಲಿಯೆ ಚಿಂತಿಸುತ್ತ ತಿರುವುತ್ತಿದ್ದ ಆಕೆಗೆ, "ಕತ್ತಲೆಯಾದರೂ ಯಾಕಮ್ಮ ದೀಪ ಹಾಕಿಲ್ಲ?" ಎಂದು ರಾಮು ಕೇಳಿದಾಗಲೇ ಇತ್ತಲಿನ ಅರಿವಾಗಿದ್ದು. ಹಾಗೂ ಜನ್ನಯ್ಯನವರ ನೆನಪಾಗಿದ್ದು.

'ಈಗಲಾದರೂ ಮನೆಗೆ ಬಂದರೋ ಇಲ್ಲವೋ?' ಆಕೆ ಒಳಗೇ ಚಿಂತಿಸುತ್ತ ಹಿಟ್ಟನ್ನೆತ್ತಿ ಪಾತ್ರೆಗೆ ತುಂಬಿ ಮುಚ್ಚಿಟ್ಟು ಹೊರಗೆ ಬಂದು ನೋಡಿದರು. ಅಲ್ಲಿ ಬಾಜರ ಹಲಿಗೆಗೆ ಒರಗಿ ಕೂತಿದ್ದ ಪತಿ ಕಾಣಿಸಿದ್ದರಿಂದ ಸಮಾಧಾನಗೊಂಡು ಉಳಿದ ಕೆಲಸಗಳಿಗೆ ತೆರಳಿದ ಅವರಿಗೆ ಗಂಡನ ಮಾನಸಿಕ ವ್ಯಥೆಯ ಬಗ್ಗೆ ಅರಿವೇ ಇರಲಿಲ್ಲ. ಇದ್ದೀತಾದರೂ ಹೇಗೆ? ವಾಸ್ತೇವಯ್ಯ ಗಂಡನಲ್ಲಿ ಸುಧಾಕರನ ವಿಚಾರ ತಿಳಿಸಿಲ್ಲವೆಂದೇ ನಂಬಿದವರಲ್ಲವೆ ಆಕೆ?

ಹಾಗೆ ಮತ್ತೆ ಒಳಹೊಕ್ಕು ಉಳಿದ ಕೆಲಸಗಳಿಗೆ ಜಲಜಳಿಗೆ ನೆರವು ನೀಡಿದ ಆಕೆ 'ಉಸ್ಸಪ್ಪ' ಎನ್ನುತ್ತ ಗೋಡೆಗೆ ಒರಗಿ ಕೂತರು. ಕಾರಣ, ಹಿಂದಿನ ಎರಡು ಇರುಳುಗಳೂ ಸರಿಯಾದ ನಿದ್ದೆ ಇಲ್ಲವಾಗಿದ್ದರಿಂದಲೂ, ಆ ದಿನ ಹಗಲೆ ಬೀಗರಿಗೆ ಸಮ್ಮಾನವೆಂದು ಧಾರಾಳ ಕೆಲಸ ಮಾಡಿದ್ದುದರಿಂದಲೂ ಆಕೆಗೆ ತುಂಬ ದಣಿವಾಗಿತ್ತು. ಅದಕ್ಕೆ ಸರಿಯಾಗಿ ಮಗಳು ಹಾಗೂ "ಪುಳ್ಳಿ" ಹೋಗಿದ್ದುದೂ, ಆ ಸಂಜೆ ಕೇಳಿದ ದುರ್ಮರಣದ ಸುದ್ದಿಯೂ ಅವರನ್ನು ಮಾನಸಿಕವಾಗಿಯೂ ಕುಗ್ಗಿಸಿದ್ದವು. ಹೀಗಾಗಿ, ಓಟ್ಟಿನಲ್ಲಿ ಜೀವ ವಿಶ್ರಾಂತಿ ಬಯಸುತ್ತಿತ್ತಾಗಿ ಸೊಸೆಯನ್ನುದ್ದೇಶಿಸಿ ಹೇಳಿದರಾಕೆ,

"ರಾಮುವಿನ ಸ್ನಾನ, ಲೆಕ್ಕ ಬರೆಯುವುದು (ತೋಟದ ಆಳುಗಳದ್ದು) ಎಲ್ಲ ಆಯಿತೋ ನೋಡು. ಆಗಿದ್ದರೆ ಊಟದ ಶಾಸ್ತ್ರ ತೀರಿಸಿ ಮಲಗಬಹುದಿತ್ತು. ನನಗೇಕೋ ಇವತ್ತು ಭಾರೀ ಬಚ್ಚಲು (ಆಯಾಸ)."

ಹಾಗೆ ತುಸು ಹೊತ್ತಿನಲ್ಲಿಯೆ ರಾತ್ರೆಯ ಊಟಕ್ಕೆ ಜಲಜ ಎಲೆ ಹಾಕಿದಳಾದರೂ ಜನ್ನಯ್ಯ ಊಟಕ್ಕೆ ಬಾರದ್ದು ನೋಡಿ ಅತ್ತೆಯವರಲ್ಲಿ ವಿಷಯ ಹೇಳಿದಳು. ಅದಕ್ಕೆ ಪಾರ್ವತಮ್ಮ ಏನು ಹೇಳಬೇಕಿದ್ದರೂ, ಆ ಮುನ್ನವೇ ರಾಮು ದನಿತೆಗೆದ,

"ಅಪ್ಪನಿಗೆ ಮಗಳು ಹೋದ ಬೇಜಾರು. ಹಾಗಾಗಿಯೆ ಊಟ ಬೇಡವಾಗಿದ್ದು."

ಮಗ ಕೊಟ್ಟ ಕಾರಣ ಸರಿಯೆಂದು ಪಾರ್ವತಮ್ಮನಿಗೂ ತೋರಿತಾಗಿ ಮೆಲ್ಲಗೆ ಹೇಳಿದರಾಕೆ,

"ಇದ್ದೀತು, ಆದರೆ ಬರಿ ಹೊಟ್ಟೆಯಲ್ಲಿ ಮಲಗುವ ಬದಲಿಗೆ ಅಷ್ಟು ಹಾಲಾದರೂ ಕುಡಿಯಬಹುದಿತ್ತು."

ಹಾಗನ್ನುತ್ತಲೇ ಹಾಲು ಕೊಟ್ಟು ಬರಲೆಂದು ಎದ್ದ ಅವರನ್ನು ನೋಡಿ ಸ್ವಲ್ಪ ನಕ್ಕ ರಾಮು, ನಂತರ ನುಡಿದ, "ಅಪ್ಪ ಈಗ ಕನಸು ಕಾಣಲು ಆರಂಭಿಸಿದ್ದಾರು. ಊಟ ಬೇಡವೆಂದು ನನ್ನಲ್ಲಿ ಹೇಳಿ ಆಗಲೇ ಮಲಗಿದ್ದರಲ್ಲ? ಇಷ್ಟಕ್ಕೂ ವಯಸ್ಸಾಗುತ್ತ ಬಂದಾಗ ಆಗಾಗ್ಗೆ ಊಟ ಬಿಟ್ಟರೆ ಶರೀರಕ್ಕೆ ಒಳ್ಳೆಯದೇ."

ಮಗನ ಮಾತು ತುಸು ಕಟುವಾಯಿತೆಂದು ಪಾರ್ವತಮ್ಮನವರಿಗೆ ತಕ್ಷಣ ಅನ್ನಿಸಿದರೂ, ಅದು ಸತ್ಯ ಕೂಡಾ ಎಂದೂ ಕಂಡಿತಾಗಿ ಆಕೆ ಏನನ್ನೂ ಹೇಳದೇ ಎಲೆ ಮುಂದೆ ಕೂತರು.

ಹಾಗೆ ಒಳಗೆ ನಡೆದು ಮಾತುಗಳೆಲ್ಲ ಅಡಿಗೆ ಕೋಣೆಯಾಚೆ, ಎರಡೇ ರೂಮಿನ ಅಂತರದೊಳಗೆ ಮಲಗಿದ್ದ ಜನ್ನಯ್ಯನವರಿಗೂ ಕೇಳಿಸಿ ಆತನ ಮೋರೆಯಲ್ಲಿ ವ್ಯಂಗ್ಯದ ನಗು ಸುಳಿಯಿತು. 'ಹಾಲಾದರೂ ಕುಡಿಯಬಹುದಿತ್ತು' ಮಡದಿ ಎಂದ ಆ ಮಾತು ಅವರೆದೆಗೆ ಶೂಲದಂತೆ ಚುಚ್ಚಿತು. 'ಬೇಡವೇ ಮತ್ತೆ? ತಾವು ಎಸಗಿದ ಸತ್ಕಾರ್ಯದಿಂದಾಗಿ ಆ ಎಳೆ ಚಿಗುರು ಕರಟಿಯೇ ಹೋದುದಕ್ಕಾದರೂ ಒಂದು ಗ್ಲಾಸು ಹಾಲು?' ಎದೆಯೊಳಗೆ ಸಂಕಟದ ಹೆದ್ದೆರೆಗಳು ಅಪ್ಪಳಿಸಿದರೂ ಅವರ ಕಣ್ಣು ತೋಯಲಿಲ್ಲ, ಬದಲಿಗೆ ಅದಕ್ಕೂ ಮಿಗಿಲಾದ ಮೂಕ ವ್ಯಥೆ, ಯಾತನೆಯ ಕಿಚ್ಚು ಅವರನ್ನು ದಹಿಸುತ್ತಿತ್ತು.

'ಅಬ್ಬ, ಎಂಥ ಸ್ವಾಭಿಮಾನಿ ಆ ಹುಡುಗ? ಥೇಟು ಅವಳ ಮಗನೇ. ಹೊಟ್ಟೆ ಬಟ್ಟೆ ಕಟ್ಟಿಗೇದು, ಬಂದ ಪ್ರತಿಫಲದಲ್ಲಿ ಮಗನನ್ನು ಓದಿಸುವ

ಹಟ: ಅದೆಷ್ಟಿತ್ತೆಂದರೆ ಎಷ್ಟೋ ಸಲ ಅರೆ ಹೊಟ್ಟೆ, ಕೆಲವೊಮ್ಮೆ ಉಪವಾಸವೇ ಗತಿ. ಹಾಗಿದ್ದರೂ ತಮ್ಮ ಮನೆಯಲ್ಲಿ ಒಂದು ಲೋಟ ಮಜ್ಜಿಗೆ ಕೂಡ ಕೇಳಿದವಳಲ್ಲ. ಹಾಗೆ ಬದುಕಿದವಳ ಮಗ ಇನ್ನು ಹೇಗಿದ್ದಾನು ? ಆ ದಿನ ಅಷ್ಟು ಕೇಳಿಸಿಕೊಂಡದ್ದೇ ಕೊನೆ. ಆ ಮೇಲೆ ಇತ್ತ ತಲೆಯೇ ತೋರಿಸಲಿಲ್ಲ ವಲ್ಲ? ಅಯ್ಯೋ ಕೊಟ್ಟು ಬಿಡಬೇಕಿತ್ತು ಆಗಲೇ. ರಾಮು ಪ್ರತಿಭಟಿಸಿದ್ದರೆ ನಿಜ ಹೇಳಿಯಾದರೂ ?' ಯೋಚನೆ ಅಲ್ಲಿಗೆ ಮುಟ್ಟಿದಾಗ ಬೆಚ್ಚಿಬಿದ್ದರು. 'ಇತ್ತ ತಮಗೆ ಅಷ್ಟು ಧೈರ್ಯ ? ಸತ್ಯವನ್ನು ಹೊರಗೆ ಹಾಕಿ ಎಲ್ಲರ ಎದುರಿಗೂ ಕೆಟ್ಟವನೆನ್ನಿಸಿ ಕೊಳ್ಳಲು, ಅಪ್ರಾಮಾಣಿಕನೆನ್ನುವ ಬಿರುದಿಗೆ ಪಾತ್ರ ನಾಗಲು ಇಷ್ಟವಿಲ್ಲದೆ, ಬೇರೆ ಯಾವುದೋ ದಾರಿ ಗಾಗಿ ಕಾದದ್ದಕ್ಕೇ ಹೀಗಾಗಿದ್ದಲ್ಲವೆ ?' ನೋವು, ನಡೆದು ಹೋದುದಕ್ಕೆ ಇನ್ನೇನನ್ನು ಮಾಡಲಾಗದೆ ನ್ನುವ ಅಸಹಾಯಕತೆ ಅವರನ್ನು ಹಿಂಡುತ್ತಿದ್ದಾಗ ಬಾಗಿಲು ಸದ್ದು ಮಾಡಿ ಅವರ ಕೈ ಹಿಡಿದಾಕೆ ಒಳಗೆ ಬಂದರು. ಮತ್ತೊಂದು ನಿಮಿಷದೊಳಗೆ ಹಾಸಿಗೆ ಕೊಡವಿದ, ನಂತರ ದೀಪ ಆರಿಸಿದ 'ಟಕ್' ಸದ್ದು ಕೂಡ ಕೇಳಿಸಿದ ನಂತರ ಜನ್ನಯ್ಯ ಆ ವರೆಗೆ ಮುಚ್ಚಿದ್ದ ಕಣ್ಣುಗಳನ್ನು ಮೆಲ್ಲಗೆ ಬಿಡಿಸಿ ನಿಧಾನ ಉಸಿರು ಬಿಟ್ಟರು.

ಆಗ ಕೇಳಿತು ಮಡದಿಯ ದನಿ. "ನಿದ್ದೆ ಬಂತೆ ?"

ಆ ಪ್ರಶ್ನೆಗೆ ಆತ ಮೌನವಹಿಸಿದಾಗ ಮತ್ತೆ ಹೇಳಿದ್ದು ಕೇಳಿಸಿತು,

"ರಾಮಾ, ಕೃಷ್ಣಾ..." ಅಂದರೆ ತಾವು ನಿದ್ದೆ ಮಾಡಿರಬೇಕೆಂದೇ ಭಾವಿಸಿರಬಹುದವಳು. ಹಾಗೆ ಯೋಚಿಸಿದಾಗ ಗಾಢ ವಿಷಾದ ಮನಸ್ಸನ್ನು ತುಂಬಿ ಕೊಂಡಿತು. 'ನಿದ್ದೆ ಬಂದರೆ ಒಳಿತೇ. ಆದರೆ ಆ ನಿರಾತಂಕದ ನಿದ್ದೆ ತಮ್ಮ ಪಾಲಿಗೆ ಇಲ್ಲವಾಗಿ ಎರಡು ವರ್ಷಗಳಾದುವೇನೋ ? ಈಗೀಗಂತೂ ಮಾಡಿದ ಪಾಪ ಎದೆ ಮೇಲೆ ಹೇರಿರುವ ಹೆಬ್ಬಂ ಡೆಯಂತಾಗಿದೆ, ಹಾಗಿರುವಾಗ ನಿಶ್ಚಿಂತ ನಿದ್ದೆ ತಮ್ಮ ಪಾಲಿಗೆಲ್ಲಿ ?' ಒಳಗೆ ಹಲುಬಿಕೊಂಡ ಜನ್ನಯ್ಯನ ವರಿಗೆ ಪತ್ನಿಯ ಕ್ರಮಬದ್ಧ ಉಸಿರಾಟ ಕೇಳಿಸಿ ನೋವು ಪುಟಿದೆದ್ದಿತು. 'ಪಾರ್ವತಿ ಪುಣ್ಯ ಮಾಡಿದ ಜೀವ, ಹೇಗೆ ದಿಂಬಿಗೆ ತಲೆ ಇಟ್ಟೊಡನೆ ನಿದ್ದೆಗೆ ಇಳಿದುಬಿಟ್ಟಳು ?' ಮನಸ್ಸು ವಿಲಿವಿಲಿಗುಟ್ಟುತ್ತಿ ದ್ದಂತೆ ಹಿಂದೆ ಎಷ್ಟೋ ಸಲ ಕಾಡಿದ್ದ ಆ ಪ್ರಶ್ನೆ ಈಗಲೂ ಹೆಡೆ ಎತ್ತಿ ಆಡಿಸಿತು. 'ಯಾಕಾದರೂ ಅಂಥ ಕೀಳು ಬುದ್ಧಿ ಹುಟ್ಟಿತೋ ಆ ದಿನ ?' ಯಾಕೆ ? ಯಾಕೆ ? ಉತ್ತರಕ್ಕಾಗಿ ಚಡಪಡಿಸುತ್ತಿ ದ್ದಾಗ ವಾಸ್ತೇವಯ್ಯ ಬಣ್ಣಿಸಿದ್ದು ನೆನಪಿಗೆ ಬಂತು.

'ತಾಯಿಯ ಹಾಗೇ ಮಗ. ಯಾರಿಗೂ ತನ್ನಿಂದ ತೊಂದರೆ ಆಗಬಾರದೆನ್ನುವ ಸ್ವಭಾವ. ಅದಕ್ಕೇ ನೋಡಿ ಸಾಯುವಾಗ ಕೂಡ ಅವ ಇದ್ದ ಮನೆಯವರಿಗೆ ತೊಂದರೆ ಕೊಡಲಿಲ್ಲ. ಊರ ಹೊರಗಿನ ಹಲಸಿನ ಮರದಲ್ಲಿ ನೇಲುತ್ತಿತ್ತಂತೆ ಹೆಣ. ಆ ಮನೆ ಮಕ್ಕಳು ಕ್ರಿಕೆಟ್ ಆಡಲು ಮೈದಾನಕ್ಕೆ ಹೋದವರು ನೋಡಿಯೇ ಗೊತ್ತಾ ದದ್ದು. ಅಲ್ಲ, ಒಂದು ವೇಳೆ ಅವ ಇರುತ್ತಿದ್ದ ಕೋಣೆ ಒಳಗೇ ಬಳ್ಳಿ ಹಾಕಿಕೊಂಡಿದ್ದರೆ ?' ವಾಸ್ತೇ ವಯ್ಯ ಹಾಗನ್ನುತ್ತಿದ್ದಂತೆಯೆ ತಮ್ಮೊಳಗೆ ಆ ಚಿತ್ರ ಕಾಣಿಸಿಕೊಂಡಿತ್ತು. ನೇತಾಡುವ ಎಳೆಯತರುಣ ಸುಧಾಕರನ ಮೋರೆಯಲ್ಲಿ ಹೊರಗೆ ಬಂದ ಕಣ್ಣು ಗುಡ್ಡೆಗಳು, ನೀಡಿದ್ದ ನಾಲಿಗೆ. 'ಅಯ್ಯೋ ದೇವರೆ'



ಏನನ್ನಿಸಿತ್ತೋ ವಾಸ್ತೇವಯ್ಯನಿಗೆ ಆ ಉದ್ಗಾರ ಕೇಳಿ. ನಂತರ ಬೇರೆಯೇ ವಿಚಾರ ಎತ್ತಿದರಲ್ಲವೆ ?

ಯೋಚಿಸುತ್ತ ಬಳಲಿದ ಜನ್ನಯ್ಯ ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿಕೊಂಡು ಕಾಣದ ದೇವರಲ್ಲಿ ನಿದ್ದೆಗಾಗಿ ಬೇಡಿಕೊಂಡರು. ಸ್ವಲ್ಪ ನಿದ್ರೆ ಚೂರೇ ಚೂರು ಬಂದರೂ ಸಾಕಿತ್ತು. ಈ ನೆನಪುಗಳಿಂದ ತತ್ಕಾಲಕ್ಕಾದರೂ ಬಿಡುಗಡೆ ಪಡೆಯಬಹುದಿತ್ತು.

ಆದರೆ ಇಲ್ಲ, ಇಲ್ಲವೇ ಇಲ್ಲ. ಬದಲಿಗೆ ಮತ್ತೆ ಮುಚ್ಚಿದ್ದ ಕಣ್ಣುಗಳೊಳಗೆ ನೇತಾಡಿತು ಸುಧಾಕರನ ದೇಹ. ಅಬ್ಬ, ಎಂತಹ ಸಾವು ? ಹೇಗಾಗಿದ್ದಿರಬಹುದು ಆ ಕೊನೆಯ ಕ್ಷಣಗಳಲ್ಲಿ ? ಕೊರಳಿಗೆ ಬಳ್ಳಿ ಬಲವಾಗಿ ಕಾಯುತ್ತಿದ್ದಾಗ ಉಸಿರಿಗಾಗಿ ಚಡಪಡಿಸುತ್ತಾ ಕಾಲುಗಳನ್ನು ಗಾಳಿಯಲ್ಲಿ ಒದೆದು ಒದ್ದಾಡಿದ್ದಾನು ಅಲ್ಲವೆ ? ತಾವು ಧೈರ್ಯವಹಿಸಿ ನಿಜ ಹೇಳಿಬಿಟ್ಟಿದ್ದರೆ ಆ ಭೀಕರವನ್ನು ತಪ್ಪಿಸಬಹುದಿತ್ತು. ಅಯ್ಯೋ ದೇವರೇ, ಹೇಗೆ ಅನುಭವಿಸಿದನೋ ಆ ಸಂಕಟವನ್ನು ! 'ಒಳಗೊಳಗೇ ಬೇಯುತ್ತಿದ್ದ ಜನ್ನಯ್ಯ, 'ನೀನೂ ಅನುಭವಿಸಿ ನೋಡು, ಆಗ ತಿಳಿದೀತು ಆ ಸಂಕಟ' ಎಂದಾರೋ ಬಳಿಯಲ್ಲಿಯೇ ಹೇಳಿದಂತಾಗಿ ಝಿಲ್ಲನೆ ಬೆವೆತರು. 'ಇಲ್ಲ, ಯಾರೂ ಇಲ್ಲ, ಯಾರದು ಹಾಗನ್ನುವವರು ?' ಕ್ಷಣ ಹೊತ್ತಿನ ಬಳಿಕ, ಮೆಲ್ಲಗೆ ತಮಗೆ ತಾವೇ ಸಾಂತ್ವನ, ಧೈರ್ಯಗಳನ್ನು ತುಂಬಿಕೊಂಡವರಿಗೆ ನಿರಾಳವೆನ್ನಿಸಿದ್ದು ತುಸುವೇ ಹೊತ್ತು.

ನಂತರ ಮತ್ತೆ ಕೇಳಿತು [illegible] ದನಿ.

'ಕೈ ಹಿಡಿದಾತ ಕೆಟ್ಟವನೆಂದು ನಿನ್ನ ಕೈಲಿಟ್ಟರೆ ನೀನು ಅವನಿಗಿಂತಲೂ ನೀಚನಾಗಿ ವರ್ತಿಸಿ ನನ್ನ ಮಗನನ್ನು ಕೊಂದೆಯಲ್ಲ ಜನ್ನಣ್ಣಾ?' ಈ ಸಲ ತೀರ ಹತ್ತಿರದಿಂದಲೇ ಆ ಸ್ವರ ಕೇಳಿಸಿದಂತಾಗಿ ಜನ್ನಯ್ಯ ಆಪಾದಮಸ್ತಕ ನಡುಗಿದರು. ಹೊದಿಕೆ ಒಳಗೇ ಜಲ ಜಲನೆ ಬೆವೆತು ತೊಪ್ಪೆಯಾದರು. 'ಅಯ್ಯೋ ದೇವರೇ, ಇದು ಕಮಲಮ್ಮನೇ ! ಈಗೇನು ಮಾಡಲಪ್ಪಾ ?' ಒಳಗೆ ಆರ್ತರಾಗಿ ಮೊರೆಯಿಡುತ್ತಿದ್ದಾಗ ಪರಿಹಾರ ಹೇಳಿತು ಆ ದನಿ. 'ನೀನೇನು ಮಾಡಬೇಕೋ ನಾನು ಹೇಳುತ್ತೇನೆ. ಬಾ ನನ್ನೊಡನೆ,' 'ನಿನ್ನೊಡನೆಯ ? ಉಹ್ಞುಂ ಬೇಡ, ಬೇಡ' ಇನ್ನಷ್ಟು ಭೀತರಾದ ಜನ್ನಯ್ಯ ಹಾಗನ್ನಲು ಪ್ರಯತ್ನಿಸಿ ಸಾಧ್ಯವಾಗದೇ ಇದ್ದರೂ, ಮತ್ತೆ 'ಬಾ ನನ್ನೊಡನೆ' ಎಂಬ ಒತ್ತಾಯ ಕೇಳಿಸಿ ಕ್ಷೀಣವಾಗಿ ವಿರೋಧಿಸಿದರು. 'ಬೇಡ, ದಯವಿಟ್ಟು ಬೇಡ. ಬಿಟ್ಟುಬಿಡು ನನ್ನನ್ನು.'

ಹಾಗನ್ನುತ್ತಲೇ ತಮ್ಮ ಸರ್ವ ಶಕ್ತಿಯನ್ನೂ ಉಪಯೋಗಿಸಿ ಕಣ್ಣುಬಿಟ್ಟರೆ ಎದುರಾಗಿದ್ದು ಚಿರಪರಿಚಿತವಾಗಿದ್ದ ಮಲಗುವ ಜಾಗ. ಕಿಟಕಿ ಮೂಲಕ ಒಳಗೆ ಬಂದಿದ್ದ ತಿಂಗಳ ಬೆಳಕಿನಲ್ಲಿ ಎಲ್ಲವೂ ನಿಚ್ಚಳವಾಗಿ ಕಂಡಾಗ ಒಮ್ಮೆಗೇ ಭಾರ ಇಳಿದಂತಾಗಿ ದೀರ್ಘ ನಿಟ್ಟುಸಿರೆಳೆದ ಜನ್ನಯ್ಯ ತಮ್ಮಲ್ಲಿಯೇ ಹೇಳಿಕೊಂಡರು: 'ಬಹುಶಃ ಹಾಗೇ ಮಂಪರು ಕವಿದು ಕನಸು ಕಟ್ಟಿರಬೇಕು. ಸಂಜೆಯಲ್ಲವೆ ಆ ಸುದ್ದಿ ಕೇಳಿದ್ದು ? ಅದಕ್ಕೆ ಹಾಗೆ ಆಗಿದ್ದಲ್ಲದೇ ಬೇರೇನಲ್ಲ.'

ಆದರೆ ಆ ಸಮಾಧಾನವಿದ್ದುದು ಕೆಲವೇ ಕ್ಷಣಗಳು. 'ಇದೇನೋ ಕನಸಿದ್ದೀತು ನಿಜ. ಆದರೂ ಕಮಲಮ್ಮ ಹೇಳಿದ್ದು ಸತ್ಯವೇ ತಾನೆ ? ತಮ್ಮ ಅಂತರಂಗದ ಆ ಸಾಕ್ಷಿಯಿಂದ ಪಾರಾಗುವುದು ಸಾಧ್ಯವೆ ?' ಎಂಬ ಯೋಚನೆಯೂ ಆ ಸಮಾಧಾನದ ಬೆನ್ನಿಗೇ ಹೊಳೆದು ಆತ ಹತಾಶರಾದರು. 'ನಿಜವೇ, ಇಷ್ಟಿಷ್ಟಾಗಿಯೇ ತಮ್ಮನ್ನು ಕೊಲ್ಲುತ್ತಿರುವ ಆ ಕಠೋರ ಸತ್ಯದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ, ಎಂದೇ ಹೀಗೆಯೇ ಇಂಚಿಂಚಾಗಿ ಸಾಯುತ್ತ ಹೋಗುವುದೊಂದೇ ತಮಗಿರುವ ದಾರಿ.' ಮನಸ್ಸು ಆ ಭಾವನೆಯಿಂದ ವಿಲಿಗುಟ್ಟುತ್ತಿದ್ದಾಗ ಆ ಪ್ರಶ್ನೆ ಎದೆಯಾಳದಿಂದಲೇ ಮೂಡಿ ಬಂತು. 'ಹಾಗಿದ್ದರೂ ನಿನಗೆ ಬೇಕಲ್ಲವೆ ಬದುಕು ? ಅಂತಹ ನರಕಕ್ಕಿಂತ ಒಮ್ಮೆಲೇ ಸತ್ತರೆ ಮೇಲಲ್ಲವೇ ?' 'ಹ್ಞ ?' ಜನ್ನಯ್ಯ ಆ ಕ್ಷಣಕ್ಕೆ ಬೆಚ್ಚಿದರೂ ನಂತರ ಅದು ಸೊಗಸಾದ ಪರಿಹಾರವೆಂದೇ ಅನ್ನಿಸಿತು. ಮತ್ತು ಹಾಗನ್ನಿಸಿದ ಆ ಘಳಿಗೆಯಲ್ಲಿಯೇ ತಟ್ಟನೆ ಎಲ್ಲವೂ ನಿರಾಳವಾದಂತಾಗಿ ಬಿಡುಗಡೆಯ ಭಾವನೆ ಉಕ್ಕಿತು. ಹೌದಲ್ಲವೆ ? ಇಷ್ಟು ಸುಲಭದ ವಿಚಾರ ತಮಗೇಕೆ ಈ ವರೆಗೂ ಹೊಳೆಯಲಿಲ್ಲ ? 'ಕೊಂದ ಪಾಪ ತಿಂದು ಪರಿಹಾರ' ವಂತೆ. ಇಲ್ಲಿ 'ಕದ್ದ ಪಾಪ ಸತ್ತು ಪರಿಹಾರ.'

ಒಳಗೇ ನೆನೆಸುತ್ತಲಿದ್ದ ಅವರ ಮೋರೆಯಲ್ಲಿ ವಿಲಕ್ಷಣ ನಗೆಯೊಂದು ಸುಳಿಯಿತು. ಹಾಗೂ ಆ ನಗೆಯೊಂದಿಗೇ ಎದ್ದು ಪಾರ್ವತಮ್ಮನವರತ್ತ ತಿರುಗಿಯೂ ನೋಡದೆ ಮುನ್ನಡೆದ ಆತನ ನಡಿಗೆಯಲ್ಲಿ ದೃಢತೆ ತಾನೇತಾನಾಗಿತ್ತು.

ಮರು ಬೆಳಗ್ಗೆ ಪಾರ್ವತಮ್ಮ ಕಣ್ಣುಬಿಟ್ಟಾಗ ಚೆನ್ನಾಗಿ ಬೆಳಗಾಗಿತ್ತೆಂದೆ ಧಡಬಡಿಸಿ ಎದ್ದ ಆಕೆ ಹಾಸುಗೆ ಸುತ್ತುತ್ತ, ಎಂದಿನಂತೆ ಅತ್ತ ನೋಡಿದರು. ಆದರೆ ಅಲ್ಲಿನ ಹಾಸುಗೆ ಖಾಲಿ ಇತ್ತಾಗಿ ಆಕೆಗೆ ಯಾಕೋ ಒಂದು ರೀತಿಯಾಯಿತು. ಕಾರಣ, ಎಂದೂ ಆಕೆಗಿಂತ ಮೊದಲಿಗೆ ಜನ್ನಯ್ಯ ಎದ್ದವರೇ ಅಲ್ಲ. ಆದರ ಬಗ್ಗೆ ಯೋಚಿಸಿದಾಗ ತಟ್ಟನೆ ಇರುಳಿನ ನೆನಪಾಯಿತು. ಯಾವುದೋ ಒಂದು ಹೊತ್ತಿನಲ್ಲಿ ಆತ, 'ಬೇಡ, ಬಿಟ್ಟುಬಿಡು' ಎಂದೇನೋ ಬಡಬಡಿಸಿದ್ದು ಕೇಳಿಸಿತ್ತಾದರೂ ಮರುಕ್ಷಣವೇ ಆಕೆಗೆ ನಿದ್ದೆ ಆಮರಿಕೊಂಡಾಗಿತ್ತು. ಈಗ ಆ ವಿಚಾರ ಸ್ಮರಣೆಗೆ ಬಂದು ತಕ್ಷಣ, ಯಾಕೆಂದು ತಿಳಿಯದೇ ನಡುಕ ಹುಟ್ಟಿತವರಿಗೆ. ಆದರೂ ತಮ್ಮನ್ನು ನಿಯಂತ್ರಿಸಿಕೊಳ್ಳುತ್ತ, 'ಬಹುಶಃ ಇಂದು ಬೇಗ ಎದ್ದಿರಬೇಕು. ಆಗಲೇ ಬೆಳಗಾಗಿದೆಯಲ್ಲ,' ಎಂದು ಹೇಳಿಕೊಳ್ಳುತ್ತ ಹೊರಗೆ ಹೊರಡುವಾಗ ಕೇಳಿತು ಜಲಜಳ ತೊಳ್ಳೆ ಅದುರಿಸುವ ಚೀತ್ಕಾರ. ಅದೆಲ್ಲಿಂದ ಹೊರಟಿತೆಂದು ಆ ಸದ್ದಿನಿಂದಲೇ ಊಹಿಸಿದ ಪಾರ್ವತಮ್ಮ ಹುಚ್ಚಿಯಂತೆ ಸೌದೆ ಕೋಣೆಯತ್ತ ಓಡಿ ಒಳಗಿದ್ದುದನ್ನು ಕಂಡು, ಸೊಲ್ಲಡಗಿ ನೆಲಕ್ಕೆ ಕುಸಿದರು.

ಒಳಗೆ, ಪಕ್ಕಾಸಿನಿಂದ ನೇತಾಡುತ್ತಿತ್ತು ಜನ್ನಯ್ಯನವರ ಹೆಣ.

●



# ಕ್ಯಾನ್ಸರ್ ರೋಗಿಗಳಿಗೆ ಒಂದಿಷ್ಟು ಭರವಸೆ!

ಮಧುಮೇಹವನ್ನು ನಿಯಂತ್ರಿಸುವಲ್ಲಿ ಅರಿಷಿಣ ಪ್ರಯೋಜನಕ್ಕೆ ಬರುತ್ತದೆನ್ನುವುದು ಸುಮಾರಾಗಿ ನಿಮಗೆಲ್ಲ ಗೊತ್ತೇ ಇದೆ. ಅಲ್ಲದೆ ಅರಿಷಿಣಕ್ಕೆ ರೋಗಾಣುಗಳನ್ನು ಕೊಲ್ಲುವ ಶಕ್ತಿಯಿದೆಯೆಂಬುದೂ ಬಹುಕಾಲದಿಂದ ಎಲ್ಲರಿಗೂ ಗೊತ್ತಿರುವ ವಿಷಯ. ಆದರೆ ಕ್ಯಾನ್ಸರ್ ಬಂದ ರೋಗಿಗಳಿಗೆ ಕೊಟ್ಟಾಗ ಅರಿಷಿಣ ಕ್ಯಾನ್ಸರಿನ ಬೆಳವಣಿಗೆಯ ಪ್ರಮಾಣವನ್ನು ಕುಗ್ಗಿಸುತ್ತದೆನ್ನುವುದು ಅನೇಕರಿಗೆ ಗೊತ್ತಿರಲಿಕ್ಕಿಲ್ಲ. ಈ ಹೊಸ ತಥ್ಯವನ್ನು ಪ್ರಯೋಗಗಳ ಮೂಲಕ ಕಂಡುಕೊಂಡವರು ಮುಂಬಯಿಯ ಕ್ಯಾನ್ಸರ್ ಸಂಶೋಧನಾ ಸಂಸ್ಥೆಯಲ್ಲಿ ವಿಜ್ಞಾನಿಗಳಾಗಿದ್ದ ಈಗ ಸ್ವಾಮಿ ಪ್ರಕಾಶಾನಂದ ಆಯುರ್ವೇದ ಸಂಶೋಧನಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ. ಎಸ್.ವಿ. ಭಿಡೆ ಎಂಬ ಮಹಿಳಾ ವಿಜ್ಞಾನಿ.

ಅವರು ೫೦೦ ಮಿಲಿಗ್ರಾಮ್‌ಗಳಷ್ಟು ಅರಿಷಿಣದ ಅರ್ಕವನ್ನು ಬಾಯಿಯ ಕ್ಯಾನ್ಸರಿನಿಂದ ನರಳುತ್ತಿದ್ದ ನೂರು ಜನರಿಗೆ ಕೊಟ್ಟಾಗ ಬಹಳಷ್ಟು ಜನರಲ್ಲಿ ಅದು ಸತ್ಪರಿಣಾಮವನ್ನೇ ಉಂಟುಮಾಡಿತು. ಕೆಲವರಲ್ಲಿ ಅರ್ಕ ಕ್ಯಾನ್ಸರಿನ ಬೆಳವಣಿಗೆಯ ಗತಿಯನ್ನು ಪ್ರಾರಂಭಿಕ ಹಂತದಲ್ಲೆ ಕ್ಷಿಪ್ರವಾಗಿ ನಿಯಂತ್ರಿಸಿದರೆ ಇನ್ನು ಕೆಲವರಲ್ಲಿ ಮೊದಮೊದಲು ಸಾವಕಾಶವಾಗಿ ಪರಿಣಾಮವನ್ನು ತೋರಿಸತೊಡಗಿ ಅನಂತರ ಕ್ಷಿಪ್ರ ಸುಧಾರಣೆಯನ್ನು ತೋರಿಸಿತು. ಈ ಅರ್ಕವನ್ನು ೧೫ ದಿನ ಕೊಟ್ಟಾಗ ರೋಗಿಗಳ ಯಕೃತ್ತಿನ ಮೇಲಾಗಲಿ ಮೂತ್ರಪಿಂಡದ ಮೇಲಾಗಲಿ ಯಾವ ದುಷ್ಪರಿಣಾಮವೂ ಕಂಡುಬರಲಿಲ್ಲ. ಅಗ್ನಿಮಾಂದ್ಯವೂ ಉಂಟಾಗಲಿಲ್ಲ. ಅದರ.ದೂರಗಾಮಿ ಪರಿಣಾಮಗಳನ್ನು ಪರೀಕ್ಷಿಸಲು ಪ್ರಯೋಗಗಳೀಗ ನಡೆಯುತ್ತಿವೆ.

ಅಶಕ್ತಿಯುಂಟಾದಾಗ, ವೃದ್ಧಾಪ್ಯದಲ್ಲಿ ಅರಳು-ಮರಳು ಉಂಟಾದಾಗ ಆಯುರ್ವೇದ ಪಂಡಿತರು ಅಶ್ವಗಂಧವನ್ನು ವಿಧಿಸುವುದುಂಟು. ಕ್ಷಯ ರೋಗವನ್ನು ನಿಯಂತ್ರಿಸುವಲ್ಲಿಯೂ ಇದು ಪ್ರಯೋಜನಕರ. ಆದರೆ ವಿಕಿರಣ ಚಿಕಿತ್ಸೆಯನ್ನು ಪಡೆಯುತ್ತಿರುವ ಕ್ಯಾನ್ಸರ್ ರೋಗಿಗಳು ಮದ್ಯಾರ್ಕದಲ್ಲಿ ಕರಗಿದ ಅಶ್ವಗಂಧವನ್ನು ದಿನಕ್ಕೆ ೪೦೦ ಮಿಲಿಗ್ರಾಮ್‌ಗಳ ಪ್ರಮಾಣದಲ್ಲಿ ತೆಗೆದುಕೊಂಡಾಗ ವಿಕಿರಣ ಚಿಕಿತ್ಸೆ ಹೆಚ್ಚು ಪರಿಣಾಮಕರವಾದುದೆಂದು ಹೇಳುತ್ತಾರೆ ಮಣಿಪಾಲ ಕಸ್ತೂರಬಾ ಮೆಡಿಕಲ್ ಕಾಲೇಜಿನ ಡಾ. ಉಮಾದೇವಿ ಅವರು. ಈವರೆಗೆ ಉಪಪರಿಣಾಮಗಳು ಗೋಚರಿಸಿಲ್ಲ. ಪ್ರಯೋಗಗಳು ಮುಂದುವರೆಯುತ್ತಿವೆ. ತುಳಸಿಯ ಅರ್ಕಕ್ಕೆ ವಿಕಿರಣದಿಂದ ಆರೋಗ್ಯಕರ ಜೀವಕಣಗಳ ಮೇಲೆ ಉಂಟಾಗುವ ದುಷ್ಪರಿಣಾಮವನ್ನು ತಡೆಗಟ್ಟುವ ಶಕ್ತಿಯಿದೆಯೆನ್ನುವುದು ಪ್ರಯೋಗಗಳ ಮೂಲಕ ಅವರು ಕಂಡುಕೊಂಡ ಇನ್ನೊಂದು ತಥ್ಯ.

ಕ್ಯಾಬೇಜ, ಕಾಲಿಫ್ಲಾವರುಗಳ ಜಾತಿಗೆ ಸೇರಿದ ತರಕಾರಿಗಳಲ್ಲಿ ಐಸೊಥಿಯೋಸಿನೇಟುಗಳೆಂಬ ರಾಸಾಯನಿಕ ಸಂಯುಕ್ತಗಳಿವೆ. ಕ್ಯಾನ್ಸರನ್ನುಂಟುಮಾಡುವ ತಂಬಾಕದಲ್ಲಿನ ರಾಸಾಯನಿಕಗಳನ್ನು ದೇಹದಿಂದ ಹೊರಹಾಕುವ ಸಾಮರ್ಥ್ಯ ಈ ಐಸೋಥಿಯೋಸಿನೇಟುಗಳಿಗೆ ಇರುವುದರಿಂದ ಧೂಮಪಾನಿಗಳು ಈ ತರಕಾರಿಗಳನ್ನು ಹೆಚ್ಚು ಪ್ರಮಾಣದಲ್ಲಿ ಸೇವಿಸುವುದು ಉತ್ತಮ ಎನ್ನುತ್ತಾರೆ ಅಮೆರಿಕದ ಡಾ. ಎಸ್.ಎಸ್. ಹೆಕ್ಟ್ ಎಂಬ ವಿಜ್ಞಾನಿ.

ಕ್ಯಾನ್ಸರನ್ನು ಗುಣಪಡಿಸುವ ಔಷಧವನ್ನು ಇನ್ನೂ ಕಂಡುಹಿಡಿಯಲಾಗಿಲ್ಲ. ಅಲ್ಲಿಯವರೆಗೆ ರೋಗವನ್ನು ತಹಬಂದಿಯಲ್ಲಿಡಲು ಲಭ್ಯವಿರುವ ಎಲ್ಲ ಮಾರ್ಗಗಳನ್ನೂ ಉಪಯೋಗಿಸಿಕೊಳ್ಳುವುದು ಕ್ಯಾನ್ಸರ್ ರೋಗಿಗಳಿಗೆ ಅನಿವಾರ್ಯ.

● 'ಕಸ್ತೂರಿಮೃಗ'

ಆರೋಗ್ಯದಂಗಳ



# ನಿದ್ರೆ ಮತ್ತು ಕನಸುಗಳು

✲ ✲


• ಡಾ. ಪ್ರಕಾಶ ಕೊಣ್ಣೂರ
'ಕೃಷ್ಣ ನಿವಾಸ'
ಹುಬ್ಬಳ್ಳಿ ರಸ್ತೆ
ಧಾರವಾಡ-೫೮೦ ೦೦೨


✲ ✲

ರಾಮಾಯಣದ ಕಥೆಯಲ್ಲಿ ಕುಂಭಕರ್ಣನ ಬಗ್ಗೆ ನಾವೆಲ್ಲ ಓದಿದ್ದೇವಷ್ಟೇ. ರಾವಣನ ಸೈನ್ಯದ ಅತಿರಥ ಮಹಾರಥರೆಲ್ಲ ವಾನರಸೇನೆಯ ಪರಾಕ್ರಮದೆದುರು ಧೂಳೀಪಟವಾಗ ತೊಡಗುತ್ತಾರೆ. ಇದರಿಂದ ಉದ್ರಿಕ್ತನಾದ ರಾವಣ ತಾನೇ ಯುದ್ಧಭೂಮಿಯನ್ನು ಪ್ರವೇಶಿಸಿ ಕಾದತೊಡಗುತ್ತಾನೆ. ಆದರೆ ರಾಮನ ಬಾಣಗಳು ರಾವಣನ ಸಾರಥಿಯನ್ನು ಕೊಂದು, ಅವನ ರಥವನ್ನು ಕೆಡವಿ ಅವನ ಕವಚವನ್ನು ಛೇದಿಸುತ್ತವೆ. ರಾವಣನ ಮೈಯೆಲ್ಲ ಗಾಯಗಳಿಂದ ರಕ್ತರಂಜಿತವಾಗುತ್ತದೆ. ಇದನ್ನು ಕಂಡ ರಾಮ ವಿಶ್ರಾಂತಿ ಪಡೆದು ಮರುದಿನ ಯುದ್ಧಕ್ಕೆ ಮರಳಲು ರಾವಣನಿಗೆ ಹೇಳುತ್ತಾನೆ. ರಾವಣ ಅಪಮಾನದಿಂದ ಕುದಿಯುತ್ತಾನೆ. ರಾಮನಿಗೂ ವಾನರ ಸೇನೆಗೂ ತಕ್ಕ ಶಾಸ್ತಿ ಮಾಡಲು ತನ್ನ ತಮ್ಮ ವೀರಾಧಿವೀರ ಕುಂಭಕರ್ಣನೇ ತಕ್ಕವನೆಂದು ನಿರ್ಧರಿಸಿ ಅವನನ್ನು ಕರೆತರಲು ತನ್ನ ಮಂತ್ರಿಗಳನ್ನು ಕಳಿಸುತ್ತಾನೆ.

ಮಂತ್ರಿಗಳು ಕುಂಭಕರ್ಣನ ಅರಮನೆಗೆ ಹೋದಾಗ ಕುಂಭಕರ್ಣ ನಿದ್ರೆಯಲ್ಲಿರುತ್ತಾನೆ. ಅವನು ಒಮ್ಮೆ ನಿದ್ರೆ ಹೋದನೆಂದರೆ ಆರು ತಿಂಗಳ ನಂತರವೇ ಎಚ್ಚರಾಗುವುದು. ಕೆಲವೇ ದಿನಗಳ ಹಿಂದೆ ನಿದ್ರೆಯಿಂದ ಎದ್ದು ಊಟ ಮುಗಿಸಿ ಮತ್ತೆ ನಿದ್ರೆ ಹೋಗಿದ್ದ ಅವನನ್ನು ಈಗ ಹೇಗೆ ಎಬ್ಬಿಸುವುದೆಂದು ರಾವಣನ ಮಂತ್ರಿಗಳಿಗೆ ಪೇಚಿಗಿಟ್ಟುಕೊಂಡಿತು. ಮಾಂಸವನ್ನು ರಾಶಿರಾಶಿಯಾಗಿ ಕುಂಭಕರ್ಣನ ಪಕ್ಕಕ್ಕೆ ಹಾಕಿ, ಜಿಂಕೆ,ಹಂದಿ ಮುಂತಾದ ಪ್ರಾಣಿಗಳನ್ನು ಅವನ ಮಂಚಕ್ಕೆ ಕಟ್ಟಿ, ಗುಡ್ಡದೆತ್ತರ ಅನ್ನ ಸುರಿದು ಕುಂಭಕರ್ಣನ ಕಿವಿಗಡಚಿಕ್ಕುವಂತೆ ಚಂಡೆಮದ್ದಳೆಗಳನ್ನು ಬಾರಿಸಲು ರಾವಣ ರಾಕ್ಷಸರಿಗೆ ಹೇಳುತ್ತಾನೆ. ನೂರಾರು ಚಂಡೆಮದ್ದಳೆಗಳ ಸಪ್ಪಳ ಮತ್ತು ಸುತ್ತಲೂ ತನಗೆ ಪ್ರಿಯವಾದ ಮಾಂಸಾಹಾರದ ಗಮಗಮಿಸುವ ವಾಸನೆ ಕುಂಭಕರ್ಣನ ಕಿವಿ ಮತ್ತು ಮೂಗುಗಳಿಗೆ ಅಡರಿ ಕೊನೆಗೊಮ್ಮೆ ಆತ ಎಚ್ಚರಗೊಳ್ಳುತ್ತಾನೆ.

'ಕ್ಲಾಯಿನ್ ಲೆವಿನ್ ಸಿಂಡ್ರೋಮ್' ಎಂಬ ರೋಗದ ಬಗ್ಗೆ ಕೇಳಿದ್ದೀರಾ ?

೧೯೩೬ರಲ್ಲಿ ಡಾ. ಲೆವಿನ್ ಇದನ್ನು ಮೊದಲ ಬಾರಿಗೆ ವಿವರವಾಗಿ ವರ್ಣಿಸಿದರು. ತರುಣ ಪುರುಷರಲ್ಲಿ ಸಾಮಾನ್ಯವಾಗಿ ಈ ರೋಗ ಕಾಣಿಸಿಕೊಳ್ಳುತ್ತದೆ. ಕೆಲವು ದಿನಗಳ ಅಸ್ವಸ್ಥತೆ ಮತ್ತು ದಣಿವಿನ ಅನುಭವದ ನಂತರ ಒಮ್ಮಿಂದೊಮ್ಮೆಲೇ ನಿದ್ರೆಯ ಜಂಪು ಆವರಿಸಿಕೊಳ್ಳುತ್ತದೆ. ರೋಗಿ ಹಗಲು-ರಾತ್ರಿ ನಿದ್ರೆ ಮಾಡತೊಡಗುತ್ತಾನೆ. ಊಟಕ್ಕೆ ಮತ್ತು ಬಹಿರ್ದೆಶೆಗೆ ಮಾತ್ರ ಎಚ್ಚರಾಗಿ ಮತ್ತೆ ನಿದ್ರೆ ಹೋಗುತ್ತಾನೆ. ನಿದ್ರೆಯ ನಡುವೆಯೇ ಎಚ್ಚರಿಸಿದರೆ ವಿಪರೀತ ಸಿಟ್ಟು, ಸಿಡಿಮಿಡಿ. ಊಟ ನೀಡಿದಾಗ ಸಿಕ್ಕಾಪಟ್ಟೆ ಕಬಳಿಸುತ್ತಾನೆ. ಆದರೆ ತಾನಾಗಿಯೇ ಊಟ ಕೇಳುವುದಿಲ್ಲ. ಆಹಾರ ಕಣ್ಣಿಗೆ ಬಿದ್ದರೆ ಮಾತ್ರ ಒಂದು ಅಗಳೂ ಉಳಿಯದಂತೆ ಭಕ್ಷಿಸುತ್ತಾನೆ. ರೋಗದ ಉಲ್ಬಣ ಕಡಿಮೆಯಾದಾಗ ತನ್ನ ಎಂದಿನ ಜೀವನಕ್ಕೆ ಮರುಳುತ್ತಾನೆ. ವರ್ಷದಲ್ಲಿ ಹಲವಾರು ಸಲ ಈ ರೋಗ ಪುನರಾವರ್ತಿಸುವದುಂಟು. ತಡೆದುಕೊಳ್ಳಲಾರದ ನಿದ್ರೆ ಮತ್ತು ಹೊಟ್ಟೆಬಾಕತನ ಈ 'ಕ್ಲಾಯಿನ್ ಲೆವಿನ್' ರೋಗದ ಮುಖ್ಯ ಲಕ್ಷಣಗಳು.

ರಾಮಾಯಣದ ಕುಂಭಕರ್ಣ ೧೯೯೫ರಲ್ಲಿ ಜೀವಿಸಿದ್ದರೆ ಅವನು 'ಕ್ಲಾಯಿನ್ ಲೆವಿನ್ ರೋಗ'ದಿಂದ ಬಳಲುತ್ತಿದ್ದಾನೆಂದು ವೈದ್ಯರು ನಿಷ್ಕರ್ಷಿಸುತ್ತಿದ್ದರೋ ಏನೋ !

'ಕ್ಲಾಯಿನ್ ಲೆವಿನ್'ನಂತೆಯೇ ಕಳೆದ ನಾಲ್ಕೈದು ದಶಕಗಳಿಂದ ವೈದ್ಯಕೀಯ ಪತ್ರಿಕೆ ಪುಸ್ತಕಗಳಲ್ಲಿ ಕಾಣಿಸಿಕೊಳ್ಳುತ್ತಿರುವ ರೋಗಗಳ ಹೆಸರುಗಳನ್ನು ಓದಿ: 'ನಾರ್ಕೊಲೆಪ್ಸಿ', 'ಕೆಟಪ್ಲೆಕ್ಸಿ', 'ಸ್ಲೀಪ್ ಪೆರಲಿಸಿಸ್', 'ಪಿಕ್‌ವಿಕಿಯನ್ ಸಿಂಡ್ರೋಮ್', 'ಸ್ಲೀಪ್ ಅಪ್ನೀಯ'

ಮತ್ತು ಇನ್ನೂ ಹಲವು.

ಮೇಲೆ ಉಲ್ಲೇಖಿಸಿರುವ ಈ ಎಲ್ಲ ರೋಗಗಳಿಗೂ ಸಾಮಾನ್ಯವಾಗಿರುವ ಒಂದು ಅಂಶವೆಂದರೆ ನಿದ್ರೆ ಮತ್ತು ನಿದ್ರಾಸ್ಥಿತಿಯ ಏರುಪೇರುಗಳು.

## ನಿದ್ರೆ ಅಂದರೆ ಏನು ?

ನಿದ್ರೆ ಎಂಬ ಸ್ಥಿತಿಯ ಬಗೆಗೆ ಮನುಷ್ಯನ ನಿಲುಮೆ ಇತಿಹಾಸದುದ್ದಕ್ಕೂ ಬಹುವಿಧವಾಗಿದೆ. ನಿದ್ರೆ ಮಾನವನ ಶತ್ರು; ಅದು ಅವನ ಜೀವಿತ ಕಾಲದ ಬಹುಮುಖ್ಯ ಸಮಯವನ್ನು ಹಾಳುಮಾಡುತ್ತಿದೆ ಎಂಬ ಅಭಿಪ್ರಾಯದಿಂದ ಹಿಡಿದು ಅದು ತಪ್ಪಿಸಿಕೊಳ್ಳಲಾಗದ ಒಂದು ಜೈವಿಕ ಆವಶ್ಯಕತೆ ಎಂಬ ನಂಬಿಕೆಯವರೆಗೂ ತರಹತರಹದ ನಿಲುವುಗಳು ವ್ಯಕ್ತವಾಗಿವೆ. ಇತ್ತೀಚೆಗೆ ನಡೆದ ಪ್ರಯೋಗಶಾಲೆಗಳಲ್ಲಿಯ ಪ್ರಯೋಗಗಳು ನಿದ್ರೆಯ ಜೈವಿಕ ಆವಶ್ಯಕತೆಯನ್ನು ಎತ್ತಿ ಹಿಡಿಯುವಂತೆ ಕಂಡುಬರುತ್ತವೆ.

ವಿಜ್ಞಾನಿಗಳು ಕೊಡುವ ನಿದ್ರೆಯ ವ್ಯಾಖ್ಯೆ ಹೀಗಿದೆ: ನಿದ್ರೆ ಒಂದು ನಿಯಮಿತ, ಪುನರಾವರ್ತಿತ, ಸುಲಭವಾಗಿ ಹೋಗಲಾಡಿಸಬಲ್ಲ ಜೈವಿಕ ಸ್ಥಿತಿ. ಈ ಸ್ಥಿತಿಯಲ್ಲಿ ಜೀವಿ ಹಗಲಿಗಿಂತ ಹೆಚ್ಚು ಶಾಂತಿಯನ್ನು ಅನುಭವಿಸುತ್ತದೆ. ಬಾಹ್ಯ ಪ್ರಚೋದನೆಗಳ ಬಗೆಗಿನ ಎಳೆತ ನಿದ್ರೆಯ ಅವಧಿಯಲ್ಲಿ ಕುಂಠಿತವಾಗುತ್ತದೆ.

ನಿದ್ದೆ ಮೇಲ್ನೋಟಕ್ಕೆ ಒಂದೇ ಪ್ರಕ್ರಿಯೆಯಂತೆ ಕಂಡರೂ ಅದರ ಆಂತರಿಕ ಏರಿಳಿತಗಳಲ್ಲಿ ಅಗಾಧ ವೈವಿಧ್ಯವಿದೆ, ಕ್ಲಿಷ್ಟತೆಯಿದೆ, ನಿಗೂಢತೆಯಿದೆ. ಮನುಷ್ಯನ ನಂಬಿಕೆ, ನಡುವಳಿಕೆಗಳ ಮೇಲೆ ನಿದ್ರೆಯಲ್ಲಿ ಘಟಿಸುವ ಸಂಗತಿಗಳು ಬೀರಿರುವ ಪರಿಣಾಮವನ್ನು ಪಟ್ಟಿಮಾಡುವುದು ಅಸಾಧ್ಯವೇ ಸರಿ. ನಮ್ಮ ಪುರಾಣೇತಿಹಾಸಗಳ ವ್ಯಕ್ತಿಗಳ ನಿದ್ರೆಯಲ್ಲಿಯ ಅನುಭವಗಳು ಇತಿಹಾಸದ ದಿಕ್ಕನ್ನೇ ಬದಲಾಯಿಸಿರುವುದು ಕಂಡುಬರುತ್ತದೆ. ಸಂತರಾದ ಪುರಂದರದಾಸ ಮತ್ತು ಕನಕದಾಸರಿಗೆ ನಿದ್ರೆಯ ಅಜಾಗೃತ ಅವಸ್ಥೆಯಲ್ಲಿ ಆದ ಅನುಭವಗಳೇ ಅವರ ಬಾಳಿನ ದಿಕ್ಕುಗಳನ್ನು ಬದಲಾಯಿಸಿದವು. ಯೇಸು ಕ್ರಿಸ್ತನ ತಂದೆ ಜೋಸೆಫ್ ಕನಸಿನಲ್ಲಿ ತನ್ನ ನವಜಾತ ಪುತ್ರನನ್ನು (ಯೇಸು) ಅರಸು ಹೆರೊಡ್ ಕೊಲ್ಲಲು ಪ್ರಯತ್ನಿಸುವುದನ್ನು ಕಂಡಿದ್ದರಿಂದ ಆತ ಜೆರುಸಲೇಮನ್ನು ಬಿಟ್ಟು ಈಜಿಪ್ಟಿಗೆ ಓಡಿಹೋಗಿ ತನ್ನ ಮತ್ತು ಮಗುವಿನ ಜೀವವನ್ನು ರಕ್ಷಿಸಿಕೊಂಡ. ಪ್ರವಾದಿ ಮುಹಮದ್ ಪೈಗಂಬರರಿಗೆ ಸಹ ಅವರ ಅಜಾಗೃತ ಅವಸ್ಥೆಯಲ್ಲಿ ಆದ ಬೋಧನೆಗಳು ಇಸ್ಲಾಮಿನ ಉದಯಕ್ಕೆ ಕಾರಣವಾದುವು. ಕಂಸನು ಕಂಡ ಕನಸುಗಳು ಕೃಷ್ಣನನ್ನು ಕೊಲ್ಲಲು ಅವನನ್ನು ಹೇಗೆ ಪ್ರೇರೇಪಿಸಿದವೆಂಬುದು ಎಲ್ಲರಿಗೂ ಗೊತ್ತು.

## ಎಷ್ಟು ವಿಧಗಳು ?

ವಾಸ್ತವವಾಗಿ ನಿದ್ರೆಯಲ್ಲಿ ಎರಡು ವಿಧ: ಒಂದು ಲಘು ನಿದ್ರೆ, ಮತ್ತೊಂದು ಗಾಢ ನಿದ್ರೆ.

ಜಾಗೃತಾವಸ್ಥೆಯಿಂದ ನಿದ್ರಾವಸ್ಥೆಯನ್ನು ತಲಪುವ ಮನುಷ್ಯ ಹಲವಾರು ಘಟ್ಟಗಳ ಮೂಲಕ ಹಾಯುತ್ತಾನೆ. ಕಣ್ಣುಗಳು ಮುಚ್ಚಿಕೊಳ್ಳುತ್ತವೆ. ದೇಹದ ಚಲನೆ ಸ್ತಬ್ಧವಾಗುತ್ತದೆ. ಉಸಿರಾಟ ನಿಯಮಿತವಾಗುತ್ತದೆ. ದೇಹ ವಿರಮಿಸಿಕೊಳ್ಳುತ್ತಲೇ ವಿಶ್ರಮಿಸಲು ತೊಡಗುತ್ತದೆ.

ನಿದ್ರೆಯ ವಿವಿಧ ಘಟ್ಟಗಳನ್ನು ಅರಿತುಕೊಳ್ಳುವಲ್ಲಿ ಇ.ಇ.ಜಿ. (ಇಲೆಕ್ಟ್ರೋ ಎನ್‌ಸೆಫಾಲೊಗ್ರಾಫ್) ಯಂತ್ರದ ಉಪಯೋಗ ಅನಿವಾರ್ಯವಾಗಿದೆ. ಜರ್ಮನಿಯಲ್ಲಿ ಸುಮಾರು

ಅರವತ್ತು ವರುಷಗಳ ಹಿಂದೆ ಶೋಧಿಸಲ್ಪಟ್ಟ ಈ ಯಂತ್ರದ ಮೂಲಕ ನಿದ್ರೆಯ ಬಗೆಗಿನ ಅಭ್ಯಾಸಕ್ಕೆ ಬಲಬಂದು ನಿದ್ರೆಗೆ ಸಂಬಂಧಿಸಿದ ಅನೇಕ ಕ್ಲಿಷ್ಟ ಸಮಸ್ಯೆಗಳ ಪರಿಹಾರಕ್ಕೆ ಸಹಾಯವಾಗಿದೆ.

ಇ.ಇ.ಜಿ. ಯಂತ್ರವು ಮಿದುಳಿನಲ್ಲಿಯ ವಿದ್ಯುತ್ ಅಲೆಗಳ ಚಲನೆಯನ್ನು ದಾಖಲಿಸುತ್ತದೆ. ಸಾಮಾನ್ಯಸ್ಥಿತಿ ಮತ್ತು ರೋಗಗ್ರಸ್ತ ಪರಿಸ್ಥಿತಿಗಳಲ್ಲಿ ಮಿದುಳಿನ ವಿದ್ಯುತ್ ಅಲೆಗಳ ಚಲನೆ ಮತ್ತು ಆಳತೆಗಳಲ್ಲಿ ಭೇದಗಳುಂಟಾಗುತ್ತವೆ. ಈ ಭೇದಗಳ ಸಹಾಯದಿಂದ ಮಿದುಳಿನಲ್ಲಿಯ ಅಪಘಟನೆಗಳನ್ನು ಗುರುತಿಸಲಾಗುತ್ತದೆ.

ಆಲ್ಫಾ ಎನ್ನುವ ವಿದ್ಯುತ್ ಅಲೆ ನಿರೋಗಿಯಾದ ಜಾಗ್ರತ ಮಿದುಳಿನಲ್ಲಿ ಹೆಚ್ಚು ಸಾಮಾನ್ಯವಾಗಿ ಕಂಡುಬರುವ ಅಲೆ. ಬೀಟಾ, ಥೀಟಾ ಮತ್ತು ಡೆಲ್ಟಾ ಎನ್ನುವ ಅಲೆಗಳು ವ್ಯಕ್ತಿಯ ವಯಸ್ಸು ಅವನ ಎಚ್ಚರದ ಸ್ತರ ಮುಂತಾದುವನ್ನು ಆಧರಿಸಿ ನಿರೋಗಿಯ ಮಿದುಳಿನಲ್ಲಿ ಕಾಣಸಿಗುವವಲ್ಲದೇ ರೋಗಗ್ರಸ್ತ ಮಿದುಳಿನಲ್ಲಿ ಹೆಚ್ಚು ವ್ಯಾಪಕವಾಗಿ ಕಂಡುಬರುತ್ತವೆ. ಸ್ಪೈಕ್ಸ್ (spikes) ಎಂದು ಕರೆಯಲ್ಪಡುವ ಮೊನಚು ಅಲೆಗಳು ಅಪಸ್ಮಾರದ ವಿವಿಧ ಪ್ರಕಾರಗಳನ್ನು ಗುರುತಿಸುವಲ್ಲಿ ನೆರವಿಗೆ ಬರುತ್ತಿವೆ. ಸ್ವಲ್ಪದರಲ್ಲಿ ಹೇಳಬೇಕೆಂದರೆ ಇ.ಇ.ಜಿ. ಯಂತ್ರದ ಸಂಶೋಧನೆಯ ನಂತರ ನಿದ್ರೆಯ ನಿಗೂಢ ಮತ್ತು ಅಭೇದ್ಯ ಜಗತ್ತು ತನ್ನನ್ನು ತಾನೇ ಅಭ್ಯಾಸಕ್ಕೆ ತೆರೆದುಕೊಂಡಂತಾಗಿದೆ.

## ಐದು ಪಾತಳಿಗಳು

ನಿದ್ರೆಯ ಗೂಢವನ್ನು ಭೇದಿಸುತ್ತ ಹೋದಂತೆ ಕೆಳಕಂಡ ಸಂಗತಿಗಳು ಇನ್ನಷ್ಟು ಸ್ಪಷ್ಟವಾಗುತ್ತ ಹೋಗುತ್ತವೆ.

೧. ನಿದ್ರೆಯೆನ್ನುವದು ಮೇಲ್ನೋಟಕ್ಕೆ ಕಾಣುವಂತೆ ಒಂದೇ ಪಾತಳಿಯ ಮೇಲೆ ನಡೆಯುವ ಕ್ರಿಯೆಯಲ್ಲ. ಅದು ಲಘು ನಿದ್ರೆಯಿಂದ ಹಿಡಿದು ಗಾಢ ನಿದ್ರೆಯವರೆಗೆ ಐದು ಪಾತಳಿಗಳಲ್ಲಿ ನಡೆಯುತ್ತದೆ. ಇ.ಇ.ಜಿ. ಯಂತ್ರದ ಮೂಲಕ ಗೋಚರಿಸುವ ವಿದ್ಯುತ್ ಅಲೆಗಳು ಈ ಐದು ಪಾತಳಿಗಳನ್ನು ಸ್ಪಷ್ಟವಾಗಿ ಪ್ರತ್ಯೇಕಿಸುತ್ತವೆ.

**ಪಾತಳಿ ೧:** ಕಡಿಮೆ ವೋಲ್ಟೇಜಿನ, ಅಸಮಕಾಲಿಕ, (desynchronised) ಸೆಕೆಂಡಿಗೆ ೪ ರಿಂದ ೬ ಅಲೆಗಳ ವಿದ್ಯುತ್ ಚಟುವಟಿಕೆ.

**ಪಾತಳಿ ೨:** ಸೆಕೆಂಡಿಗೆ ಹದಿಮೂರರಿಂದ ಹದಿನೈದರ ವೇಗದ ಕದರು (spindle) ಆಕಾರದ ಅಲೆಗಳ ಚಟುವಟಿಕೆ. 'ಕೆ ಕಾಂಪ್ಲೆಕ್ಸ್' ಎಂದು ಕರೆಯಲ್ಪಡುವ ಮೊನಚು ಆಕಾರದ ಅಲೆಗಳೂ ಈ ಸ್ಥಿತಿಯಲ್ಲಿ ಗೋಚರವಾಗುತ್ತವೆ.

**ಪಾತಳಿ ೩:** ಡೆಲ್ಟಾ ಅಲೆಗಳು: ಇತರ ಅಲೆಗಳೊಡನೆ ಸೆಕೆಂಡಿಗೆ ಅರ್ಧದಿಂದ ಎರಡೂವರೆ ಅಲೆಗಳ ವ್ಯಾಪ್ತಿಯ ಚಟುವಟಿಕೆ ತನ್ನ ಆಗಮನವನ್ನು ದಾಖಲಿಸುತ್ತದೆ. (ಡೆಲ್ಟಾ ಚಟುವಟಿಕೆ.)

**ಪಾತಳಿ ೪:** ಈ ಪಾತಳಿಯಲ್ಲಿ ಇ.ಇ.ಜಿ. ದಾಖಲೆಯ ತುಂಬ ಡೆಲ್ಟಾ ಚಟುವಟಿಕೆಯೇ ಕಂಡುಬರುತ್ತದೆ.

**ಪಾತಳಿ ೫:** ಗಾಢ ನಿದ್ರೆಯ ಕೊನೆಯ ಪಾತಳಿ ಆರ್.ಈ.ಎಮ್. ನಿದ್ರೆ ಅಥವಾ 'ಅಸಮಕಾಲಿಕ' ಅಥವಾ 'ಡಿ' ನಿದ್ರೆಯೆಂದು ಕರೆಯಲ್ಪಡುತ್ತದೆ.

ಆರ್.ಈ.ಎಮ್. ನಿದ್ರೆಯ ಲಕ್ಷಣಗಳು.

ಅ) ಅನಿಯಮಿತ ವೇಗದ ನಾಡಿ.

ಆ) ಅನಿಯಮಿತ ಶ್ವಾಸೋಚ್ಛ್ವಾಸ.

ಇ) ಅನಿಯಮಿತ ರಕ್ತದ ಒತ್ತಡ.

ಈ) ಪೂರ್ಣ ಇಲ್ಲವೇ ಭಾಗಶಃ ಶಿಶ್ನೋದ್ರೇಕ.

ಉ) ಇಡಿ ದೇಹದ ಸ್ನಾಯುಗಳ ಬಿಗಿತದಲ್ಲಿಯ ಇಳಿತ.

ಊ) ಸಣ್ಣ ಸ್ನಾಯುಮಂಡಲಗಳಲ್ಲಿ ಕಾಲಕಾಲಕ್ಕೆ ಚಟುವಟಿಕೆ.

ಆರ್.ಈ.ಎಮ್. ನಿದ್ರೆ ಅಸಮಕಾಲಿಕ ನಿದ್ರೆ. ಎಂದರೆ ಮಿದುಳಿನ ವಿವಿಧ ಭಾಗಗಳಲ್ಲಿಯ ವಿದ್ಯುತ್ ಚಟುವಟಿಕೆ ಒಂದೇ ಪಾತಳಿಯಲ್ಲಿರುವುದಿಲ್ಲ.

ಎನ್.ಆರ್.ಈ.ಎಮ್. ಎಂದು ಕರೆಯಲ್ಪಡುವ ಎರಡನೆಯದರಿಂದ ನಾಲ್ಕನೆಯ ಘಟ್ಟಗಳ ನಿದ್ರಾ ಅವಧಿ ಸಾಮಾನ್ಯವಾಗಿ ವಿದ್ಯುತ್ ಚಟುವಟಿಕೆಯು ಪಾತಳಿಯಲ್ಲಿ ಸಮಕಾಲಿಕವಾಗಿರುವುದನ್ನು ತೋರಿಸುತ್ತದೆ.

ಒಂದು ರಾತ್ರಿಯಲ್ಲಿ ಒಬ್ಬ ಮನುಷ್ಯನ ನಿದ್ರೆಯ ಅವಧಿ ಸರಾಸರಿ ಏಳೆಂಟು ಗಂಟೆ ಎನ್ನುವುದಾದರೆ ಸುಮಾರು ಐದೂವರೆ ಗಂಟೆಯಿಂದ ಆರೂವರೆ ಗಂಟೆ ಸಮಕಾಲಿಕ ನಿದ್ರೆಯ ವೇಳೆಯೆನ್ನಬಹುದು. ಸುಮಾರು ಒಂದೂವರೆ ಗಂಟೆಯ ಅವಧಿ ಅಸಮಕಾಲಿಕ ನಿದ್ರೆಯ ಅವಧಿ. ಈ ಎರಡೂ ನಿದ್ರೆಗಳು ಒಂದು ರಾತ್ರಿಯ ಅವಧಿಯಲ್ಲಿ ನಾಲ್ಕೈದು ಸಲ ಕಾಣಿಸಿಕೊಳ್ಳುತ್ತವೆ.

ಮನುಷ್ಯ ನಿದ್ರೆ ಹೋದ ಕೂಡಲೇ ಕಾಣಿಸಿಕೊಳ್ಳುವುದು ಮೊದಲನೆಯ ಸಮಕಾಲಿಕ ನಿದ್ರೆ. ಸುಮಾರು ಒಂದರಿಂದ ಒಂದೂವರೆ ಗಂಟೆಯ ಅವಧಿಯ ನಂತರ ಮೊದಲನೆಯ ಅಸಮಕಾಲಿಕ ನಿದ್ರೆ ಪ್ರಾರಂಭವಾಗಿ ಸುಮಾರು ಹದಿನೈದು ನಿಮಿಷ ಮುಂದುವರೆಯುತ್ತದೆ. ನಂತರ ಎರಡನೆಯ ಸಮಕಾಲಿಕ ನಿದ್ರೆಯ ಪ್ರಾರಂಭ. ಇದು ಸಹ ಒಂದರಿಂದ ಎರಡು ಗಂಟೆಯ ವರೆಗೆ ನಡೆಯುತ್ತದೆ. ಹೀಗೆ ಈ ಎರಡೂ ತರಹದ ನಿದ್ರೆಗಳು ಒಂದರ ನಂತರ ಮತ್ತೊಂದರಂತೆ ಸಾಗುತ್ತವೆ. ಅಸಮಕಾಲಿಕ ನಿದ್ರೆಯ ಅವಧಿ ಕ್ರಮೇಣ ಹೆಚ್ಚಾಗುತ್ತ ಹೋಗುತ್ತದೆ. ನಿದ್ರೆಯ ಒಟ್ಟು ಅವಧಿಯಲ್ಲಿ ಶೇಕಡಾ ಎಂಭತ್ತರಷ್ಟು ಭಾಗ ಸಮಕಾಲಿಕ ನಿದ್ರೆಯದಾದರೆ ಶೇಕಡಾ ಇಪ್ಪತ್ತರಷ್ಟು ಭಾಗ ಅಸಮಕಾಲಿಕ ನಿದ್ರೆಯದು.

ಪ್ರಾಣಿವರ್ಗದಲ್ಲಿ ಸರೀಸೃಪಗಳಲ್ಲಿ ಕೇವಲ ಸಮಕಾಲಿಕ ನಿದ್ರೆ ಕಾಣಸಿಗುತ್ತದೆ. ಪಕ್ಷಿಗಳು ಮತ್ತು ಸಸ್ತನಿಗಳಲ್ಲಿ ಸಮಕಾಲಿಕ ಮತ್ತು ಅಸಮಕಾಲಿಕ ಇವೆರಡೂ ವಿಧಗಳು ಇರುತ್ತವೆ. ಮೇಲಿನ ವರ್ಗದ ಸಸ್ತನಿ ಪ್ರಾಣಿಗಳಾದ ಮನುಷ್ಯ ಮತ್ತು ಮಂಗ ಇವುಗಳಲ್ಲಿ ಅಸಮಕಾಲಿಕ ನಿದ್ರೆಯ ಪ್ರಮಾಣ ಸಮನಾಗಿದ್ದರೆ ಕೆಳವರ್ಗದ ಸಸ್ತನಿ ಪ್ರಾಣಿಗಳಲ್ಲಿ ಅಸಮಕಾಲಿಕ ನಿದ್ರೆಯ ಪ್ರಮಾಣ ತುಲನಾತ್ಮಕವಾಗಿ ಕಡಿಮೆ.

ತಮ್ಮ ಶೈಶವಾವಸ್ಥೆಯಲ್ಲಿ ಹೆಚ್ಚು ಭಾಗವನ್ನು ನಿದ್ರೆಯಲ್ಲಿಯೇ ವ್ಯಯಿಸುತ್ತವೆ ಎನ್ನುವುದು ಎಲ್ಲಾ ವರ್ಗಗಳ ಪ್ರಾಣಿಗಳ ನಿದ್ರೆಗಳಲ್ಲಿ ಕಂಡುಬರುವ ಒಂದು ಸಾಮಾನ್ಯ ಅಂಶ. ಮಾನವ ಶಿಶುಗಳಲ್ಲಿ ಅಸಮಕಾಲಿಕ ನಿದ್ರೆಯ ಪ್ರಮಾಣ ಪ್ರೌಢರಿಗಿಂತ ಬಹಳ ಹೆಚ್ಚು. ಹೊಸದಾಗಿ ಹುಟ್ಟಿದ ಕೂಸು ದಿನದ ಹದಿನೈದರಿಂದ ಹದಿನೆಂಟು ಗಂಟೆಗಳನ್ನು ನಿದ್ರೆಯಲ್ಲಿ ಕಳೆಯುತ್ತದೆ. ಇದರಲ್ಲಿಯ ಅರ್ಧದಷ್ಟು ಭಾಗ ಅಸಮಕಾಲಿಕ ನಿದ್ರೆಗೇ ಮೀಸಲು. ಹೀಗೆ ಅಸಮಕಾಲಿಕ ನಿದ್ರೆ ಉತ್ಕ್ರಾಂತಿಯ ಒಂದು ಬಹು ಪುರಾತನ ಅಂಶ ಎನ್ನಬಹುದು.

ಅಸಮಕಾಲಿಕ ನಿದ್ರೆಯ ಮತ್ತೊಂದು ಎದ್ದುಕಾಣುವ ಗುಣವೆಂದರೆ ನಾಡಿಯ ಬಡಿತ, ರಕ್ತದ ಒತ್ತಡ ಮತ್ತು ಉಸಿರಾಟದ ವೇಗ ಇವು ಸಮಕಾಲಿಕ ಸ್ಥಿತಿ ಮತ್ತು ಎಚ್ಚರದ ಸ್ಥಿತಿಗಳಲ್ಲಿ ಇರುವುದಕ್ಕಿಂತಲೂ ಸಾಮಾನ್ಯವಾಗಿ ಹೆಚ್ಚು ಇರುವುದು. ಎರಡೂ ಕಣ್ಣುಗಳ

ಸಂಯೋಜಿತ ಚಲನವಲನೆಯೂ ಈ ನಿದ್ರಾ ಸ್ಥಿತಿಯ ಮತ್ತೊಂದು ವಿಶೇಷ.

ಹೀಗೆ ಅಸಮಕಾಲಿಕ ನಿದ್ರೆಯ ಅವಧಿಯಲ್ಲಿ ಮನುಷ್ಯನ ಮನಸ್ಸು ಜಾಗೃತಾವಸ್ಥೆಯಲ್ಲಿದ್ದು ಅವನ ದೇಹ ನಿಶ್ಚೇಷ್ಟಿತವಾಗಿರುತ್ತದೆ. ಅಸಮಕಾಲಿಕ ನಿದ್ರೆ ತೀವ್ರ ಮಾನಸಿಕ, ದೈಹಿಕ ಚಟುವಟಿಕೆಯ ಘಟ್ಟವಾಗಿದ್ದರೂ ಚಟುವಟಿಕೆಯ ಮೇಲಿನ ನಿಯಂತ್ರಣ ಇಲ್ಲದಿರುವುದು ಅದರ ಮುಖ್ಯ ಲಕ್ಷಣವಾಗಿದೆ.

## ನಿದ್ರೆಯ ನಿಯಂತ್ರಣದ ಕೇಂದ್ರಗಳು

ಸಮಕಾಲಿಕ ನಿದ್ರೆಯ ನಿಯಂತ್ರಣವನ್ನು ನಡು ಮಿದುಳಿನಲ್ಲಿ ರಾಫೆ ಪ್ರದೇಶ ಮಾಡುತ್ತದೆ. ಅಸಮಕಾಲಿಕ ನಿದ್ರೆ ಮಿದುಳಿನ ಬೊಡ್ಡೆಯಲ್ಲಿರುವ ಊರ್ಧ್ವಮುಖ ನರಜಾಲ ಸಮುಚ್ಚಯದಿಂದ ನಿಯಂತ್ರಿಸಲ್ಪಡುತ್ತದೆ. (Ascending reticular format-ion.) ಅಂತರ್ ನರವಾಹಕ ಪದಾರ್ಥಗಳಾದ ನಾರ್‌ಎಪಿನೆಫ್ರಿನ್ ಮತ್ತು ಸೆರೊಟೋನಿನ್‌ಗಳು ನಿದ್ರೆಯ ಮತ್ತು ಜಾಗೃತಾವಸ್ಥೆಯ ಪ್ರಕ್ರಿಯೆಗಳಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ನಮ್ಮನ್ನು ಎಚ್ಚರವಾಗಿಡುವುದರಲ್ಲಿ ನಾರ್‌ಎಪಿನೆಫ್ರಿನ್ ಪಾತ್ರವಹಿಸಿದರೆ ನಮಗೆ ನಿದ್ರೆ ಬರಿಸುವದರಲ್ಲಿ ಸೆರೊಟೋನಿನ್ ಪಾತ್ರವಹಿಸುತ್ತದೆ. ರಾಫೆ ಬೀಜಕೋಶವು ಬಹುಶಃ ಮಿದುಳಿನ ಎಲ್ಲ ಸೆರೊಟೋನಿನ್ ತಯಾರಿಸುವ ನರಕೋಶಗಳನ್ನು ಹೊಂದಿದ್ದು ಅದನ್ನು ನಾಶಪಡಿಸಿದಾಗ ನಿದ್ರೆಯ ಪ್ರಮಾಣ ಬಹಳಷ್ಟು ಕಡಿಮೆಯಾಗುವದು ಪತ್ತೆಯಾಗಿದೆ.

ನಡು ಮಿದುಳಿನ ಲೋಕಸ್ ಸೆರ್ಯುಲಿಯಸ್ ಎಂಬ ಭಾಗಗಳು ಮುಖ್ಯವಾಗಿ ನಾರ್‌ಎಪಿನೆಫ್ರಿನ್ ಅಂತರ್ ನರವಾಹಕವನ್ನು ಉತ್ಪಾದಿಸುತ್ತವೆ. ಈ ಭಾಗವು ಅಸಮಕಾಲಿಕ ನಿದ್ರೆಯನ್ನು ನಿಯಂತ್ರಿಸುವಲ್ಲಿ ಭಾಗವಹಿಸುತ್ತದೆ. ನಡು ಮಿದುಳಿನ ಕೆಳಭಾಗದಲ್ಲಿರುವ ದೈತ್ಯ ನರಕೋಶಗಳ ಪ್ರದೇಶವು ಅಸಮಕಾಲಿಕ ನಿದ್ರೆಯನ್ನು ಪ್ರಚೋದಿಸುತ್ತದೆ. ಒಟ್ಟಾರೆ ನಿದ್ರೆಯ ಪ್ರಕ್ರಿಯೆಯಲ್ಲಿ ಈ ಮೇಲೆ ಉಲ್ಲೇಖಿಸಿದ ಪ್ರದೇಶಗಳ ಪರಸ್ಪರ ತಡೆಗಡಿಯುವಿಕೆ ಮುಖ್ಯ ಪಾತ್ರವನ್ನು ವಹಿಸುತ್ತದೆ.

ಈಚಿನ ವರ್ಷಗಳಲ್ಲಿ ಸೆರೊಟೋನಿನ್ ಅಂತರ್ ನರವಾಹಕವು ಮಿದುಳಿನ ವಿಜ್ಞಾನದಲ್ಲಿ ಪ್ರಮುಖ ಪಾತ್ರವನ್ನು ಪಡೆಯುತ್ತಿದ್ದು ನಿದ್ರೆಯನ್ನು ಪ್ರಾರಂಭಿಸುವುದರಲ್ಲಿ, ಒಟ್ಟು ನಿದ್ರೆಯ ವೇಳೆಯನ್ನು ಹೆಚ್ಚಿಸುವದರಲ್ಲಿ ಮತ್ತು ಅಸಮಕಾಲಿಕ ನಿದ್ರೆಯ ವೇಳೆಯನ್ನು ಹೆಚ್ಚಿಸುವಲ್ಲಿ ಆಯಕಟ್ಟಿನ ಪಾತ್ರ ವಹಿಸುತ್ತದೆ. ಟ್ರಿಪ್ಟೋಫ್ಯಾನ್ ಸಹ ಸೆರೊಟೋನಿನ್ನಿನ ಗುಣಗಳನ್ನೇ ಹೊಂದಿರುವದು ಕಂಡು ಬಂದಿದೆ. ಇತರ ಅಂತರ್ ನರವಾಹಕಗಳಾದ ಡೋಪ್‌ಮಿನ್ ಮತ್ತು ಅಸೆಟಿಲ್ ಕೋಲೀನ್‌ಗಳೂ ನಿದ್ರೆಯ ಪ್ರಕ್ರಿಯೆಯಲ್ಲಿ ಪಾತ್ರವಹಿಸುತ್ತವೆ.

## ನಿದ್ರೆಯ ಉಪಯೋಗ ಮತ್ತು ಅವಶ್ಯಕತೆ

ನಿದ್ರೆಯ ಅವಶ್ಯಕತೆ ಮತ್ತು ಔಚಿತ್ಯದ ಬಗ್ಗೆ ಮೊದಲಿನಿಂದಲೂ ವಿವಾದ ಇದ್ದೇ ಇದೆ. ಮನುಷ್ಯನಿಗೆ ನಿದ್ರೆಯ ಅವಶ್ಯಕತೆಯೇ ಇಲ್ಲವೆನ್ನುವ ಗುಂಪು ಒಂದಿದ್ದರೆ, ನಿದ್ರೆ ನಮ್ಮ ಜೈವಿಕ ವ್ಯವಸ್ಥೆಯ ಒಂದು ಅತ್ಯಾವಶ್ಯಕ ಮತ್ತು ಅನಿವಾರ್ಯ ಅಂಗ ಎನ್ನುವವರ ಗುಂಪು ಇನ್ನೊಂದು. ಮೂರನೆಯ ಮತ್ತೊಂದು ಗುಂಪು ಇನ್ನೂ ಮುಂದೆ ಹೋಗಿ ಜೈವಿಕ ಉತ್ಕ್ರಾಂತಿಯ ಮೂಲವೇ ನಿದ್ರೆಯಲ್ಲಿ- ಅದೂ ಅಸಮಕಾಲಿಕ ನಿದ್ರೆಯಲ್ಲಿ- ಇದೆ ಎಂದು ಹೇಳುತ್ತದೆ. ಮನುಷ್ಯನಲ್ಲಿ ಬುದ್ಧಿ ಭಾವನೆಗಳ ಪ್ರಾರಂಭಕ್ಕೂ ಅಸಮಕಾಲಿಕ ನಿದ್ರೆಯ ಆರಂಭಕ್ಕೂ ಕೆಲವು ವಿಜ್ಞಾನಿಗಳು ತಳಕುಹಾಕಿ ಇವೆರಡೂ ಉತ್ಕ್ರಾಂತಿಯ ಹಾದಿಯಲ್ಲಿ ಕೂಡಿಯೇ ಹುಟ್ಟಿಬಂದವೆಂದೂ ಹೇಳುತ್ತಾರೆ.

ನಿದ್ರೆಯ ಬಗೆಗಿನ ವಿವಾದವು ವಿಜ್ಞಾನಿಗಳ ಮಟ್ಟಿಗೆ ಏನೇ ಇದ್ದರೂ ಜನ ಸಾಮಾನ್ಯರಿಗೆ ನಿದ್ರೆ ವರಪ್ರದಾನವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಹಗಲಿನಲ್ಲಿಯ ಜೀವನದ ಜಂಜಾಟದಿಂದ ಬಿಡುಗಡೆ ಮಾಡಿಸಿ ವಿಶ್ರಾಂತಿಯನ್ನು ವಿರಾಮವನ್ನು ಕಲ್ಪಿಸುವುದು ನಿದ್ರೆಯೆ. ಸರಾಸರಿ ನಾಲ್ಕೈದು ಗಂಟೆಗಳ ಕಾಲ ಮಾಡಿದ ಒಳ್ಳೆಯ ನಿದ್ರೆ ದಣಿವನ್ನು ಪರಿಹರಿಸುವುದಲ್ಲದೇ ವ್ಯಕ್ತಿಯಲ್ಲಿ ಹೊಸ ಹುರುಪನ್ನು ತುಂಬುತ್ತದೆ. ನಿದ್ರೆ ನಮ್ಮ ಜೀವನದ ಎಷ್ಟೊಂದು ಮಹತ್ವದ ಭಾಗವಾಗಿದೆಯೆಂದರೆ ಬಹಳಷ್ಟು ಜನರಿಗೆ ಒಂದು ರಾತ್ರಿಯ ನಿದ್ರೆ ಮಾಡಲು ಯಾವುದೇ ಕಾರಣದಿಂದ ಸಾಧ್ಯವಾಗದಿದ್ದರೆ ಮರುದಿನ ಎಡಬುಎಡಬಾಗುತ್ತದೆ. ಬಹು ಸಂಖ್ಯ ಜನಸಾಮಾನ್ಯರು ತಮ್ಮ ಆರೋಗ್ಯದ ಮಾಪನವನ್ನು ತಾವು ಪಡೆಯುವ ಸುಖ ನಿದ್ರೆಯ ಪ್ರಮಾಣದಿಂದಲೇ ಅಳೆಯುತ್ತಾರೆ. ನಿದ್ರೆ ಚೆನ್ನಾಗಿ ಆಗುತ್ತಿದ್ದರೆ ತಮ್ಮ ಆರೋಗ್ಯವೂ ಚೆನ್ನಾಗಿದೆ ಎಂಬುದು ಅವರ ನಿಷ್ಕರ್ಷೆ. ನಿದ್ರೆಯ ತೊಂದರೆ ಉಂಟಾದರೆ ತಮ್ಮ ಆರೋಗ್ಯ ಕೆಡುತ್ತದೆ ಎಂದುಕೊಳ್ಳುತ್ತಾರೆ. ಈ ಸಾರ್ವತ್ರಿಕ ಮಾನದಂಡವು ಒಂದು ರೀತಿಯಲ್ಲಿ ವೈಜ್ಞಾನಿಕವಾಗಿಯೂ ಸರಿಯಾಗಿಯೇ ಇದೆ ಎನ್ನಬಹುದು. ನಿರೋಗಿ ವ್ಯಕ್ತಿಗಳನ್ನು ನಿದ್ರೆಯಿಂದ ವಂಚಿತರನ್ನಾಗಿ ಮಾಡಿ ನಡೆಸಿದ ಪ್ರಯೋಗಗಳು ಈ ಕೆಳಗಿನ ಕುತೂಹಲಕರ ಅಂಶಗಳನ್ನು ಹೊರಗೆಡಹಿವೆ.

೧: ನಿದ್ರೆಯಿಂದ ವಂಚಿತನಾದ ವ್ಯಕ್ತಿಯ ಕಾರ್ಯ ಕುಶಲತೆ ಶಿಥಿಲವಾಗುತ್ತದೆ.

೨: ನಿದ್ರಾವಂಚನೆ ಮನುಷ್ಯನನ್ನು ಅರೆನಿದ್ರೆಯ, ಮಬ್ಬುಕವಿದ ಮನಃಸ್ಥಿತಿಗೆ ತಲುಪಿಸುತ್ತದೆ.

ನಿದ್ರೆಗೆಡುವ ವ್ಯಕ್ತಿತ್ವವು ವಿಸಂಘಟಿತವಾಗಲು ಆರಂಭಿಸುತ್ತದೆ. ವ್ಯಕ್ತಿ ತನ್ನ ಎಂದಿನ ಸಮತೋಲನವನ್ನು ಕಳೆದುಕೊಂಡು ಶೀಘ್ರಕೋಪಿಯಾಗುತ್ತಾನೆ. ಹೆದರಿಕೆ, ಸಂಶಯ ಮತ್ತು ಆಕ್ರಾಮಕ ಭಾವಗಳು ಹುಟ್ಟಿಕೊಳ್ಳುತ್ತವೆ. ದೃಷ್ಟಿ ಮತ್ತು ಶ್ರವಣ ಭ್ರಮೆಗಳು ಕಾಣಿಸಿಕೊಳ್ಳುತ್ತವೆ.

ಸಮಕಾಲಿಕ ನಿದ್ರೆ ದೈಹಿಕ ಸಮತೋಲನವನ್ನು ಮರಳಿಸಿದರೆ ಅಸಮಕಾಲಿಕ ನಿದ್ರೆ ಮಾನಸಿಕ ಮತ್ತು ಸಾಮಾಜಿಕ ನಡುವಳಿಕೆಯನ್ನು ಉತ್ತಮ ಸ್ಥಿತಿಯಲ್ಲಿಡಲು ಸಹಾಯಕವಾಗುತ್ತದೆ.

## ಲಘುಶಯನಿಗಳು, ದೀರ್ಘಶಯನಿಗಳು

ನಿದ್ರೆಗೆ ಸಂಬಂಧಿಸಿದಂತೆ ವ್ಯಕ್ತಿಗಳ ವರ್ಗೀಕರಣವನ್ನು ಮಾಡಲಾಗಿದ್ದು ದೀರ್ಘ ಶಯನಿಗಳು ಮತ್ತು ಲಘುಶಯನಿಗಳು ಎಂಬ ಎರಡು ವರ್ಗಗಳನ್ನು ಗುರುತಿಸಲಾಗಿದೆ. ದೀರ್ಘಶಯನಿಗಳು ಲಘುಶಯನಿಗಳಿಗಿಂತ ಒಂದೂವರೆ ಪಟ್ಟು ಹೆಚ್ಚು ನಿದ್ರೆ ಮಾಡುತ್ತಾರೆ. ಲಘುಶಯನಿಗಳ ಅಸಮಕಾಲಿಕ ನಿದ್ರೆ ದೀರ್ಘಶಯನಿಗಳದರ ಎರಡು ಪಟ್ಟು ಇರುತ್ತದೆ. ಕಣ್ಣುಗಳ ಚಲನೆಯ ತೀವ್ರತೆ ಲಘುಶಯನಿಗಳಲ್ಲಿ ಮೂರುಪಟ್ಟು ಹೆಚ್ಚಾಗಿರುತ್ತದೆ.

ಸಾಮಾನ್ಯವಾಗಿ ಲಘುಶಯನಿಗಳಲ್ಲಿ ಈ ಗುಣಗಳನ್ನು ಗುರುತಿಸಬಹುದು:

೧. ನಿಪುಣತೆ.

೨. ಸ್ಫೂರ್ತಿ.

೩. ಮಹತ್ವಾಕಾಂಕ್ಷೆ.

ಈ ವ್ಯಕ್ತಿಗಳು ಕೆಲವು ಸಲ ತಮ್ಮ ಈ ಗುಣಗಳಿಂದಾಗಿಯೇ ಉನ್ಮಾದ ಸ್ಥಿತಿಗಳಿಂದ ಬಳಲುವದುಂಟು.

ದೀರ್ಘಶಯನಿಗಳಲ್ಲಿ ಈ ಕೆಳಗಿನ ಗುಣಗಳನ್ನು ಗುರುತಿಸಲಾಗಿದೆ.

೧. ಲಘುಖಿನ್ನತೆ.

೨. ಉದ್ವಿಗ್ನತೆ.

೩. ನಾಚಿಕೆ.

೪. ಚಿಂತಿಸುವ ಗುಣ.

ಒಂದು ರಾತ್ರಿಯಲ್ಲಿ ಒಬ್ಬ ವ್ಯಕ್ತಿಗೆ ಸರಾಸರಿ ನಾಲ್ಕರಿಂದ ಐದುಗಂಟೆ ನಿದ್ರೆಯ ಆವಶ್ಯಕತೆಯಿದೆ.

## ಜೈವಿಕ ಉದ್ದೇಶ

ಅಸಮಕಾಲಿಕ ನಿದ್ದೆಯ ಅವಧಿಯಲ್ಲಿ ಬಿಗಡಾಯಿಸಿರುವ ನರ ಕೋಶಗಳ ರಿಪೇರಿ, ಪುನರ್ ಸಂಘಟನೆ ಮತ್ತು ಕಾರ್ಟೆಕ್ಸ್ (cortex)ನಲ್ಲಿ ಹೊಸ ಹೊಸ ನರಮಾರ್ಗಗಳ ನಿರ್ಮಾಣ ಸಾಗುತ್ತದೆ.

ಸಮಕಾಲಿಕ ನಿದ್ರೆಯ ಅವಧಿಯಲ್ಲಿ ಮಿದುಳು ನರವ್ಯವಸ್ಥೆಯ ಅತ್ಯವಶ್ಯಕ ಭಾಗಗಳಾದ ಆರ್.ಎನ್.ಎ. ಮುಂತಾದ ಪ್ರೊಟೀನುಗಳ ತಯಾರಿಕೆಯಲ್ಲಿ ತೊಡಗಿರುತ್ತದೆ.

ಖಿನ್ನ ರೋಗ (depression) ಉಗಮಕ್ಕೆ ಮಿದುಳಿನಲ್ಲಿ ಕ್ರಿಯಾಶೀಲ ನಾರ್‌ಎಪಿನೆಫ್ರಿನ್‌ನ ಪ್ರಮಾಣ ಕಡಿಮೆಯಾಗಿರುವುದೇ ಒಂದು ಮುಖ್ಯ ಕಾರಣವೆಂದು ಗುರುತಿಸಲಾಗಿದೆ. ಅಸಮಕಾಲಿಕ ನಿದ್ರೆಯ ಅವಧಿಯಲ್ಲಿ ನಾರ್‌ಎಪಿನೆಫ್ರಿನ್‌ನ ತಯಾರಿಕೆ ಹೆಚ್ಚಾಗುವುದರಿಂದ ಖಿನ್ನ ರೋಗಿಗಳ ರೋಗದ ಅವಧಿಯಲ್ಲಿ ಅಸಮಕಾಲಿಕ ನಿದ್ರೆಯ ಪ್ರಮಾಣ ಹೆಚ್ಚಾಗುತ್ತದೆ. ಖಿನ್ನ ರೋಗಿಗಳ ನಿದ್ರೆ ಮೇಲಿಂದ ಮೇಲೆ ಭಂಗವಾಗುವುದಕ್ಕೆ ಕಾರಣ ಕಡಿಮೆಯಾಗುವ ನಾರ್‌ಎಪಿನೆಫ್ರಿನ್‌ನ ಪ್ರಮಾಣದಲ್ಲಿದೆ.

## ನಿದ್ರೆ ಮತ್ತು ನಿದ್ರೆ ಗುಳಿಗೆಗಳು

ಇತ್ತೀಚಿನ ವರ್ಷಗಳಲ್ಲಿ ಮುಂದುವರಿದ ಪಾಶ್ಚಾತ್ಯ ದೇಶಗಳಲ್ಲಷ್ಟೇ ಅಲ್ಲ, ಭಾರತದಂತಹ ದೇಶಗಳಲ್ಲಿಯೂ ನಿದ್ರೆಯ ಗುಳಿಗೆಗಳನ್ನು ತೆಗೆದುಕೊಳ್ಳುವವರ ಸಂಖ್ಯೆ ಹೆಚ್ಚಾಗುತ್ತಿದೆ. ಆಧುನಿಕ ಜೀವನದ ಒತ್ತಡಗಳು ಮನಃಕ್ಲೇಶವನ್ನು ಹೆಚ್ಚಿಸುತ್ತವೆ. ಸಹಜ ನಿದ್ರೆಯ ಮನಃಸ್ಥಿತಿ ಬಹಳಷ್ಟು ಜನರಲ್ಲಿ ಕಡಿಮೆಯಾಗಿ ನಿದ್ರೆಯ ಗುಳಿಗೆ ತೆಗೆದುಕೊಂಡರೆ ಒಂದಿಷ್ಟು ನಿದ್ರೆ

**ಮಾನಸಿಕ ರೋಗಗಳಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ತುಂಬ ಸುಭಗವಾಗಿ, ಸರಳ ಶೈಲಿಯಲ್ಲಿ ಬರೆಯಬಲ್ಲ ಕೆಲವೇ ಲೇಖಕರಲ್ಲಿ ಡಾ. ಪ್ರಕಾಶ ಕೊಣ್ಣೂರ ಅವರು ಮೊದಲ ಸಾಲಿನಲ್ಲಿ ನಿಲ್ಲುತ್ತಾರೆ. ನಿರೂಪಣೆ ತುಂಬ ನೇರ. ಭಾಷೆ ತುಂಬ ಹದನಾದದ್ದು. ವೈದ್ಯಕೀಯ ಲೇಖನಗಳಲ್ಲದೆ ಅವರು ಈಗಾಗಲೇ ತಮ್ಮ ಇಥಿಯೋಪಿಯಾ ಮುಂತಾದ ದೇಶಗಳಲ್ಲಿನ ಅನುಭವಗಳನ್ನು 'ಕಸ್ತೂರಿ'ಯ ಓದುಗರಿಗೆ ನೀಡಿದ್ದಾರೆ. ಈ ಅಂಕಣಕ್ಕಾಗಿ ಡಾ. ಕೊಣ್ಣೂರರು ಬರೆದ 'ಮನೋದೈಹಿಕ ರೋಗಗಳು', 'ನೆನಪು ಮತ್ತು ಮರೆವು' ಲೇಖನಗಳನ್ನಿಲ್ಲಿ ಸ್ಮರಿಸಬಹುದು. ಪ್ರಸ್ತುತ ಲೇಖನದಲ್ಲಿ ಅವರು 'ನಿದ್ರೆ ಮತ್ತು ಕನಸುಗಳು' ಕುರಿತು ವಿಶದವಾಗಿ ವಿವರಿಸಿದ್ದಾರೆ.**

ಬರುತ್ತದೆ ಎನ್ನುವ ಜನ ಹೆಚ್ಚಾಗುತ್ತಿದ್ದಾರೆ. ಹೀಗಾಗಿ ನಿದ್ರೆಯ ಗುಳಿಗೆಗಳ ಮತ್ತು ಶಾಮಕಗಳ ಕ್ರಮಬದ್ಧ ಮತ್ತು ಅಕ್ರಮ ಮಾರಾಟ ದಿನೇ ದಿನೇ ಹೆಚ್ಚಾಗುತ್ತಿದೆ.

ಹಾಗಾದರೆ ನಿದ್ರೆ ಗುಳಿಗೆಗಳ ಸಾಧಕ ಬಾಧಕಗಳೇನು ?

ನಿದ್ರೆಯ ಗುಳಿಗೆಗಳು ಸಮಕಾಲಿಕ ನಿದ್ರೆಯನ್ನುಂಟು ಮಾಡುತ್ತವೆ. ಅಸಮಕಾಲಿಕ ನಿದ್ರೆಯ ಪ್ರಮಾಣ ಕಡಿಮೆಯಾಗುತ್ತದೆ. ಕಾಂಪೋಸ್ ಮೊದಲಾದ ಬೆಂಝೋಡಾಯಝೆ ಪಮ್ ಗುಂಪಿನ ಗುಳಿಗೆಗಳು ಅಸಮಕಾಲಿಕ ನಿದ್ರೆಯನ್ನಷ್ಟೆ ಅಲ್ಲ ಸಮಕಾಲಿಕ ನಿದ್ರೆಯ ನಾಲ್ಕನೆಯ ಹಂತವನ್ನೂ ಕಡಿಮೆಮಾಡುತ್ತವೆ.

## ನಿದ್ರಾರಹಿತರ ಪ್ರಕಾರಗಳು

ಡಾಕ್ಟರರು ತಮ್ಮ ದವಾಖಾನೆಗಳಲ್ಲಿ ನಿದ್ರೆಯ ಅಭಾವದಿಂದ ಬಳಲುವ ರೋಗಿಗಳನ್ನು ಪರೀಕ್ಷಿಸಿ ನಿದ್ರಾರಾಹಿತ್ಯದ ಕೆಳಗಿನ ಪ್ರಕಾರಗಳನ್ನು ವಿಂಗಡಿಸಿದ್ದಾರೆ.

೧. ಮನೋಶಾರೀರಕ ನಿದ್ರಾನಾಶ.
೨. ಉದ್ವಿಗ್ನತಾಜನ್ಯ ಮತ್ತು ವ್ಯಕ್ತಿತ್ವ ದೋಷಜನ್ಯ ನಿದ್ರಾನಾಶ.
೩. ಖಿನ್ನತಾಜನ್ಯ ನಿದ್ರಾನಾಶ.
೪. ಉನ್ಮಾದಜನ್ಯ ನಿದ್ರಾನಾಶ.
೫. ವಿಭ್ರಮ ರೋಗಜನ್ಯ ನಿದ್ರಾನಾಶ.
೬. ಔಷಧ ಜನ್ಯ ನಿದ್ರಾನಾಶ. (ಇದರಲ್ಲಿ ನರೋತ್ತೇಜಕಜನ್ಯ ನಿದ್ರಾನಾಶ ಮತ್ತು ನರಾವರೋಧಿಜನ್ಯ ನಿದ್ರಾನಾಶ ಎಂಬೆರಡು ಪ್ರಕಾರಗಳನ್ನು ಮಾಡಬಹುದು.)
೭. ಶ್ವಾಸದೋಷಜನ್ಯ ನಿದ್ರಾನಾಶ.
೮. ನಿಶಾ ಸ್ನಾಯುಕಂಪನಜನ್ಯ ನಿದ್ರಾನಾಶ.
೯. ಮದ್ಯಪಾನಜನ್ಯ ನಿದ್ರಾನಾಶ.
೧೦. ಮದ್ಯಪಾನ ವಂಚನಾಜನ್ಯ ನಿದ್ರಾನಾಶ.
೧೧. ದೈಹಿಕ ರೋಗಜನ್ಯ ನಿದ್ರಾನಾಶ.
೧೨. ವಿಷಪದಾರ್ಥಜನ್ಯ ನಿದ್ರಾನಾಶ.
೧೩. ಪರಿಸರಜನ್ಯ ನಿದ್ರಾನಾಶ.

## ಅತಿ ನಿದ್ರೆಗೆ ಸಂಬಂಧಿಸಿದ ರೋಗಗಳು

ಅತಿನಿದ್ರೆಗೆ ಸಂಬಂಧಿಸಿದಂತೆ ಈ ಕೆಳಗಿನ ರೋಗಗಳನ್ನು ಗುರುತಿಸಲಾಗಿದೆ.

೧. ನಾರ್ಕೋಲೆಪ್ಸಿ,
೨. ಕೆಟಪ್ಲೆಕ್ಸಿ.
೩. ಸ್ಲೀಪ್ ಪೆರಲಿಸಿಸ್.
೪. ಕ್ಲಾಯಿನ್ ಲೆವಿನ್ ಸಿಂಡ್ರೋಮ್.
೫. ಪಿಕ್‌ವಿಕಿಯನ್ ಸಿಂಡ್ರೋಮ್.
೬. ನಿದ್ರೆಯಲ್ಲಿ ನಡೆಯುವಿಕೆ.

ಮೇಲಿನ ರೋಗಗಳ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ಕೆಳಗಿನಂತೆ ವಿವರಿಸಬಹುದು.

**ನಾರ್ಕೋಲೆಪ್ಸಿ (ನಿದ್ರಾ ಅಪಸ್ಮಾರ):** ಈ ರೋಗದಲ್ಲಿ ಹಗಲು ಹೊತ್ತಿನಲ್ಲಿಯೂ ರೋಗಿ ನಿದ್ರೆಯ ಸ್ಥಿತಿಯಲ್ಲಿಯೇ ಇರುತ್ತಾನೆ.

**ಕೆಟಪ್ಲೆಕ್ಸಿ: (ಜಂಘಾಬಲನಾಶ):** ನಾರ್ಕೋಲೆಪ್ಸಿಯ ರೋಗಿಗಳಲ್ಲಿ ಕೆಲವರು ಕೆಲವು

ಸಲ ನಿಂತ ಸ್ಥಳದಲ್ಲಿಯೇ ಸ್ನಾಯುಗಳ ಬಲಗುಂದಿ ಕೆಲವು ಸೆಕೆಂಡು ಅಥವಾ ನಿಮಿಷಗಳ ಕಾಲ ಕೆಳಗೆ ಕುಸಿಯುತ್ತಾರೆ. ಆದರೆ ಎಚ್ಚರ ಕಳೆದುಕೊಳ್ಳುವುದಿಲ್ಲ.

**ನಿದ್ರಾ ನಿರ್ವಿಣ್ಣತೆ (ಸ್ಲೀಪ್ ಪೆರಲಿಸಿಸ್):** ನಾರ್ಕೋಲೆಪ್ಸಿಯಿಂದ ಬಳಲುವ ರೋಗಿಗಳಲ್ಲಿಯೂ ಕಂಡು ಬರುವ ಈ ವೈಕಲ್ಪದಲ್ಲಿ ರೋಗಿಯು ನಿದ್ರೆಯಿಂದ ಎಚ್ಚರಗೊಳ್ಳುತ್ತಿರುವಂತೆಯೆ ಶರೀರದ ಸ್ನಾಯುಗಳೆಲ್ಲವೂ ನಿರ್ವಿಣ್ಣಗೊಂಡು ಯಾವದೇ ಚಲನವಲನವನ್ನು ಮಾಡಲು ಅಶಕ್ತನಾಗುತ್ತಾನೆ. ಈ ನಿದ್ರಾನಿರ್ವಿಣ್ಣತೆ ಸಾಮಾನ್ಯವಾಗಿ ಒಂದು ನಿಮಿಷದಷ್ಟು ಕಾಲ ಮಾತ್ರ ಇರುತ್ತದೆ.

**ಹಿಪ್ನಗಾಗಿಕ್ ದೃಷ್ಟಿ ಭ್ರಾಂತಿ:** ಈ ಸ್ಥಿತಿಯಲ್ಲಿ ನಿದ್ರೆಯಿಂದ ಎಚ್ಚರಗೊಳ್ಳುವುದಕ್ಕೆ ಮೊದಲು ಕೆಲವು ನಿಮಿಷಗಳು ಕನಸುಗಳಂತೆ ದೃಶ್ಯಲೋಕ ಗೋಚರಿಸುತ್ತದೆ.

**ಪಿಕ್‌ವಿಕಿಯನ್ ಸಿಂಡ್ರೋಮ್:** ಈ ವ್ಯಾಧಿ ಸಣ್ಣ ವಯಸ್ಸಿನವರಿಗೇ ಬರುವ ಸಂಭವ ಹೆಚ್ಚು. ಸಾಮಾನ್ಯವಾಗಿ ಆತ ದಪ್ಪಗೆ, ದುಂಡುದುಂಡಾಗಿದ್ದು ಯಾವಾಗಲೂ ನಿದ್ರೆಯ ಮಂಪರಿನಲ್ಲೇ ಇರುತ್ತಾನೆ. ನೀಲ ಅಧರ ಮತ್ತು ನೀಲ ಅಂಗುಲ (cyanosis), ಬಲಹೃದಯದ ಅಶಕ್ತಿ, (CCF) ಸ್ನಾಯುಗಳ ಹೊಡೆದುಕೊಳ್ಳುವಿಕೆ (mascular twisting) ಮತ್ತು ರಕ್ತ ದೌರ್ಬಲ್ಯ ಸಹ ಈ ರೋಗದಲ್ಲಿ ಕಂಡುಬರುತ್ತವೆ.

ಮೇಲಿನ ಎಲ್ಲ ರೋಗಗಳಿಗೂ ಸಾಮಾನ್ಯವಾಗಿರುವ ಅಂಶಗಳೆಂದರೆ ನಡುಮಿದುಳು ಮತ್ತು ಮಿದುಳಿನ ಕಾಂಡದಲ್ಲಿರುವ ಜಾಗ್ರತಾವಸ್ಥೆ ಮತ್ತು ನಿದ್ರಾವಸ್ಥೆಯನ್ನು ನಿಯಂತ್ರಿಸುವ ನರಬೀಜಕೋಶಗಳಲ್ಲಿಯ ದೋಷಗಳು.

## ಅತಿ ನಿದ್ರೆಯನ್ನು ಉಂಟು ಮಾಡುವ ಇತರ ರೋಗಗಳು

೧. ನಡುಮಿದುಳು ಮತ್ತು ಪುಚ್ಛ ಹೈಪೋಥಲಮಸ್‌ನ ಅರ್ಬುದಗಳು.
೨. ಮಿದುಳಿನ ರಕ್ತನಾಳಗಳ ದೋಷಗಳು.
೩. ಅವಸಾನಗತಿಯ (degenerative) ರೋಗಗಳು.
೪. ತಲೆಗೆ ಪೆಟ್ಟು.
೫. ಎನ್‌ಸೆಫಲೈಟಿಸ್ (ಮಿದುಳಿನ ನಂಜು.)
೬. ಇತರ ನಂಜುಗಳು (infections.)
೭. ಥೈರಾಯಿಡ್ ಗ್ರಂಥಿಯ ರೋಗ.
೮. ಕುಶಿಂಗ್ ರೋಗ.
೯. ಮಧುಮೇಹ.
೧೦. ಮಾನಸಿಕ ಕ್ಲೇಶಗಳಿಂದ ಉಂಟಾಗುವ ಅತಿನಿದ್ರಾ ದೋಷ.

ದೈಹಿಕ ಕಾರಣಗಳಿಂದ ಉಂಟಾಗುವ ಅತಿನಿದ್ರಾ ದೋಷಗಳಿಗಿಂತಲೂ ಮಾನಸಿಕ ಕಾರಣಗಳಿಂದ ಉಂಟಾಗುವ ಅತಿನಿದ್ರಾ ದೋಷಗಳ ಸಂಖ್ಯೆಯೇ ಹೆಚ್ಚು. ಮನೋವಿಭ್ರಮೆ ಮತ್ತು ಉನ್ಮಾದ ರೋಗಿಗಳಲ್ಲಿ ಅತಿ ನಿದ್ರಾಸ್ಥಿತಿ ಕಂಡುಬರುತ್ತದೆ. ಖಿನ್ನ ರೋಗ, ಉದ್ವಿಗ್ನತೆ ಮತ್ತು ವಿಕಲ್ಪಗಳಲ್ಲಿಯೂ ಈ ಲಕ್ಷಣ ಕಾಣಿಸಿಕೊಳ್ಳುತ್ತದೆ.

## ನಿದ್ರೆಯಲ್ಲಿ ನಡೆಯುವುದು

ನಿದ್ರಿಸುವಾಗ ಎದ್ದು ನಡೆದಾಡುವ ದೋಷ ಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಹೆಣ್ಣುಮಕ್ಕಳಿಗಿಂತ ಗಂಡುಮಕ್ಕಳಲ್ಲಿ ಈ ದೋಷ ಕಂಡುಬರುವ ಸಾಧ್ಯತೆ ಹೆಚ್ಚು. ಇದು ಆನುವಂಶಿಕವಾಗಿಯೂ ಕಾಣಿಸಿಕೊಳ್ಳುವುದುಂಟು.

ನಿದ್ರಿಸುತ್ತಿರುವ ವ್ಯಕ್ತಿ ಹಠಾತ್ತನೆ ಎದ್ದು ನಡೆಯತೊಡಗುತ್ತಾನೆ. ಕೆಲವು ಸಲ ಓಡುವುದನ್ನೂ ಜಿಗಿಯುವುದನ್ನೂ, ಏನನ್ನೋ ಹುಡುಕುವುದನ್ನೂ ಮಾಡಬಹುದು. ಈ ದೋಷ ಸಹ ಮಾನಸಿಕ ಕಾರಣಗಳಿಂದಲೇ ಹೆಚ್ಚು ಕಾಣಿಸಿಕೊಳ್ಳುತ್ತದೆ. ಅತಿ ಉದ್ವಿಗ್ನತೆಗೆ ಒಳಗಾದ ಸೈನಿಕರು, ಚಿಕ್ಕಂದಿನಲ್ಲಿಯೇ ತಂದೆ-ತಾಯಿಗಳನ್ನು ಕಳೆದುಕೊಂಡ ಮಕ್ಕಳು, ಮಕ್ಕಳಲ್ಲಿ ಶಾಲೆಯ ಬದಲಾವಣೆ, ತಾಯಿಗೆ ಮತ್ತೊಂದು ಮಗುವಿನ ಜನನ, ಖಿನ್ನತೆ, ವ್ಯಕ್ತಿತ್ವ ದೋಷಗಳು ಮೊದಲಾದವು ನಿದ್ರೆಯಲ್ಲಿ ನಡೆಯಲು ಕಾರಣವಾಗಬಹುದು.

ನಿದ್ರೆಯಲ್ಲಿ ನಡೆಯುವುದು ಸಾಮಾನ್ಯವಾಗಿ ಅಸಮಕಾಲಿಕ ನಿದ್ರೆಯ ವೇಳೆಯಲ್ಲಿ.

## ರಾತ್ರಿಯ ಭಯಭೀತಿ

ಇದು ಸಾಮಾನ್ಯವಾಗಿ ಸಮಕಾಲಿಕ ನಿದ್ರೆಯ ಮೂರನೆ ಮತ್ತು ನಾಲ್ಕನೆಯ ಘಟ್ಟಗಳಲ್ಲಿಯೂ ಕೆಲವು ಸಲ ಅಸಮಕಾಲಿಕ ನಿದ್ರೆಯಲ್ಲಿಯೂ ಉಂಟಾಗುತ್ತದೆ. ಇದು ಸಹ ಮಕ್ಕಳಲ್ಲಿಯೇ ಹೆಚ್ಚಾಗಿ ಕಂಡುಬರುವ ರೋಗ. ಮಗು ನಿದ್ರೆಯಲ್ಲಿ ಒಮ್ಮೆಲೇ ಚೀರುತ್ತದೆ, ನರಳುತ್ತದೆ ಮತ್ತು ಅತೀವ ಹೆದರಿಕೆಯನ್ನು ವ್ಯಕ್ತಪಡಿಸುತ್ತದೆ. ಕೆಲವು ಸಮಯದ ನಂತರ ಮತ್ತೆ ನಿದ್ರೆಯಲ್ಲಿ ಮಗ್ನವಾಗುತ್ತದೆ.

## ನಿದ್ರಾದೋಷಗಳ ಉಪಚಾರ

ನಿದ್ರೆಗೆ ಸಂಬಂಧಿಸಿದಂತೆ ಉಂಟಾಗುವ ಸಮಸ್ಯೆಗಳ ದೊಡ್ಡ ಪಟ್ಟಿಯನ್ನೇ ಈ ಮೊದಲು ಉಲ್ಲೇಖಿಸಲಾಗಿದೆ. ನಿದ್ರಾದೋಷಗಳಿಗೆ ಅನೇಕ ಕಾರಣಗಳಿರುವುದರಿಂದ ನಿರ್ದಿಷ್ಟವಾದ ಕಾರಣಗಳನ್ನು ಕಂಡುಹಿಡಿದು ಸಮರ್ಪಕ ಉಪಚಾರ ಪಡೆಯುವುದು ಸೂಕ್ತ.

## ಕನಸುಗಳು, ಜೈವಿಕ ಗಡಿಯಾರ, ಸರ್ಕೇಡಿಯನ್ ಲಯಗಳು ಇತ್ಯಾದಿ.

ಚೆರ್ನೋಬಿಲ್ ಅಣುವಿದ್ಯುತ್ ಸ್ಥಾವರ ದುರಂತ.

ಭೋಪಾಳದ ಅನಿಲ ದುರಂತ.

ಅಮೆರಿಕದ ಥ್ರೀಮೈಲ್ ಐಲ್ಯಾಂಡ್ ಅಣು ದುರಂತ.

ಕಳೆದ ದಶಕದಲ್ಲಿಯ ಈ ಮೂರು ಪ್ರಮುಖ ದುರಂತಗಳಲ್ಲಿ ಕಣ್ಣಿಗೆ ಹೊಡೆಯುವ ಒಂದು ಸಂಗತಿ ಯಾವುದು ?

ಈ ಮೂರೂ ಘಟನೆಗಳು ಬೆಳಗಿನ ಜಾವದ ವೇಳೆಯಲ್ಲಿ ನಡೆದವು.

ಬೆಳಗಿನ ಜಾವಕ್ಕೂ ಅಪಘಾತಕ್ಕೂ ಏನು ಸಂಬಂಧ ?

ನಿದ್ರಾ ತಜ್ಞರೂ ಮನೋವೈದ್ಯರೂ ಆದ ಡಾ. ಬಿಲ್ ಡಿಮೆಂಟ್ ಅವರ ಪ್ರಕಾರ ಅಪಘಾತದ ಸಮಯದಲ್ಲಿ ಈ ಮೂರೂ ಸ್ಥಳಗಳಲ್ಲಿ ರಾತ್ರಿಯ ಪಾಳಿಯ ಕೆಲಸದ ಮೇಲಿದ್ದ ಸಿಬ್ಬಂದಿ ನಿದ್ರಾದೇವಿಯ ಗಾಢ ಆಲಿಂಗನದಲ್ಲಿದ್ದರು.

ರಾತ್ರಿಯ ಕೊನೆಯ ಪ್ರಹರದ ವೇಳೆಯು ಗಾಢ ನಿದ್ರೆಯ ತಡೆಯಲಾಗದ ಅಲೆಗಳನ್ನು ಸೃಷ್ಟಿಸುತ್ತದೆ. ಗಾಢ ನಿದ್ರೆಯಲ್ಲಿದ್ದ ಈ ಮೂರೂ ಕಾರ್ಖಾನೆಗಳ ಸಿಬ್ಬಂದಿಯಿಂದ ಆದ ಕರ್ತವ್ಯಲೋಪವೇ ಈ ಮೂರೂ ಅಪಘಾತಗಳಿಗೆ ಕಾರಣ.

ಹಾಗಾದರೆ ನಿದ್ರೆ ಇನ್ನೂ ಎಂತೆಂತಹ ಅವಾಂತರಗಳನ್ನು ಸೃಷ್ಟಿಸುತ್ತದೆ ?

"ಅರವತ್ತೇಳು ವರ್ಷಗಳ ಫೂಟ್‌ಬಾಲ್ ಆಟಗಾರ ಡೊನಾಲ್ಡ್ ಡಾರ್ಫ್ ತನ್ನ ಹಿಂದಿನ ಆಟಗಾರ ಕೊಟ್ಟ ಚೆಂಡನ್ನು ಒದೆಯುತ್ತ ಗೋಲಿನ ಕಡೆ ಮುನ್ನುಗ್ಗುತ್ತಿದ್ದಂತೆ ಎರಡುನೂರಾ

ಎಂಬತ್ತು ಕಿಲೋ ತೂಕದ ಎದುರಾಳಿ ತಂಡದ ರಕ್ಷಣಾ ಆಟಗಾರ ಚೆಂಡನ್ನು ತಡೆಯಲು ಎದುರು ಬಂದ. ಈ ಆಜಾನುಬಾಹು ತನ್ನ ಹಾದಿಯಲ್ಲಿ ಅಡ್ಡ ಬರುತ್ತಿರುವುದನ್ನು ನೋಡಿದ ಡೊನಾಲ್ಡ್ ಹೆದರದೆ ಅವನಿಗೆ ತನ್ನ ಹೆಗಲು ತೋರಿಸಲು ನಿರ್ಧರಿಸಿದ. ಇಬ್ಬರ ದೇಹಗಳೂ ಸೆಣಸಾಡಿದವು.''

ಮುಂದೆ ಆದುದನ್ನು ನಿವೃತ್ತ ಕಿರಾಣಿ ಅಂಗಡಿ ಮಾಲಿಕ ಡೊನಾಲ್ಡ್‌ನ ಬಾಯಿಯಿಂದಲೇ ಕೇಳಿ:

''ಮುಂದಿನ ಕ್ಷಣಾರ್ಧದಲ್ಲಿಯೇ ನಾನು ನನ್ನ ಮಂಚದಿಂದ ಉರುಳಿ ಅದರ ಬದಿಗೆ ಇದ್ದ ನಿಲುವುಗನ್ನಡಿಯ ಮೇಲೆ ಬಿದ್ದಿದ್ದೆ. ನಿಲುವುಗನ್ನಡಿ ಮತ್ತು ಅದರ ಬದಿಗೆ ಇಟ್ಟಿದ್ದ ವಸ್ತುಗಳು ಪುಡಿಪುಡಿಯಾಗಿದ್ದವು. ಆಗ ರಾತ್ರಿಯ ಒಂದೂವರೆ ಗಂಟೆಯಾಗಿತ್ತು. ನನಗೂ ಮೈತುಂಬ ಗಾಯಗಳಾಗಿದ್ದವು.''

ಡೊನಾಲ್ಡನಿಗೆ ಕನಸು ಕಾಣುತ್ತಿರುವಂತೆಯೇ ಕನಸನ್ನು ಅಭಿನಯಿಸಿಬಿಡುವ ದೋಷ ಬಹಳ ದಿನಗಳಿಂದಲೂ ಇತ್ತು. ಆದರೆ ಮೇಲ್ಕಾಣಿಸಿದ ಅನುಭವದ ನಂತರ ಅವನಿಗೆ ತನ್ನ ದೋಷದ ಗಂಭೀರತೆಯ ಅರಿವಾಗಿ ಸಮೀಪದಲ್ಲಿದ್ದ ನಿದ್ರಾ ದೋಷಗಳ ಚಿಕಿತ್ಸಾ ಕೇಂದ್ರದಲ್ಲಿ ತೋರಿಸಿದ.

ಡೊನಾಲ್ಡನ ನಿದ್ರೆ ಮತ್ತು ಕನಸುಗಳನ್ನು ಅಭ್ಯಸಿಸಿದ ಮನೋವೈದ್ಯರಿಗೆ ಆಶ್ಚರ್ಯಕಾರಕ ಪರಿಣಾಮಗಳು ಕಾದಿದ್ದವು. ಸಾಮಾನ್ಯವಾಗಿ ನಿದ್ರೆಯಲ್ಲಿ ಕನಸು ಕಾಣುತ್ತಿರುವಾಗ ಸ್ನಾಯುಗಳು ಬಲಹೀನವಾಗಿ ದೇಹ ನಿಶ್ಚೇಷ್ಟಿತವಾಗಿರುತ್ತದೆ. ಆದರೆ ಡೊನಾಲ್ಡ್‌ನ ವಿಷಯದಲ್ಲಿ ಪ್ರಕೃತಿಯ ಈ ವರದಾನ ಕೆಲಸ ಮಾಡುತ್ತಿರಲಿಲ್ಲ. ಆದ್ದರಿಂದಲೇ ಡೊನಾಲ್ಡ್ ತನ್ನ ಕನಸುಗಳನ್ನು 'ಜೀವಿಸುತ್ತಿದ್ದ.'

## ಹಗಲು ಶಾಂತ, ರಾತ್ರಿ ಭ್ರಾಂತ

ಇಂತಹ ಕನಸುಗಳನ್ನು ಜೀವಿಸುವಂತಹ ವ್ಯಕ್ತಿಗಳ ಸಂಖ್ಯೆ ನಗಣ್ಯವಾಗಿಲ್ಲವೆಂಬುದನ್ನು ಇಂತಹ ರೋಗಿಗಳನ್ನು ಉಪಚರಿಸುತ್ತಿರುವ ಆಸ್ಪತ್ರೆಗಳ ಅಂಕಿಸಂಖ್ಯೆಗಳು ತೋರಿಸುತ್ತಿವೆ. ಹಗಲಿನಲ್ಲಿ ಸೌಮ್ಯ ಸ್ವಭಾವದ, ಶಾಂತ ಮನೋವೃತ್ತಿಯ ಇಂತಹ ವ್ಯಕ್ತಿಗಳು ರಾತ್ರಿ ಕನಸುಗಳನ್ನು ಕಾಣುತ್ತಿದ್ದಂತೆಯೇ ಹಾಸಿಗೆಗಳಿಂದ ಎದ್ದು ತಮ್ಮ ಹೆಂಡಂದಿರನ್ನು ಥಳಿಸುತ್ತಿದ್ದರು. ಕಿಟಕಿಗಳನ್ನು ಮುರಿಯುತ್ತಿದ್ದರು. ಗೋಡೆಗಳನ್ನು ಕೊರೆಯುತ್ತಿದ್ದರು. ಈ ಎಲ್ಲ ರೋಗಿಗಳು ಸಾಮಾನ್ಯವಾಗಿ ಮುದುಕರೇ ಆಗಿದ್ದರೂ ಕನಸುಗಳ ವೇಳೆಯಲ್ಲಿ ಅಸಾಮಾನ್ಯ ದೈಹಿಕ ಬಲ ಮತ್ತು ಚಾಕಚಕ್ಯಗಳನ್ನು ಪ್ರದರ್ಶಿಸುತ್ತಿದ್ದರು. ಎಪ್ಪತ್ತೇಳು ವರ್ಷ ವಯಸ್ಸಿನ ಒಬ್ಬ ಪಾದ್ರಿ ಇಂತಹ ವೇಳೆಯಲ್ಲಿ ಹಾಸಿಗೆಯಿಂದ ಪಕ್ಷಿಯಂತೆ ಹಾರಿ ಕೆಳಗೆ ಬೀಳುತ್ತಿದ್ದುದನ್ನು ಅವನ ವೃದ್ಧ ಹೆಂಡತಿ ವಿವರಿಸುತ್ತಿದ್ದಳು.

ಮುಂದುವರಿದ ದೇಶಗಳಲ್ಲಿಯ ನಿದ್ರಾ ಅಭ್ಯಾಸ ಮತ್ತು ಸಂಶೋಧನ ಕೇಂದ್ರಗಳು ಕುತೂಹಲಕಾರಕ ಮಾಹಿತಿಗಳನ್ನು ಹೊರಗೆಡಹಲು ಆರಂಭಿಸಿವೆ:

೧. ನಾವು ನಿದ್ರೆಯನ್ನು ಸರಿಯಾಗಿ ಉಪಯೋಗಿಸುತ್ತಿಲ್ಲ.

ರಾತ್ರಿ ಪಾಳಿಯ ಕೆಲಸ ಮತ್ತು ದೀರ್ಘ ಕೆಲಸದ ಅವಧಿಗಳು ಕೆಲಸಗಾರರ ಕಾರ್ಯ ಸಾಮರ್ಥ್ಯವನ್ನು ಕುಗ್ಗಿಸುತ್ತಿವೆ. ತರಹತರಹದ ದೈಹಿಕ ರೋಗಗಳನ್ನು ಹುಟ್ಟುಹಾಕುತ್ತಿವೆ. ರಾತ್ರಿ ಕೆಲಸದ ವೇಳೆಯಲ್ಲಿ ನಿದ್ರೆಯನ್ನು ತಡೆದುಕೊಳ್ಳಲಾಗದ ಕೆಲಸಗಾರರು ಕಾರ್ಯನಿರತರಾಗಿದ್ದಾಗಲೇ ಅಪಘಾತಗಳಿಗೆ ಕಾರಣರಾಗುವುದು ಹೆಚ್ಚಾಗುತ್ತದೆ.

೨. ನಮ್ಮ ಮಿದುಳಿನ ಆಳದಲ್ಲಿ ಗಡಿಯಾರದ ಕೆಲಸ ಮಾಡುವ ಕೇಂದ್ರಗಳಿವೆ. ಈ ಗಡಿಯಾರಗಳು ನಮ್ಮ ದೈನಂದಿನ ಜೀವನದ ಗತಿಯನ್ನು ನಿರ್ಧರಿಸುತ್ತವೆ. ಈ ಗಡಿಯಾರದ ಚಲನವಲನದಲ್ಲಿ ಏರುಪೇರಾದಾಗ ಜ್ವಾಜ್ವಲ್ಯಮಾನ ಪ್ರಕಾಶವನ್ನು ಉಪಯೋಗಿಸಿ ಈ ಗಡಿಯಾರದ ಮುಳ್ಳುಗಳನ್ನು ಎಂದಿನ ಸ್ಥಿತಿಗೆ ಮರಳಿಸಲು ಸಾಧ್ಯವಿದೆ.

ಜ್ವಾಜ್ವಲ್ಯಮಾನ ಪ್ರಕಾಶೋಪಚಾರವು ಮುದುಕರಿಗೆ ನಿದ್ರೆ ಬರಿಸಲು ಸಹಾಯವಾಗುತ್ತದೆ.

ರಾತ್ರಿ ಪಾಳಿಯ ಕೆಲಸಗಾರರೂ ದೀರ್ಘ ವಿಮಾನ ಪ್ರಯಾಣದಿಂದ ಬಳಲಿದ ಯಾತ್ರಿಕರೂ 'ಪ್ರಕಾಶೋಪಚಾರ'ದಿಂದ ಲಾಭ ಹೊಂದುತ್ತಾರೆ.

೩. ನಿದ್ರಾದೋಷಗಳ ಉಪಚಾರಕ್ಕಾಗಿ ಬರುವವರಲ್ಲಿ ಅತಿನಿದ್ರೆಯಿಂದ ಬಳಲುವವರೇ ಹೆಚ್ಚು.

೪. ನಿದ್ರೆಗೂ ಮಾನಸಿಕ ರೋಗಗಳಿಗೂ ಅತಿ ಹತ್ತಿರದ ಸಂಬಂಧವಿದೆ.

೫. ಅಸಮಕಾಲಿಕ ನಿದ್ರೆಯ ಅವಧಿಯು ರಾತ್ರಿಯಲ್ಲಿ ಕನಸುಗಳು ಬೀಳುವ ಅವಧಿಯನ್ನು ಅವಲಂಬಿಸಿರುತ್ತವೆ.

## ನಿದ್ರೆ ಮತ್ತು ಆಯುಷ್ಯ

ನಮ್ಮ ಆಯುಷ್ಯ ನಾವು ದಿನಾಲೂ ಎಷ್ಟು ವೇಳೆ ಮಲಗುತ್ತೇವೆ ಎಂಬುದನ್ನು ಆಧರಿಸಿದೆ. ದಿನಕ್ಕೆ ೭ರಿಂದ ೮ ಗಂಟೆ ನಿದ್ರೆ ಮಾಡುವ ವ್ಯಕ್ತಿ ಸಾಮಾನ್ಯವಾಗಿ ದೀರ್ಘಾಯುವಾಗುತ್ತಾನೆ. ಕಡಿಮೆ ನಿದ್ರಿಸುವವರಲ್ಲಿ ಹೃದಯದ ವಿವಿಧ ರೋಗಗಳು ಬೇಗ ಕಾಣಿಸಿಕೊಳ್ಳುತ್ತವೆ. ಶೀತಬಾಧೆಯನ್ನು ಬಿಟ್ಟರೆ ನಿದ್ರೆಯ ಬಗೆಗಿನ ತೊಂದರೆಗಳೇ ಮಾನವ ಕುಲವನ್ನು ಬಾಧಿಸುವ ಅತಿ ದೊಡ್ಡ ರೋಗ.

## ಸರ್ಕೇಡಿಯನ್ ಲಯಗಳು

ಶಿಕಾಗೋ ವಿಶ್ವವಿದ್ಯಾಲಯದ ಡಾಕ್ಟರ್ ನಥೇನಿಯಲ್ ಕ್ಲೈಟನ್‌ರನ್ನು ನಿದ್ರಾ ಸಂಶೋಧನೆಯ ಜನಕರೆಂದು ಹೇಳಬಹುದು. ಡಾ. ಕ್ಲೈಟನ್ನರ ಶಿಷ್ಯ ಯೂಜೀನ್ ಅಝೆರಿನ್‌ಸ್ಕಿ ತನ್ನ ಎಂಟು ವರ್ಷದ ಮಗನ ಮೇಲೆಯೇ ನಿದ್ರಾ ಸಂಶೋಧನೆಯ ಪ್ರಯೋಗಗಳನ್ನು ಮಾಡಿದ. ಈ ಹುಡುಗ ದೀರ್ಘನಿದ್ರೆಯಲ್ಲಿದ್ದಾಗ ಕಾಲಕಾಲಕ್ಕೆ ಅವನ ಕಣ್ಣುಗಳು ಚಲಿಸುವುದು ಕಾಣಿಸಿತು. ಎಚ್ಚರದಲ್ಲಿದ್ದಾಗ ಕಣ್ಣುಗಳು ಚಲಿಸುವಂತೆಯೇ ಅವು ಚಲಿಸುತ್ತಿದ್ದವು. ಈ ಬಗೆಗೆ ಸಂಶೋಧನೆಯನ್ನು ಮುಂದುವರಿಸಿದ್ದೇ ಅಸಮಕಾಲಿಕ ಮತ್ತು ಸಮಕಾಲಿಕ ನಿದ್ರೆಗಳ ಶೋಧಕ್ಕೆ ಕಾರಣವಾಯಿತು.

ನಮ್ಮ ಪ್ರತಿಯೊಬ್ಬರ ದೇಹವೂ ಮೇಲೆ ಉಲ್ಲೇಖಿಸಿದ ಜೈವಿಕ ಗಡಿಯಾರದ ನಿಯಮದಂತೆ ಚಲಿಸುತ್ತದೆ. ಈ ಗಡಿಯಾರದ ಒಂದು ವರ್ತುಳ ಸುಮಾರು ಇಪ್ಪತ್ತೈದು ಗಂಟೆಗಳನ್ನು ಒಳಗೊಂಡಿರುತ್ತದೆ. ನಮ್ಮ ದೇಹದಲ್ಲಿಯ ವಿವಿಧ ಚಟುವಟಿಕೆಗಳು ನಿಯಮಬದ್ಧವಾಗಿಯೂ ಕಾಲಬದ್ಧವಾಗಿಯೂ ರೂಪಿಸಲ್ಪಟ್ಟಿದ್ದು, ರಕ್ತದಲ್ಲಿ ಹಾರ್ಮೋನುಗಳ ಹರಿಯುವಿಕೆ, ಹರಿಯುವ ರಕ್ತದ ಪರಿಮಾಣದಲ್ಲಿ ಏರಿಳಿತ, ಮೂತ್ರವಿಸರ್ಜನೆ ಮತ್ತು ದೇಹದ ಉಷ್ಣತಾಮಾನದಲ್ಲಿ ಏರಿಳಿತ ಇವೆಲ್ಲವೂ ಪೂರ್ವನಿರ್ಧಾರಿತ ಕ್ರಮದಲ್ಲಿ ನಡೆಯುತ್ತವೆ. ಈ ಜೈವಿಕ ಲಯಗಳಿಗೆ 'ಸರ್ಕೇಡಿಯನ್ ರಿದಮ್ಸ್' ಎಂದು ಕರೆಯಲಾಗಿದೆ.

ಹಾರ್ವರ್ಡ್ ವಿಶ್ವವಿದ್ಯಾಲಯದ ಮೆಡಿಕಲ್ ಸ್ಕೂಲಿನ ಡಾಕ್ಟರ್ ಚಾರ್ಲ್ಸ್ ಝೀಸ್ಲರ್ ಅವರ ಪ್ರಕಾರ ರಾತ್ರಿಯ ವೇಳೆಯಲ್ಲಿ ನಮ್ಮೆಲ್ಲರ ದೇಹಗಳ ಉಷ್ಣತಾಮಾನ ಕಡಿಮೆಯಾ

ಗುತ್ತ ಹೋಗುತ್ತದೆ. ದೇಹದ ಉಷ್ಣತೆ ಕಡಿಮೆಯಾಗುತ್ತಿದ್ದ ಹಾಗೆ ನಿದ್ರೆಯ ಗಾಢತೆ ಜಾಸ್ತಿಯಾಗುತ್ತ ಹೋಗುತ್ತದೆ. ರಾತ್ರಿಯ ಉತ್ತರಾರ್ಧದಲ್ಲಿ ದೇಹದ ಉಷ್ಣತೆ ತನ್ನ ಕನಿಷ್ಠ ಮಟ್ಟವನ್ನು ತಲಪುತ್ತದೆ. ಉಷ್ಣತೆ ನಿಮ್ನ ಮಟ್ಟವನ್ನು ಕಾಣುತ್ತಿದ್ದಂತೆ ತಡೆಯಲಾರದ ನಿದ್ರೆಯ ಮಂಪರು ರಾತ್ರಿಪಾಳಿಯ ಕೆಲಸಗಾರರನ್ನು ಆವರಿಸತೊಡಗುತ್ತದೆ. ಕೆಲಸದ ಮೇಲಿರುವ ವ್ಯಕ್ತಿ ಎಷ್ಟೇ ವಿರೋಧಿಸಿದರೂ ನಿದ್ರೆ ಅವನನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತದೆ. ರಾತ್ರಿ ಪಾಳಿಯ ಕೆಲಸಗಾರರಿಗೆ ರಾತ್ರಿಯ ಉತ್ತರಾರ್ಧದ ವೇಳೆಯು ಒಂದು ಕಂಟಕವಾಗಿ ಪರಿಣಮಿಸುತ್ತದೆ. ಚೆರ್ನೋಬಿಲ್ ಮತ್ತು ಇತರ ದುರಂತಗಳು ರಾತ್ರಿಯ ಕೊನೆಯ ಪ್ರಹರದಲ್ಲಿಯೇ ಘಟಿಸಿರುವುದು ಕೇವಲ ಕಾಕತಾಳೀಯವಲ್ಲ.

## ನಿದ್ರೆಯ ಮಂಪರಿನಲ್ಲಿಯೇ....

ಅಮೆರಿಕದ ಆಸ್ಪತ್ರೆಗಳಲ್ಲಿ ಕೆಲಸ ಮಾಡುವ ಕಿರಿಯ ವೈದ್ಯರನ್ನು ಒಂದೇ ಸಮನೆ ಮೂವತ್ತಾರು ಗಂಟೆಗಳ ಕಾಲ ತುರ್ತು ವಿಭಾಗಕ್ಕೆ ಹಾಕಲಾಗುತ್ತಿತ್ತು. ಕೆಲವು ಸಮಯದ ಹಿಂದೆ ನ್ಯೂಯಾರ್ಕಿನ ಒಂದು ಆಸ್ಪತ್ರೆಯಲ್ಲಿ ಒಬ್ಬ ರಾತ್ರಿಯ ಕೊನೆಯ ಪ್ರಹರದ ವೇಳೆಯಲ್ಲಿ ಡಾಕ್ಟರರ ಸಹಾಯ ಸಿಗದೆ (ಡಾಕ್ಟರ್ ನಿದ್ರೆಗೆ ಒಳಗಾಗಿದ್ದ) ಸಾವಿಗೀಡಾದ ನಂತರ, ಅನೇಕ ಆಸ್ಪತ್ರೆಗಳಲ್ಲಿ ಒಂದೇ ಸವನೆ ಮೂವತ್ತಾರು ಗಂಟೆಗಳ ಬದಲು ಈಗ ಹನ್ನೆರಡು ಗಂಟೆಗಳ ಕೆಲಸವನ್ನು ಕಿರಿಯ ಡಾಕ್ಟರರಿಗೆ ಕೊಡಲು ಆರಂಭವಾಗಿದೆ. ರೈಲು ಚಾಲಕರನ್ನು ರಾತ್ರಿಯ ವೇಳೆ ಪರೀಕ್ಷಿಸಿದಾಗ ಅರ್ಧಕ್ಕರ್ಧ ಜನರು ಅರ್ಧ ನಿದ್ರೆಯಲ್ಲಿಯೇ ಗಾಡಿಗಳನ್ನು ನಡೆಸುತ್ತಿರುವುದು ಕಂಡುಬಂದಿದೆ. ಜಗತ್ತಿನಾದ್ಯಂತ ನಡೆಸಿರುವ ಸಮೀಕ್ಷೆಗಳ ಪ್ರಕಾರ ನೂರಕ್ಕೆ ಎಂಬತ್ತರಷ್ಟು ರಾತ್ರಿ ಪಾಳಿಯ ಕೆಲಸಗಾರರು ನಿದ್ರೆಯ ಮಂಪರಿನಲ್ಲಿಯೇ ಕೆಲಸ ಮಾಡುತ್ತಾರೆ ಎನ್ನುವುದು ಸ್ಪಷ್ಟವಾಗಿದೆ.

ಜಗತ್ತಿನ ಬೇರೆ ಬೇರೆ ಭಾಗಗಳು ತಮ್ಮ ರಾತ್ರಿಗಳ ವೇಳೆಯ ಪ್ರಕಾರ ಬೇರೆ ಬೇರೆ ವೇಳಾವಲಯಗಳಲ್ಲಿ ವಿಭಾಗಿಸಲ್ಪಟ್ಟಿವೆ. ಉದಾಹರಣೆಗೆ ಜಪಾನಿನ ವೇಳೆ ಭಾರತಕ್ಕಿಂತ ಸುಮಾರು ಆರು ತಾಸು ಮುಂದೆ ಇದ್ದು, ಇಂಗ್ಲೆಂಡಿನ ವೇಳೆ ಐದೂವರೆ ಗಂಟೆ ಮತ್ತು ಪೂರ್ವ ಅಮೆರಿಕದ ವೇಳೆ ಹನ್ನೆರಡು ಗಂಟೆ ಹಿಂದೆ ಇದೆ. ಒಬ್ಬ ಕಾರ್ಖಾನೆಯ ಕೆಲಸಗಾರನನ್ನು ಒಂದು ವಾರ ದಿನದ ಪಾಳಿಗೆ, ಮತ್ತೊಂದು ವಾರ ಸಂಜೆಯ ಪಾಳಿಗೆ ಮತ್ತು ಮೂರನೆಯ ವಾರ ರಾತ್ರಿಯ ಪಾಳಿಯ ಕೆಲಸಕ್ಕೆ ಹಾಕಿದರೆ ಅವನ ದೈಹಿಕ ಗಡಿಯಾರ ಮೂರು ವಾರಗಳಲ್ಲಿ ಮೂರು ಬೇರೆ ಬೇರೆ ವೇಳಾವಲಯಗಳಿಗೆ ಹೊಂದಿಕೊಳ್ಳಬೇಕಾಗುತ್ತದೆ. ಇದು ಅವನ ನಿದ್ರೆಗೆ ಕಾರಣವಾಗುವುದಷ್ಟೇ ಅಲ್ಲ, ಅಪಘಾತಗಳಿಗೂ ಕಾರಣವಾಗಬಹುದು.

ಇದೇ ಸಂಗತಿ ಅಂತಾರಾಷ್ಟ್ರೀಯ ಸಾರಿಗೆಗಳನ್ನು ನಡೆಸುವ ವಿಮಾನಗಳ ಚಾಲಕರಿಗೂ ಅನ್ವಯಿಸುತ್ತದೆ. ಮುಂಬಯಿಯಿಂದ ನ್ಯೂಯಾರ್ಕಿಗೆ ವಿಮಾನ ನಡೆಸುವ ಚಾಲಕ ಹದಿನೆಂಟು ಗಂಟೆಗಳ ಅವಧಿಯಲ್ಲಿ ಹಲವಾರು ವೇಳಾವಲಯಗಳ ಮೂಲಕ ಹಾಯ್ದು ಹೋಗುತ್ತಾನೆ. ಅವನ ಜೈವಿಕ ಗಡಿಯಾರದ ಕಾರ್ಯ ಇದರಿಂದ ಅಸ್ತವ್ಯಸ್ತಗೊಳ್ಳುವುದಲ್ಲದೆ ಅಪಘಾತಕ್ಕೂ ಕಾರಣವಾಗುವ ಸಾಧ್ಯತೆಯಿರುತ್ತದೆ. ಬೆಳಗಿನ ಜಾವದಲ್ಲಿ ವಿಮಾನಗಳನ್ನು ನಿಲ್ದಾಣದಲ್ಲಿ ಇಳಿಸುತ್ತಿರುವಾಗ ನಿದ್ರೆಯ ಮಬ್ಬಿನಲ್ಲಿರುವ ಚಾಲಕರ ತಪ್ಪಿನಿಂದ ಅನಾಹುತಗಳಾಗಿರುವ ಉದಾಹರಣೆಗಳೂ ಇವೆ.

ಹಾಗಾದರೆ ರಾತ್ರಿಯ ಕೆಲಸ ಅನಿವಾರ್ಯವಾಗುತ್ತಿರುವ ಇಂದಿನ ಯುಗದಲ್ಲಿ ಇಂತಹ

ಅಪಘಾತಗಳಿಗೆ ಯಾವ ಉಪಾಯವೂ ಇಲ್ಲವೆ? ಇದೆ. ಇತ್ತೀಚೆಗೆ ಡಾಕ್ಟರ್ ಚಾರ್ಲ್ಸ್ ಝೀಸ್ಲರ್ ದೇಹದ ಉಷ್ಣತೆಯನ್ನು ಬದಲಾಯಿಸಿ ನಿದ್ರಾಗಡಿಯಾರವನ್ನು ಪುನರ್‌ವ್ಯವಸ್ಥೆಗೊಳಿಸುವ ವಿಧಾನವನ್ನು ಕಂಡುಹಿಡಿದಿದ್ದಾರೆ. ಪ್ರಕಾಶಮಾನವಾದ ದೀಪಗಳನ್ನು ಉಪಯೋಗಿಸಿ ಸೂರ್ಯೋದಯ ಮತ್ತು ಸೂರ್ಯಾಸ್ತಗಳ ವಾತಾವರಣವನ್ನು ನಿರ್ಮಿಸಿ ದೇಹದ ಉಷ್ಣತೆಯಲ್ಲಿ ಈ ದೀಪಗಳ ನೆರವಿನಿಂದ ಬದಲಾವಣೆ ಮಾಡಿ ವ್ಯಕ್ತಿಯನ್ನು ಬೇಕಾದ ವೇಳಾವಲಯಕ್ಕೆ ಜೋಡಿಸುವ ವ್ಯವಸ್ಥೆಯೀಗ ಆಗುತ್ತಿದೆ.

ಸರ್ಕೇಡಿಯನ್ ಲಯಗಳ ಸಂಶೋಧಕರು ಅವುಗಳನ್ನು ಎಲ್ಲ ಪ್ರಾಣಿ, ಪಕ್ಷಿ ವನಸ್ಪತಿಗಳಲ್ಲೂ ಕಂಡರು. ಈ ಎಲ್ಲ ಜೀವಿಗಳಲ್ಲಿಯೂ ಪ್ರಕಾಶಮಾನವಾದ ಬೆಳಕಿನಿಂದ ಸರ್ಕೇಡಿಯನ್ ಲಯಗಳಲ್ಲಿ ಬೇಕಾದ ಬದಲಾವಣೆ ತರಬಹುದೆಂಬುದು ತಿಳಿದುಬಂತು. ಮನುಷ್ಯರಲ್ಲಿ ಈ ಸರ್ಕೇಡಿಯನ್ ಲಯಗಳ ಕೇಂದ್ರ ದೃಷ್ಟಿ ನರಗಳ ಸಂಧಿಸ್ಥಾನದ ಮೇಲೆ ಪವಡಿಸಿರುವುದನ್ನು ಕಂಡುಹಿಡಿಯಲಾಗಿದೆ.

## ನಿದ್ರೆಯ ಸಮಸ್ಯೆಗಳಿಗೆ ಪರಿಹಾರ....

ಡಾ. ಝೀಸ್ಲರ್‌ರ ಪ್ರಯೋಗಗಳು ಕೆಲವು ಉಪಯುಕ್ತ ಅಂಶಗಳನ್ನು ಹೊರಗೆಡಹಿವೆ. ಮಾನವ ಗಡಿಯಾರಗಳನ್ನು ಸೌರ ದಿವಸಕ್ಕೆ ಸಮಕಾಲಿಕವಾಗಿ ಸಾದಾ ಕೋಣೆಯ ಬೆಳಕಿನಿಂದಲೇ ಮಾಡಬಹುದೆಂಬುದೂ ಗೊತ್ತಾಗಿದೆ. ಅಮೆರಿಕದ ಒಲಂಪಿಕ್ ಕಮಿಟಿ ಜೆಟ್ ಪ್ರಯಾಣ ಮಾಡಿಬರುವ ಕ್ರೀಡಾಪಟುಗಳ ಪ್ರವಾಸದ ದಣಿವನ್ನು ನಿವಾರಿಸುವ ಉಪಾಯದ ಶೋಧನೆಯಲ್ಲಿತ್ತು. ಇತ್ತ ಅಮೆರಿಕದ ವಾಯುಪಡೆ ತನ್ನ ಚಾಲಕರ ನಿದ್ರೆಯ ಸಮಸ್ಯೆಗಳಿಗೆ ಪರಿಹಾರ ಬಯಸುತ್ತಿತ್ತು. ಅಮೆರಿಕದ ರಾಷ್ಟ್ರೀಯ ವೃದ್ಧಾಪ್ಯ ಅಭ್ಯಾಸ ಸಂಸ್ಥೆ ವೃದ್ಧರಲ್ಲಿಯ ನಿದ್ರೆಯ ದೋಷಗಳಿಗೆ ಉಪಚಾರದ ಹುಡುಕಾಟದಲ್ಲಿತ್ತು. ಈ ಎಲ್ಲ ಸಂಸ್ಥೆಗಳ ಆರ್ಥಿಕ ನೆರವಿನಿಂದ ಡಾ. ಝೀಸ್ಲರರು ಬಾಸ್ಟನ್‌ನಲ್ಲಿ ಹೆಣ್ಣುಮಕ್ಕಳ ಆಸ್ಪತ್ರೆಯಲ್ಲಿ ಸಂಶೋಧನೆಗಾಗಿ ಒಂದು ಜಾಗವನ್ನು ಪಡೆದು ಡೊರೋಥಿ ಮಾರ್ಟಿನ್ ಎಂಬ ಅರವತ್ತಾರು ವರ್ಷದ ಮಹಿಳೆಯ ಮೇಲೆ ಪ್ರಯೋಗಗಳನ್ನಾರಂಭಿಸಿದರು. ಈ ಮಹಿಳೆಯ ಮೇಲೆ ಪ್ರಕಾಶಮಾನವಾದ ಬೆಳಕಿನ ಪ್ರಯೋಗ ಮಾಡಿ ಅವಳ ಆರುತಾಸುಗಳ ಅಸ್ತವ್ಯಸ್ತವಾದ ಜೈವಿಕ ಗಡಿಯಾರವನ್ನು ಸರಿಪಡಿಸಿದರು.

ಮೈಕಲ್ ಲಾಂಗ್ ಎಂಬ ನಿದ್ರಾಸಂಶೋಧಕ ಜಪಾನಿನಿಂದ ಅಮೆರಿಕದ ಪೂರ್ವದಂಡೆಯಾದ ಬಾಸ್ಟನ್‌ವರೆಗೆ ಜೆಟ್ ವಿಮಾನದಿಂದ ಪ್ರಯಾಣಿಸಿದ. ಅವನ ಪ್ರಯಾಣ ಹನ್ನೊಂದು ವೇಳಾವಲಯಗಳನ್ನು ಕ್ರಮಿಸಿತ್ತು. ಅವನ ಜೈವಿಕ ಗಡಿಯಾರದಲ್ಲಿ ಸುಮಾರು ಹನ್ನೊಂದು ತಾಸುಗಳಷ್ಟು ಏರುಪೇರಾಗಿತ್ತು. ಅವನ ಕಣ್ಣುಗಳಿಗೆ ಸೂರ್ಯಪ್ರಕಾಶ ಬಡಿಯದಿರಲು ಪ್ರಯಾಣದ ಅವಧಿಯಲ್ಲಿ ಬೆಸುಗಾರರ ಕನ್ನಡಕ (welders goggles)ಗಳನ್ನು ಧರಿಸುವಂತೆ ಸೂಚಿಸಲಾಗಿತ್ತು. ಬಾಸ್ಟನ್ನಿಗೆ ಆಗಮಿಸಿದ ಮೇಲೆ ಕಿಟಕಿ, ಗಡಿಯಾರ, ಟಿ.ವಿ., ರೇಡಿಯೋ, ವೃತ್ತಪತ್ರಿಕೆಗಳು ಇವಾವುವೂ ಇಲ್ಲದ ಕೋಣೆಯಲ್ಲಿ ಅವನನ್ನು ಇರಿಸಲಾಯಿತು. ಅವನ ಜೈವಿಕ ಗಡಿಯಾರ ಇನ್ನೂ ಟೋಕಿಯೋದ ವೇಳೆಯ ಪ್ರಮಾಣದ ಮೇಲಿಂದಲೇ ಚಲಿಸುತ್ತಿದೆಯೆಂಬುದು ಅವನ ಮೈಯ ತಾಪಮಾನವನ್ನು ಅಳೆದಾಗ ಕಂಡುಬಂತು.

ಚಿಕ್ಕ ಚಿಕ್ಕ ಭೋಜನಗಳನ್ನು ಕೊಡುತ್ತಾ ಲಾಂಗ್‌ನನ್ನು ನಿದ್ರಾರಹಿತವಾಗಿ ೧೯ ಗಂಟೆಗಳ ಕಾಲ ಇಡಲಾಯಿತು. ಅವನನ್ನು ಮಂಚಕ್ಕೆ ನಿರ್ಬಂಧಿತಗೊಳಿಸಲಾಗಿತ್ತು. ಈ ಅವಧಿಯ

ನಂತರ ಎಂಟು ಅಡಿಗಳಷ್ಟು ಎತ್ತರವಾದ ಪ್ರಕಾಶಮಾನವಾದ ಅರವತ್ತು ದೀಪಗಳ ಪ್ರಕಾಶವನ್ನು ಲಾಂಗ್‌ನ ಮೈಮೇಲೆ ಬಿಡಲಾಯಿತು. ಮೂರು ಹಗಲು ಮತ್ತು ಮೂರು ರಾತ್ರಿಗಳ ಪ್ರಕಾಶೋಪಚಾರದ ನಂತರ ಲಾಂಗ್ ತನ್ನ ಹನ್ನೆರಡು ಗಂಟೆಗಳ ಜೈವಿಕ ಗಡಿಯಾರದ ಅಸ್ತವ್ಯಸ್ತತೆಯನ್ನು ಸರಿಪಡಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದ. ಯಾವುದೆ ಉಪಚಾರವಿಲ್ಲದಿದ್ದರೆ ಜೈವಿಕ ಗಡಿಯಾರ ಸರಿಯಾಗಲು ಹನ್ನೊಂದು ದಿನಗಳನ್ನು ತೆಗೆದುಕೊಳ್ಳುತ್ತಿತ್ತು.

## ಪ್ರಕಾಶೋಪಚಾರದ ರಹಸ್ಯ

ಈ ಪ್ರಕಾಶಮಾನವಾದ ಬೆಳಕಿನ ಉಪಚಾರದ ರಹಸ್ಯವೇನು? ಈ ಉಪಚಾರದ ಮೊದಲ ಎರಡು ದಿನಗಳಲ್ಲಿ ದೇಹದ ತಾಪಮಾನದ ಏರಿಳಿತಗಳು ಕಡಿಮೆಯಾಗುತ್ತ ಬಂದು ಒಂದು ಸಮಸ್ಥಿತಿಯನ್ನು ಮುಟ್ಟುತ್ತವೆ. ಮೂರನೆ ದಿನದ ಉಪಚಾರದ ನಂತರ ದೇಹ ತನ್ನ ಮೊದಲಿನ ತಾಪಮಾನವನ್ನು ಮರಳಿ ಪಡೆದುಕೊಂಡು ತಾನಿರುವ ಜಾಗದ ವೇಳೆಯೊಂದಿಗೆ ಸಮಕಾಲಿಕತೆಯನ್ನು ಪಡೆಯುತ್ತದೆ.

ಸಂಜೆ ಮತ್ತು ಮುಂಜಾವಿನಲ್ಲಿಯ ದೇಹದ ತಾಪಮಾನಗಳಲ್ಲಿಯ ಅಂತರ ಹೆಚ್ಚಾದಷ್ಟು ನಿದ್ರೆಯ ಅವಧಿ ಹೆಚ್ಚಾಗುವುದು ಕಂಡುಬಂದಿದೆ.

ಕಾರಖಾನೆಗಳಲ್ಲೂ ವಿಮಾನಗಳಲ್ಲೂ ಪ್ರಕಾಶಮಾನವಾದ ಬೆಳಕನ್ನು ಉಪಯೋಗಿಸಿ ದೇಹದ ತಾಪಮಾನಗಳನ್ನು ಬದಲಿಸುವುದರಿಂದ ರಾತ್ರಿ ಪಾಳಿಯ ಕೆಲಸಗಾರರು, ವಿಮಾನ ಚಾಲಕರು ಮತ್ತು ವಿಮಾನ ಪ್ರಯಾಣಿಕರ ನಿದ್ರೆ ಅಸ್ತವ್ಯಸ್ತವಾಗುವುದನ್ನು ಸರಿಪಡಿಸುವ ಸಾಧ್ಯತೆಗಳು ಈ ಪ್ರಯೋಗಗಳ ನಂತರ ಕಂಡುಬರತೊಡಗಿವೆ.

ಖಿನ್ನ ರೋಗಿಗಳ ಮನಃಸ್ಥಿತಿಯೂ ಅರ್ಧನಿದ್ರೆ ಮತ್ತು ಅರ್ಧ ಎಚ್ಚರದ ಸ್ಥಿತಿಯನ್ನು ಹೋಲುವುದರಿಂದ ಅವರ ದೇಹದ ತಾಪಮಾನಗಳನ್ನು ಸೂಕ್ತವಾಗಿ ಬದಲಾಯಿಸಿದರೆ ಖಿನ್ನ ರೋಗದ ಉಪಚಾರದಲ್ಲಿಯೂ ಸಹಾಯವಾಗುವ ಸಂಭವಗಳಿವೆ.

ಜೊಂಪು ನಿದ್ರೆ (napping) ತೆಗೆದುಕೊಳ್ಳುವುದು ಜೈವಿಕವಾಗಿ ಸೂಕ್ತವಾಗಿದೆಯೆಂಬುದು ಕಂಡುಬಂದಿದೆ.

ಶಕ್ತಿಯ ಉಳಿತಾಯಕ್ಕೆ ನಿದ್ರೆ ಅವಶ್ಯ. ನಿದ್ರೆ ನಮ್ಮ ಆಹಾರದ ಅವಶ್ಯಕತೆಯನ್ನು ಕಡಿಮೆ ಮಾಡುತ್ತದೆ. ●



Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**

Registerd with the Registrar of Newspapers for India under No. 3633/57.

KASTURI, Kannada Digest Reg No. KRNG-43,
Licence No. L2120 - WPP No. 33 Price - Rs. 6-00




# ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆಯ ಪ್ರಕಟಣೆಗಳು

## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಮಾದರಿ | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಷಿ<br>ಅನುವಾದ: ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೧೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ. ಸೌಲಭ್ಯ ಇರುವುದಿಲ್ಲ.

**ಪ್ರಸಾರಾಂಗ ವ್ಯವಸ್ಥಾಪಕರು**

ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.
ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.

Cover Printed at: Bharat Photo Offset Works, Dharwad. Ph: 40545